# ಜಾಗತೀಕರಣ ಸಂದರ್ಭದ ಕನ್ನಡ ಸಣ್ಣಕಥೆಗಳ ಮುಖ್ಯ ಪ್ರವೃತ್ತಿಗಳು

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಇವರಿಗೆ ಸಾದರಪಡಿಸಿರುವ ಸಂಶೋಧನಾ ಮಹಾಪ್ರಬಂಧ)


ಸಂಶೋಧಕರು

**ಗಂಗಾಧರ ಈರಣ್ಣ ಮಾಸನಕಟ್ಟಿ**

ಮಾರ್ಗದರ್ಶಕರು

**ಡಾ. ಶ್ರೀಮತಿ ವಿನಯಾ ಜಿ. ನಾಯಕ**

ಜೆ.ಎಸ್.ಎಸ್. ಡಾ. ಡಿ.ವೀರೇಂದ್ರ ಹೆಗ್ಗಡೆ

ಸಂಶೋಧನ ಕೇಂದ್ರ,

ವಿದ್ಯಾಗಿರಿ. ಧಾರವಾಡ-೦೪






ಸಾಹಿತ್ಯ ಅಧ್ಯಯನ ವಿಭಾಗ

ಭಾಷಾನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬





ಜನತಾ ಶಿಕ್ಷಣ ಸಮಿತಿಯ

. ವೀರೇಂದ್ರ ಹೆಗ್ಗಡೆ ಸಂಶೋಧನಾ ಕೇಂದ್ರ

ವಿದ್ಯಾಗಿರಿ. ಧಾರವಾಡ-೦೪

(ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಮಾನ್ಯತೆ ಪಡೆದ ಸಂಸ್ಥೆ)


೨೦೧೯

# "ಜಾಗತೀಕರಣ ಸಂದರ್ಭದ ಕನ್ನಡ ಸಣ್ಣಕಥೆಗಳ ಮುಖ್ಯ ಪ್ರವೃತ್ತಿಗಳು"

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಇವರಿಗೆ ಸಾದರಪಡಿಸಿರುವ ಸಂಶೋಧನಾ ಮಹಾಪ್ರಬಂಧ)


ಸಂಶೋಧಕರು

**ಗಂಗಾಧರ ಈರಣ್ಣ ಮಾಸನಕಟ್ಟಿ**

ಮಾರ್ಗದರ್ಶಕರು

**ಡಾ. ಶ್ರೀಮತಿ ವಿನಯಾ ಜಿ. ನಾಯಕ**

ಜೆ.ಎಸ್.ಎಸ್. ಡಾ. ಡಿ.ವೀರೇಂದ್ರ ಹೆಗ್ಗಡೆ

ಸಂಶೋಧನ ಕೇಂದ್ರ,

ವಿದ್ಯಾಗಿರಿ, ಧಾರವಾಡ-೦೧





**ಸಾಹಿತ್ಯ ಅಧ್ಯಯನ ವಿಭಾಗ**

**ಭಾಷಾನಿಕಾಯ**

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

**ವಿದ್ಯಾರಣ್ಯ - ೫೮೩ ೨೭೬**

ಜನತಾ ಶಿಕ್ಷಣ ಸಮಿತಿಯ

ಡಾ. ಡಿ. ವೀರೇಂದ್ರ ಹೆಗ್ಗಡೆ ಸಂಶೋಧನಾ ಕೇಂದ್ರ,

ವಿದ್ಯಾಗಿರಿ, ಧಾರವಾಡ-೦೧

(ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಮಾನ್ಯತೆ ಪಡೆದ ಸಂಸ್ಥೆ)

**೨೦೧೯**

## ಪ್ರಮಾಣ ಪತ್ರ

ನಾನು ಗಂಗಾಧರ ಈರಣ್ಣ ಮಾಸನಕಟ್ಟಿ **"ಜಾಗತೀಕರಣ ಸಂದರ್ಭದ ಕನ್ನಡ ಸಣ್ಣಕಥೆಗಳ ಮುಖ್ಯ ಪ್ರವೃತ್ತಿಗಳು"** ಎಂಬ ಶೀರ್ಷಿಕೆಯ ಪ್ರೌಢ ಮಹಾಪ್ರಬಂಧವನ್ನು ಡಾ. ಶ್ರೀಮತಿ. ವಿನಯಾ ಜಿ. ನಾಯಕ ಮಾರ್ಗದರ್ಶಕರು, ಜೆ.ಎಸ್.ಎಸ್. ಡಾ. ಡಿ.ವೀರೇಂದ್ರ ಹೆಗ್ಗಡೆ ಸಂಶೋಧನ ಕೇಂದ್ರ, ವಿದ್ಯಾಗಿರಿ, ಧಾರವಾಡ. ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪಿಎಚ್.ಡಿ. ಪದವಿಗಾಗಿ ಹಂಪಿ ವಿಶ್ವವಿದ್ಯಾಲಯ ಭಾಷಾ ನಿಕಾಯದ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ನನ್ನ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇಡಿಯಾಗಿ ಇಲ್ಲವೇ ಬಿಡಿಯಾಗಿ ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ: : ವಿದ್ಯಾರಣ್ಯ ಹಂಪಿ

ದಿನಾಂಕ : ೦೯-೨೦೧೯

**ಗಂಗಾಧರ ಈರಣ್ಣ ಮಾಸನಕಟ್ಟಿ**
ಸಂಶೋಧಕರು
ಜೆ.ಎಸ್.ಎಸ್. ಡಾ. ಡಿ.ವೀರೇಂದ್ರ ಹೆಗ್ಗಡೆ
ಸಂಶೋಧನ ಕೇಂದ್ರ,
ವಿದ್ಯಾಗಿರಿ, ಧಾರವಾಡ-೦೪

# ದೃಢೀಕರಣ ಪತ್ರ

ಶ್ರೀ. ಗಂಗಾಧರ ಈರಣ್ಣ ಮಾಸನಕಟ್ಟಿ **"ಜಾಗತೀಕರಣ ಸಂದರ್ಭದ ಕನ್ನಡ ಸಣ್ಣಕಥೆಗಳ ಮುಖ್ಯ ಪ್ರವೃತ್ತಿಗಳು"** ಎಂಬ ಶೀರ್ಷಿಕೆಯ ಪ್ರೌಢ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪಿಎಚ್.ಡಿ. ಪದವಿಗಾಗಿ ಹಂಪಿ ವಿಶ್ವವಿದ್ಯಾಲಯ ಭಾಷಾ ನಿಕಾಯದ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಇಡಿಯಾಗಿ ಇಲ್ಲವೇ ಬಿಡಿಯಾಗಿ ಎಲ್ಲಿಯೂ ಪ್ರಕಟಗೊಳಿಸಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ: : ವಿದ್ಯಾರಣ್ಯ ಹಂಪಿ
ದಿನಾಂಕ : ೦೯-೨೦೧೯

**ಡಾ. ಶ್ರೀಮತಿ ವಿನಯಾ ಜಿ. ನಾಯಕ**
ಮಾರ್ಗದರ್ಶಕರು
ಜೆ.ಎಸ್.ಎಸ್. ಡಾ. ಡಿ.ವೀರೇಂದ್ರ ಹೆಗ್ಗಡೆ
ಕನ್ನಡ ಸಂಶೋಧನ ಕೇಂದ್ರ,
ವಿದ್ಯಾಗಿರಿ, ಧಾರವಾಡ

## ಪರಿವಿಡಿ


ಅಧ್ಯಾಯ–ಒಂದು ೦೧–೦೯

ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

ಅಧ್ಯಾಯ–ಎರಡು ೧೦–೨೨

ಇದುವರೆಗೆ ನಡೆದ ಅಧ್ಯಯನಗಳ ತಾತ್ವಿಕ ಸಮೀಕ್ಷೆ.

ಅಧ್ಯಾಯ–ಮೂರು ೨೩–೫೩

ಪರಿಕಲ್ಪನಾತ್ಮಕ ಚರ್ಚೆ : ಸೃಜನಶೀಲತೆಯ ಭೂಮಿಕೆಯಾಗಿ

ಅಧ್ಯಾಯ–ನಾಲ್ಕು ೫೪–೭೬

ಸಣ್ಣಕಥೆ : ಈ ತನಕದ ನಡಿಗೆ

ಅಧ್ಯಾಯ–ಐದು ೭೭–೨೩೯

ಪ್ರಮುಖ ಪ್ರವೃತ್ತಿಗಳು

೫:೧ ಬಂಡವಾಳದ ಆಕ್ರಮಣ

೫:೨ ಅಂಚಿನಲ್ಲಿರುವ ಅರೆಜೀವಗಳು

೫:೩ ಮಾರುಕಟ್ಟೆಯಲ್ಲಿ ತೂಗುವ ಸಂಬಂಧಗಳು

೫:೪ ಬೆಂಕಿಗೆ ಚಿಮುಕಿಸಿದ ಹನಿಗಳು

ಅಧ್ಯಾಯ–ಆರು ೨೪೦–೨೫೧

ಸಮಾರೋಪ

೬:೧ ಫಲಿತಗಳು

೬:೨ ಅಧ್ಯಯನದ ಸಾಧ್ಯತೆಗಳು

ಅನುಬಂಧಗಳು ೨೫೨–೨೬೪

೧. ಪ್ರಾಥಮಿಕ ಆಕರಗಳು

೨. ಪರಾಮರ್ಶನ ಗ್ರಂಥಗಳು

೩. ಅಧ್ಯಯನ ಪತ್ರಿಕೆ ಮತ್ತು ಜಾಲತಾಣಗಳು

(ಇಂಟರ್‌ನೆಟ್ ವೆಬ್‌ಸೈಟ್‌ಗಳು)

೪. ನಿಘಂಟುಗಳು ಮತ್ತು ವಿಶ್ವಕೋಶಗಳು

## ಅಧ್ಯಯನದ ಉದ್ದೇಶ, ಸ್ವರೂಪ ಹಾಗೂ ವ್ಯಾಪ್ತಿ

ಸಾಹಿತ್ಯದ ಅಧ್ಯಯನವು ಪೂರ್ಣ ಅರ್ಥದಲ್ಲಿ ಸಾಮಾಜಿಕ ಹಾಗೂ ಸಾಂಸ್ಕೃತಿಕ ಗತ-ವರ್ತಮಾನಗಳ ಅಧ್ಯಯನವೇ ಆಗಿರುತ್ತದೆ. ಸಾಹಿತ್ಯ ಬದುಕಿನ ಗತಿಬಿಂಬ, ಬದುಕಿನ ಪ್ರತಿಬಿಂಬ ಎಂಬ ಮಾತು ಹಳೆಯದು. ಅದರ ಸತ್ವ ಹಳೆಯದಲ್ಲ. ಕನ್ನಡ ಸಾಹಿತ್ಯವು ಈ ಸಾಂಸ್ಕೃತಿಕ ಚರಿತ್ರೆಯ ಮಹತ್ವದ ದಾಖಲೆಯಾಗಿಯೇ ಪ್ರತಿನಿಧಿತಗೊಂಡಿದೆ. ಸಾಂಸ್ಕೃತಿಕ ಚರಿತ್ರೆಯು ತನ್ನ ಹೊರ ಆವರಣದ ಒಳಗಡೆ ಜನರ ಕಥನವನ್ನು ಒಡಮೂಡಿಸಿ ತಂದಿದೆ. ಸಾಹಿತ್ಯವು ಕಾಲ-ದೇಶಗಳ ಉತ್ಪನ್ನವಾಗಿರುತ್ತದೆ. ಹಾಗಾಗಿ ಸಾಹಿತ್ಯದ ಅಧ್ಯಯನವು ಆ ಕಾಲದೇಶಗಳ ಅಧ್ಯಯನವೂ ಆಗಿರುತ್ತದೆ. ಸಾವಿರಾರು ವರ್ಷಗಳ ಕನ್ನಡ ಸಾಹಿತ್ಯವು ಇದಕ್ಕೆ ಪುರಾವೆಯಾಗಿ ಇದೆ. ಕವಿರಾಜಮಾರ್ಗದಿಂದ ಹತ್ತೊಂಭತ್ತನೆಯ ಶತಮಾನದ ಆಧುನಿಕ ಸಾಹಿತ್ಯದ ಪರಿಕಲ್ಪನೆಯವರೆಗೂ ಈ ಕ್ರಮ ನಡೆದುಬಂದಿದೆ.

ಆಧುನಿಕೋತ್ತರ ಕಾಲದಲ್ಲಿ ಸಂಭವಿಸಿದ ಜಾಗತಿಕ ಮಟ್ಟದ ವಿದ್ಯಮಾನಗಳು ಸಮಾಜದ ರೂಪ-ರಚನೆಯನ್ನು ಒಡೆದಿದೆ. ಜಾತಿ-ಧರ್ಮ-ವರ್ಗ-ಲಿಂಗಬೇಧಗಳನ್ನು ಸಹಜವೆಂದು ತಿಳಿದಿದ್ದ ಭಾರತೀಯ ಸಮಾಜವು ಜಾಗತೀಕರಣದ ಕಾರಣಕ್ಕಾಗಿ ವಿಭಿನ್ನ ರಚನೆಗಳಿಗೆ ಒಳಗಾಯಿತು. ಆಧುನಿಕ ಕಾಲವನ್ನು ಬಿಡುಗಡೆಯ ಕಾಲವೆಂದು ಕರೆಯಲಾಗಿದೆ. 'ಹಳೆಮತದ ಕೊಳೆಯೆಲ್ಲ ಹೊಸ ಮತಿಯ ಹೊಳೆಯಲ್ಲಿ ಕೊಚ್ಚಿ ಹೋಗಲಿ, ಬರಲಿ ವಿಜ್ಞಾನ ಬುದ್ಧಿ' (ಕುವೆಂಪು) ಎಂದು ಹಳೆಯ ಮತ-ಮೌಢ್ಯಗಳನ್ನು ತೊಡೆದುಕೊಳ್ಳುವ ಕನಸು-ಶ್ರಮಗಳ ಉತ್ಸಾಹದ ಕಾಲವದು. ಭಾರತೀಯ ಸಮಾಜ ತನ್ನ ಪ್ರಾಚೀನ ಸಂಕಟಗಳಿಂದ ತಾರತಮ್ಯದ ಕಾಯಿಲೆಯಿಂದ ಸುಧಾರಿಸಿಕೊಳ್ಳುವ ಪ್ರಯತ್ನದಲ್ಲಿತ್ತು. ಆದರೆ ಜಾಗತೀಕರಣ, ಖಾಸಗೀಕರಣ ಮತ್ತು ಉದಾರೀಕರಣಗಳೆಂಬ ಆರ್ಥಿಕ ನೀತಿಯು ಜಗತ್ತಿನ ಶ್ರೀಮಂತ ರಾಷ್ಟ್ರಗಳಿಗೆ ಹಿತಕಾರಿಯಾದ ಮೌಲ್ಯವಾಗಿ ಚಾಲ್ತಿಗೆ ಬಂದಿತು. ಶ್ರೀಮಂತ ರಾಷ್ಟ್ರಗಳು ಬಡ ರಾಷ್ಟ್ರಗಳು ಈ ಒಪ್ಪಂದಕ್ಕೆ ಒಳಪಡುವಂತಹ ಆರ್ಥಿಕ ಅನಿವಾರ್ಯತೆಯನ್ನು ನಿರ್ಮಿಸಿದವು. ಇದರ ಪರಿಣಾಮವಾಗಿ ಅಭಿವೃದ್ಧಿಯ ಕುರಿತ ನಿಲುವು ವಿಚಿತ್ರ ಮಾರ್ಪಾಟಿಗೆ ಒಳಗಾಯಿತು. ಹಣದ ಹರಿವು ಪ್ರವಾಹವಾಗಿ ನುಗ್ಗಿ, ಸಾಮಾಜಿಕ ರಚನೆಯನ್ನು ಆಕ್ರಮಿಸಿತು. ಎಲ್ಲವನ್ನೂ ಹಣವಾಗಿ ಪರಿವರ್ತಿಸಿಕೊಳ್ಳುವ, ಹಣದ ಮೌಲ್ಯವೇ ಸಾಮಾಜಿಕ-ಸಾಂಸ್ಕೃತಿಕ ಮೌಲ್ಯವನ್ನು ಅಳೆವ ಅಳತೆಪಟ್ಟಿಯಾಗುವ ಸ್ಥಿತಿ ನಿರ್ಮಾಣವಾಯಿತು. ಈ ಸ್ಥಿತ್ಯಂತರವು-ಅದೇ ತಾನೇ

ತನ್ನ ಶೋಷಿತ ನೆಲೆಯಿಂದ ಬಿಡುಗಡೆಯ ಕಡೆ ಚಲಿಸುತ್ತಿರುವ ಸಮುದಾಯಗಳಿಗೆ ಬಲುದೊಡ್ಡ ಹಿನ್ನಡೆಯನ್ನು ಉಂಟುಮಾಡಿತು. ಈ ಪ್ರತಿಕ್ರಿಯೆಯು ನೇರವಾಗಿ ಸಂಭವಿಸಲಿಲ್ಲ. ಆಧುನಿಕೋತ್ತರ ಕಾಲದಲ್ಲಿ ನಡೆದ ಈ ಆರ್ಥಿಕ ಬದಲಾವಣೆಯು ಬಹಿರಂಗದಲ್ಲಿ ಅತಿ ಆಧುನಿಕವಾಗಿ ವ್ಯಕ್ತಿ ಸ್ವಾತಂತ್ರ್ಯ, ವ್ಯಕ್ತಿತ್ವ ನಿರ್ಮಿತಿಯನ್ನು ಪ್ರೋತ್ಸಾಹಿಸುವ ಅವಕಾಶದಂತೆಯೂ, ಅಂತರಂಗದಲ್ಲಿ, ಮನುಷ್ಯರನ್ನು ಪ್ರಾಚೀನ ಜಾತಿ-ಧರ್ಮ, ವರ್ಗ-ಲಿಂಗಗಳ ಮೂಲಕ ವಿಭಜಿಸಿಡುವ ಹುನ್ನಾರವಾಗಿಯೂ ಇತ್ತು. ಸಮಾಜವನ್ನು, ಸಾಮಾಜಿಕ ಮೌಲ್ಯ ಕಲ್ಪನೆಯನ್ನು ಆಧುನಿಕ ಮತ್ತು ಸಾಂಪ್ರದಾಯಿಕ ಎಂಬ ಎರಡೂ ನೆಲೆಗಳಲ್ಲಿ ಪೋಷಿಸಿಕೊಂಡು ಬರುವುದರಿಂದ ಬಂಡವಾಳವಾದವು ಆರ್ಥಿಕ ಲಾಭವನ್ನು ಪಡೆದುಕೊಳ್ಳಬಹುದಿತ್ತು. ಇಂತಹ ಸಂಕೀರ್ಣ ಸಾಮಾಜಿಕ ಸಂದರ್ಭವನ್ನು ಅರ್ಥೈಸಿಕೊಳ್ಳುವುದು, ಪ್ರತಿಕ್ರಿಯಿಸುವುದು, ಅದರ ಶತರಂಜಿ ಬಣ್ಣದ ದೂರಗಾಮಿ ಫಲಿತಗಳನ್ನು ಸೃಜನಶೀಲವಾಗಿ ಮರುಸೃಷ್ಟಿಸಿಕೊಳ್ಳುವುದು ಸಾಹಿತ್ಯ-ಕಲೆಗಳೆದುರು ಇದ್ದ ಬಲುದೊಡ್ಡ ಸವಾಲಾಗಿತ್ತು. ಇದನ್ನು ಕನ್ನಡ ಸಾಹಿತ್ಯ ನಿರ್ವಹಿಸಿದ ಬಗೆ ಹೇಗಿದೆ? ಎಂಬ ಅಧ್ಯಯನವು ಸಾಹಿತ್ಯದ ಸೃಜನಶೀಲ ಸತ್ವವನ್ನು ಶೋಧಿಸುವ ಕ್ರಮವಾಗಿರುತ್ತದೆ ಮತ್ತು ಕಳೆದ ಕಾಲು ಶತಮಾನದಲ್ಲಿ ಈ ನೆಲ ಎದುರಿಸಿದ ಸಂಕಟಗಳ, ಸೃಷ್ಟಿಸಿಕೊಂಡ ಸಂಭ್ರಮಗಳ ದಾಖಲೆಯ ಅಧ್ಯಯನವೂ ಆಗಿರುತ್ತದೆ.

ಸಣ್ಣಕಥೆ ಎಂಬ ಪ್ರಕಾರವು ಕನ್ನಡಕ್ಕೆ ಬಂದಿದ್ದು ಆಧುನಿಕ ಸಾಹಿತ್ಯ ಸಂದರ್ಭದಲ್ಲಿ. ಕಾವ್ಯ, ನಾಟಕ, ಕಾದಂಬರಿ, ಅಂಕಣ ಸಾಹಿತ್ಯ, ವಿಚಾರ ಸಾಹಿತ್ಯ ಮೊದಲಾದ ಪ್ರಕಾರಗಳೊಂದಿಗೆ, ಆದರೆ, ಜಾಗತೀಕರಣದ ನಂತರದ ಕಾಲದಲ್ಲಿ ಈ ಪ್ರಕಾರಗಳು ತಮ್ಮ ಹೊರರೂಪವನ್ನು ಹಾಗೇ ಉಳಿಸಿಕೊಂಡು, ಅಂತರ್ಗತ ನಿಲುವುಗಳಲ್ಲಿ ವಿಸ್ಮಯಕಾರಿಯಾದ ಪರಿವರ್ತನೆಯನ್ನು ಹೊಂದಿದವು. ಜೀವನ ಮೌಲ್ಯಗಳನ್ನು ಬಿತ್ತರಿಸುವ ಸಣ್ಣಕಥೆಯ ಸ್ವರೂಪದಲ್ಲಿ ಬದಲಾವಣೆ ನಡೆಯಿತು. ಸಿದ್ಧ ಪಡಿಯಚ್ಚಿನ ಮೌಲ್ಯಗಳನ್ನು ಪ್ರಶ್ನಿಸುವ, ಮೌಲ್ಯ-ಆದರ್ಶಗಳಲ್ಲಿಯೂ ಬದಲಾವಣೆ ನಡೆಯುತ್ತಿದೆ - ಎಂಬುದನ್ನು ಸಾಬೀತು ಪಡಿಸುವ ಬರಹದ ಮಾದರಿ ಮುನ್ನಲೆಗೆ ಬಂತು. ಕಥೆ ಎಂಬ ಪ್ರಕಾರ ನಾಗರಿಕ ಜಂಜಾಟಗಳಲ್ಲಿ ಮುಳುಗಿರುವ ಜನರಿಗೆ 'ಕಿರಿದರಲಿ ಪಿರಿದರ್ಥ'ವನ್ನು ಹೇಳುವ ಸಂವಹನ ಸಾಧ್ಯತೆಯಾಗಿ ದೊರೆತಿತ್ತು. ಆಧುನಿಕ ಕಾಲದಲ್ಲಿ ಕನ್ನಡ ಸಾಹಿತ್ಯವನ್ನು ಪ್ರವೇಶಿಸಿದ ಕಥೆ ಎಂಬ ಪ್ರಕಾರವು ಆಧುನಿಕೋತ್ತರ ಕಾಲದಲ್ಲಿಯೂ ತನ್ನ ಜನಪ್ರೀತಿಯನ್ನು ಕಳೆದುಕೊಂಡಿಲ್ಲ.

ಹಾಗಾಗಿ ಬದುಕು ಮತ್ತು ಸಾಹಿತ್ಯದ ಕುರಿತ ಅಂತರ್‌ಸಂಬಂಧದ ಚರ್ಚೆಗೆ ಇದು ಮುಖ್ಯ ಭೂಮಿಕೆಯನ್ನು ಒದಗಿಸುತ್ತದೆ. ಜಾಗತೀಕರಣದಿಂದ ಉಂಟಾದ ಪಲ್ಲಟಗಳಿಗೆ ಜಗತ್ತಿನಾದ್ಯಂತ ಸಾಹಿತ್ಯದ ಸೃಜನಶೀಲ ಸತ್ವ ಮುಖಾಮುಖಿಯಾಗಿರುವಾಗ ಕನ್ನಡದ ಸಂದರ್ಭವನ್ನು ಅರ್ಥೈಸಿಕೊಳ್ಳುವುದು ಮುಖ್ಯವೆನಿಸಿದೆ. ಕನ್ನಡ ಬರಹಗಾರರು ಈ ಜಾಗತಿಕ ವಿಪ್ಲವಕ್ಕೆ ಪರ್ಯಾಯವಾಗಿ ಎಂತಹ ಜೀವನ ಮೀಮಾಂಸೆಯನ್ನು ಒದಗಿಸುತ್ತಾರೆಂಬುದು ಅಧ್ಯಯನ ಯೋಗ್ಯವೆನಿಸಿದೆ. ಈ ಅಧ್ಯಯನವು ಸಣ್ಣಕಥಾ ಪ್ರಕಾರದಲ್ಲಿ ಪ್ರತಿಪಾದಿತವಾಗಿರುವ ಆಶಯ-ಆಲೋಚನೆಗಳನ್ನು ಕೇಂದ್ರವಾಗಿಟ್ಟುಕೊಂಡಿದೆ. ಆದರೆ ಸಾಹಿತ್ಯದ ಆಶಯವು ಅದರೆ, ಸೃಜನಾತ್ಮಕ ತಾಕತ್ತಿನಲ್ಲಿಯೇ ಮೈದಾಳುತ್ತದೆಂಬ ಎಚ್ಚರವನ್ನೂ ಇಟ್ಟುಕೊಂಡಿದೆ.

**ಉದ್ದೇಶ :**

ಕನ್ನಡದಲ್ಲಿ ಸಣ್ಣಕಥೆ ಎಂಬ ಪ್ರಕಾರಕ್ಕೆ ಒಂದು ಶತಮಾನಕ್ಕಿಂತಲೂ ಹೆಚ್ಚಿನ ಇತಿಹಾಸವಿದೆ. ಇಪ್ಪತ್ತನೆಯ ಶತಮಾನದಲ್ಲಿ ಕಾವ್ಯ ಹೆಚ್ಚು ಗೌರವಕ್ಕೆ ಪಾತ್ರವಾಗಿದ್ದಂತೆ ತೋರಿದರೂ ಗದ್ಯದ ಕುರಿತ ಆದರಣೆಯು ಕಡಿಮೆಯಾಗಿರಲಿಲ್ಲ. ಸಣ್ಣಕಥೆಯು ಹೆಚ್ಚು ವ್ಯಾಪಕವೂ ಶಕ್ತಿಶಾಲಿಯೂ ಆಗಿ ಮೈದಳೆದ ಬಗ್ಗೆ ವಿಮರ್ಶೆ ಗಮನ ಸೆಳೆಯುತ್ತಿದೆ. ಕಳೆದ ಒಂದು ಶತಮಾನದ ಭಾರತೀಯ ಬದುಕಿನ ಇರುವಿಕೆ ಮತ್ತು ಸ್ಥಿತ್ಯಂತರಗಳನ್ನು ವಿವರಿಸುವಲ್ಲಿ ಪ್ರಮುಖ ಗದ್ಯ ಪ್ರಕಾರವಾದ ಸಣ್ಣಕಥೆಯ ಪರಂಪರೆಗೆ ಮಹತ್ವದ ಸ್ಥಾನವಿದೆ. ನವೋದಯ, ಪ್ರಗತಿಶೀಲ, ನವ್ಯ, ದಲಿತ ಬಂಡಾಯದಂಥ ಆಧುನಿಕ ಕನ್ನಡ ಸಾಹಿತ್ಯದ ಸ್ಥೂಲ ವರ್ಗೀಕರಣಗಳಾಚೆ ಕಥೆಗಳು ಬೆಳೆದಿವೆ. ೧೯೯೬ರಲ್ಲಿ ಪ್ರಕಟವಾದ ಜಯಂತ ಕಾಯ್ಕಿಣಿಯವರ ಅಮೃತಬಳ್ಳಿ ಕಷಾಯದ ಕತೆಗಳನ್ನು ಕುರಿತು ಜಿ.ಎಸ್.ಆಮೂರರವರು "ಕಾಯ್ಕಿಣಿಯವರು ಸಂಪೂರ್ಣವಾಗಿ ಹೊಸ ಹಾದಿಯನ್ನು ತುಳಿದಿದ್ದಾರೆ. ಈ ಕತೆಗಳ ಒಂದು ಎದ್ದು ಕಾಣುವ ವೈಶಿಷ್ಟ್ಯವೆಂದರೆ ಅವುಗಳ ಸಾಮಾಜಿಕತೆ. ಕಾಯ್ಕಿಣಿಯವರ ಪ್ರಾರಂಭದ ಕತೆಗಳೆಲ್ಲ ವ್ಯಕ್ತಿಕೇಂದ್ರಿತವಾದವುಗಳು. ಸಾಮಾಜಿಕ ಪರಿಸರಕ್ಕೆ ಅಲ್ಲಿ ಆದ್ಯತೆಯಿಲ್ಲ. ಆದರೆ ಇತ್ತೀಚಿನ ಕತೆಗಳಲ್ಲಿ ಸಮಾಜದ ನಿರ್ಲಕ್ಷಿತ, ಶೋಷಿತ ಹಾಗೂ ತೀರ ಸಾಮಾನ್ಯರೆನ್ನಿಸುವವರ ಬದುಕು ಅವರ ಶೋಧನೆಯ ವಿಷಯವಾಗಿದೆ. ಈ ಬದುಕಿನ ನೋವು ಯಾತನೆಗಳ ವಾಸ್ತವದ ಗ್ರಹಿಕೆಯೊಡನೆ ಅವುಗಳನ್ನು ಮೀರಿ ಹೊರಹೊಮ್ಮುವ ಜೀವಧ್ವನಿ ಹಾಗೂ ಸುಖದ ಹಂಬಲಗಳನ್ನು ಗುರುತಿಸುವ ಒಂದು ಪ್ರಾಮಾಣಿಕ ಪ್ರಯತ್ನ ಇಲ್ಲಿರುವುದು ಈ ಕತೆಗಳ ವೈಶಿಷ್ಟ್ಯವಾಗಿದೆ. ಈ ಕತೆಗಳಲ್ಲಿ ಪ್ರತಿಭಟನೆಯಿದೆ." ಎಂದು

ಹೇಳುವ ಮಾತುಗಳು ಹೊಸಗನ್ನಡದ ಕಥಾ ಸಾಹಿತ್ಯದಲ್ಲಿ ಸಂಭವಿಸಿದ ಪಲ್ಲಟವನ್ನು ಸೂಚಿಸುತ್ತಿದೆ. ತನ್ನ ಸುತ್ತಲ ಬದುಕಿನೊಂದಿಗೆ ನಿರಂತರ ಅನುಸಂಧಾನವನ್ನು ಏರ್ಪಡಿಸಿಕೊಂಡ ಕಥನ ಧರ್ಮವನ್ನು ಹೇಳುತ್ತಿದೆ. ಉದಾರವಾದಿ, ಮಾರ್ಕ್ಸವಾದಿ, ವ್ಯಕ್ತಿವಾದಿ, ಶೋಷಿತವಾದಿ ಎಂಬ ನಾಲ್ಕು ಘಟ್ಟಗಳಲ್ಲಿ ಪ್ರವಹಿಸಿದ ಆಧುನಿಕ ಕನ್ನಡ ಕಥನ ಪರಂಪರೆ ಸದ್ಯ ಸಾಮ್ರಾಜ್ಯಶಾಹಿ ಪ್ರತಿವಾದಿ ಘಟ್ಟದಲ್ಲಿ ಬೆಳೆಯುತ್ತಿದೆ.

ವಸಾಹತುಶಾಹಿ ಹಾಗೂ ಬಂಡವಾಳಶಾಹಿ ಆಗಮನ ಭಾರತೀಯರ ಬದುಕಿನಲ್ಲಿ ಅದರ ಆರ್ಥಿಕ, ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಇರುವಿಕೆಯಲ್ಲಿ ಬಹುದೊಡ್ಡ ಪಲ್ಲಟಗಳನ್ನು ಉಂಟುಮಾಡಿದವು. ಈ ಬದಲಾವಣೆಗಳನ್ನು ದಾಖಲಿಸುವ ವಾಸ್ತವವಾದಿ ಮಾರ್ಗವಾಗಿ ಕನ್ನಡದಲ್ಲಿ ಸಣ್ಣಕಥೆಗಳು ಆರಂಭವಾದವು. ಉದಾರವಾದಿ ಮಾನವೀಯ ನೆಲೆ ಮೊದಲ ಘಟ್ಟದ ಸಣ್ಣಕಥೆಗಳ ಪ್ರೇರಕ ಶಕ್ತಿಯಾಗಿತ್ತು. ವಸಾಹತೋತ್ತರ ಕಾಲದಲ್ಲಿ ಬಂಡವಾಳಶಾಹಿ ಆರ್ಥಿಕತೆಯಿಂದ ಸಮ್ಮಿಶ್ರ ಆರ್ಥಿಕತೆಯೆಡೆಗೆ ಭಾರತ ಚಲಿಸಿತು. ವಸಾಹತೋತ್ತರ ಸಂದರ್ಭದ ಕನಸುಗಾರಿಕೆ ಬಹಳ ದಿನ ಉಳಿಯದೇ ಈ ಸಮ್ಮಿಶ್ರ ಆರ್ಥಿಕತೆಯ ಸಮಸ್ಯೆಗಳನ್ನು ಮಾರ್ಕ್ಸವಾದಿ ದೃಷ್ಟಿಕೋನದಿಂದ ಪರಿಶೀಲಿಸುವ ವೈಚಾರಿಕ ಪ್ರಕ್ರಿಯೆ ಆರಂಭವಾಗಿ ಕಥೆಗಳು ಈ ಆಶಯಗಳಿಗೆ ದನಿಗೂಡಿಸಿದವು. ಹೀಗೆ ಕನ್ನಡದಲ್ಲಿ ಎರಡನೆ ಘಟ್ಟದಲ್ಲಿ ವರ್ಗಪ್ರಜ್ಞೆಯ ಕಥೆಗಳು ಹುಟ್ಟಿದವು. ಅಸ್ತಿತ್ವವಾದ, ಮನೋವಿಜ್ಞಾನಗಳ ಪ್ರಭಾವದಿಂದ ವಸಾಹತೋತ್ತರ ಬದುಕಿನ ಭ್ರಮನಿರಸನಗಳನ್ನು ವ್ಯಕ್ತಿವಾದಿ ನೆಲೆಯಿಂದ ಸಂಶೋಧಿಸುವ ಅಸ್ಮಿತೆಯ ಹುಡುಕಾಟ, ವ್ಯಕ್ತಿತ್ವದ ಬಿರುಕುಗಳು, ಪೂರ್ಣತೆಯ ಶೋಧ ದಂತಹ ಆಶಯಗಳ ಕಥೆಗಳು ಮೂರನೆಯ ಘಟ್ಟದಲ್ಲಿ ಹುಟ್ಟಿದವು. ಮಾರ್ಕ್ಸವಾದ, ಲೋಹಿಯಾವಾದ, ಸ್ತ್ರೀವಾದಗಳಂಥ ಪ್ರಗತಿಪರ ವೈಚಾರಿಕ ನೆಲೆಗಳಿಂದ ಬದುಕನ್ನು ಪರಿಭಾವಿಸುವ ವಿಶಿಷ್ಟ ಪ್ರಯತ್ನ ನಾಲ್ಕನೆಯ ಘಟ್ಟದಲ್ಲಿ ನಡೆಯಿತು. ಈ ಹಂತಗಳು ಸರಳರೇಖಾತ್ಮಕವಾಗಿ ನಡೆಯಲಿಲ್ಲ. ಒಂದರೊಳಗೊಂದು ಹೊಕ್ಕು, ಒಂದರಿಂದ ಇನ್ನೊಂದು ಪ್ರಭಾವಿಸುವ ರೀತಿಯಲ್ಲಿ ನಡೆದಿದೆ.

ಕಳೆದ ಶತಮಾನದ ಕೊನೆಯ ದಶಕದಲ್ಲಿ ಭಾರತ ಜಾಗತೀಕರಣ, ಉದಾರೀಕರಣ, ಖಾಸಗೀಕರಣ ಎಂಬ ಆರ್ಥಿಕ ಪರಿಕಲ್ಪನೆಯ ಗ್ಯಾಟ್ ಒಪ್ಪಂದವನ್ನು ಒಪ್ಪಿಕೊಂಡಿತು. ದಶಕಗಳ ನಂತರ ಅದರ ಪರಿಣಾಮಗಳು ಖಚಿತವಾಗಿ ಗೋಚರಿಸತೊಡಗಿದವು. ಜಾತಿಯ ದಮನವನ್ನು ವರ್ಗದಿಂದ ಮೀರಲು ಹೊರಟಿದ್ದ ಸಮಾಜವು; ಸಾಮಾಜಿಕ ನ್ಯಾಯವು

ಹಿನ್ನಡೆಯಾದ ವ್ಯವಸ್ಥೆಯಲ್ಲಿ ಮತ್ತೆ ಆತಂಕಕ್ಕೆ ಒಳಗಾಯಿತು. ಈ ಎರಡು ದಶಕಗಳಲ್ಲಿ ಜನಸಾಮಾನ್ಯರ ಬದುಕು ಅನುಭವಿಸಿದ ತಲ್ಲಣಗಳು ಕನ್ನಡದ ಸಣ್ಣಕಥೆಗಳಿಗೆ ಸಾಮ್ರಾಜ್ಯಶಾಹಿ ಪ್ರತಿರೋಧಿ ಆಯಾಮವನ್ನು ನೀಡಿವೆ. ಇದೊಂದೇ ಅಲ್ಲದೆ ಸಾಮ್ರಾಜ್ಯಶಾಹಿ ಪರವಾದ ಕ್ಷೀಣ ದನಿಗಳೂ ಇವೆ. ಈ ಹಿಂದಿನ ನಾಲ್ಕು ಘಟ್ಟಗಳ ಕತೆಗಳ ಬಗ್ಗೆ ಕನ್ನಡದಲ್ಲಿ ಸಾಕಷ್ಟು ಅಧ್ಯಯನಗಳಾಗಿವೆ. ಕೊನೆಯ ಘಟ್ಟದ ಸಣ್ಣಕಥೆಗಳ ಪ್ರವೃತ್ತಿಗಳನ್ನು ಕುರಿತು ಅಧ್ಯಯನ ಮಾಡುವುದು ಇಂದಿನ ಅಗತ್ಯವಾಗಿದೆ. ಹೀಗಾಗಿ ಜಾಗತೀಕರಣ ಸಂದರ್ಭದ ಕನ್ನಡ ಸಣ್ಣಕಥೆಗಳನ್ನು ವಿಮರ್ಶಾತ್ಮಕವಾಗಿ, ವಿಶ್ಲೇಷಣಾತ್ಮಕವಾಗಿ ಅಧ್ಯಯನ ಮಾಡಲಾಗಿದೆ. ಇದರೊಂದಿಗೆ ಎರಡು ದಶಕಗಳ ಕನ್ನಡ ಸಣ್ಣಕಥೆಗಳಲ್ಲಿ ಕಂಡುಬರುವ ಪ್ರಮುಖ ಪ್ರವೃತ್ತಿ ಮತ್ತು ಸಾಧನೆಗಳನ್ನು ಗುರುತಿಸುವುದು, ಸಾಮ್ರಾಜ್ಯಶಾಹಿ ಪ್ರತಿರೋಧಿ ಕಾಲಘಟ್ಟದ ತಾತ್ವಿಕತೆಯನ್ನು ರೂಪಿಸುವುದು, ಸಣ್ಣಕಥಾ ಪರಂಪರೆಯ ಪ್ರವೃತ್ತಿಗಳಲ್ಲಾದ ಪಲ್ಲಟಗಳನ್ನು ಅಧ್ಯಯನ ಮಾಡುವುದು ಹಾಗೂ ಹೊಸ ಸವಾಲುಗಳಿಗೆ ಮುಖಾಮುಖಿಯಾದ ಸಣ್ಣಕಥಾ ಪ್ರಕಾರವು ತನ್ನ ವಿನ್ಯಾಸದಲ್ಲಿ ಉಂಟುಮಾಡಿಕೊಂಡಿರಬಹುದಾದ ಬದಲಾವಣೆಗಳನ್ನು ಗುರುತಿಸುವುದು ಈ ಅಧ್ಯಯನದ ಪ್ರಮುಖ ಉದ್ದೇಶವಾಗಿದೆ.

**ಅಧ್ಯಯನದ ಸ್ವರೂಪ:**

ಈ ಮಹಾಪ್ರಬಂಧದಲ್ಲಿ ಒಟ್ಟು ಆರು ಅಧ್ಯಾಯಗಳಿವೆ. ಒಂದನೆಯ ಅಧ್ಯಾಯ ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ ಎಂದಿದ್ದು, ಇದರಲ್ಲಿ ಅಧ್ಯಯನಕ್ಕೆ ಒಳಪಡಿಸಲಾದ ವಿಷಯಕ್ಕೆ ಸಂಬಂಧಿದಂತೆ ಆಯ್ದುಕೊಂಡ ತಾತ್ವಿಕತೆಯೇನು, ಅಧ್ಯಯನದ ವಸ್ತುವಿನ ವಿಷಯ ವ್ಯಾಪ್ತಿಯೇನು, ಯಾವ ಉದ್ದೇಶದ ಶೋಧನೆಗಾಗಿ ಈ ಓದು ನಡೆದಿದೆ ಎಂಬ ಸ್ಪಷ್ಟೀಕರಣವಿದೆ. ಇದರಲ್ಲಿ ಅಧ್ಯಯನಕ್ಕೆ ಒಳಪಡಿಸಲಾದ ಕನ್ನಡ ಸಣ್ಣಕಥೆಗಳ ಮಾಹಿತಿ ಮತ್ತು ನನ್ನ ಅಧ್ಯಯನಕ್ಕಿರುವ ಇತಿಮಿತಿಗಳನ್ನು ಸೂಚಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಇದುವರೆಗೆ ನಡೆದ ಅಧ್ಯಯನಗಳ ತಾತ್ವಿಕ ಸಮೀಕ್ಷೆಯನ್ನು ಕೈಗೊಳ್ಳಲಾಗಿದೆ. ಇದು ಅಧ್ಯಯನಕ್ಕೆ ಪೂರಕವಾದ ಆಕರಗಳ ಬಗೆಗೆ ಮಾಹಿತಿ ನೀಡುವುದರಿಂದ ಈ ಅಧ್ಯಯನ ಹೆಚ್ಚು ಸೂಕ್ತವೆಂಬ ಅಭಿಪ್ರಾಯದೊಂದಿಗೆ ಜಾಗತೀಕರಣ ಸಂದರ್ಭದಲ್ಲಿನ ಸಣ್ಣಕಥೆಗಳ ಕುರಿತು ಚರ್ಚಿಸಲಾದ ಬಿಡಿ ಲೇಖನಗಳು, ವಿಮರ್ಶೆಗಳನ್ನೂ ಇಲ್ಲಿ ಗಮನಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಪರಿಕಲ್ಪನಾತ್ಮಕ ಚರ್ಚೆಯನ್ನು ಕೈಗೊಳ್ಳಲಾಗಿದೆ. ಈ ಭಾಗದಲ್ಲಿ ಜಾಗತೀಕರಣ ಹಾಗೂ ಸಣ್ಣಕಥೆಗಳಿಗೆ ಸಂಬಂಧಿಸಿದಂತೆ ವಿವಿಧ ಪರಿಕಲ್ಪನೆಗಳನ್ನು ತಾತ್ವಿಕ ಚರ್ಚೆಗೆ ಒಳಪಡಿಸಲಾಗಿದೆ. ನವವಸಾಹತುಶಾಹಿ, ಉದಾರೀಕರಣ,ಖಾಸಗೀಕರಣ, ನಗರೀಕರಣ, ಜಾಗತೀಕರಣ, ಕೋಮುವಾದ, ಮತೀಯವಾದ, ರಾಷ್ಟ್ರೀಯವಾದ ಮೊದಲಾದ ಪರಿಭಾಷೆಗಳನ್ನು ತಾತ್ವಿಕ ಚರ್ಚೆಗೆ ಒಳಪಡಿಸಲಾಗಿದೆ. ಜಾಗತೀಕರಣ ಕಾಲದ ಬದುಕಿನ ವಿನ್ಯಾಸಗಳು ಎಂಬ ಅಭಿವ್ಯಕ್ತಿ ಪ್ರಕಾರದ ತಾತ್ವಿಕ ವಿಶ್ಲೇಷಣೆಯನ್ನು ನಡೆಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಸಣ್ಣಕಥೆ : ಈ ತನಕದ ನಡಿಗೆಯನ್ನು ಗಮನಿಸಲಾಗಿದೆ.ಜಾಗತೀಕರಣ ಮತ್ತು ಅದರ ಪ್ರಭಾವ ವಲಯಗಳನ್ನು ಕುರಿತಂತೆ ಕನ್ನಡದಲ್ಲಿ, ರಾಷ್ಟ್ರ ಮಟ್ಟದಲ್ಲಿ ಮತ್ತು ವಿಶ್ವಮಟ್ಟದಲ್ಲಿ ನಡೆದ ಪ್ರಮುಖ ಚಿಂತನೆಗಳನ್ನು, ವೈಚಾರಿಕ ನಿಲುವುಗಳನ್ನು ವಾಗ್ವಾದಗಳನ್ನು ಪರಿಗಣಿಸಲಾಗಿದೆ. ಇವು ಸಾಹಿತ್ಯ ಸಂಬಂಧೀ ನಿಲುವುಗಳಾಗಿ ಬೆಳೆದುಬಂದ ಬಗೆಯನ್ನು ವಿವೇಚಿಸಲಾಗಿದೆ. ಜೊತೆಗೆ ಜಾಗತೀಕರಣವು ವ್ಯಕ್ತಿ ಸಂಬಂಧಿತ ಸ್ತರವನ್ನು ಮೊದಲ್ಗೊಂಡು ಸಮುದಾಯಗಳು ಮತ್ತು ರಾಷ್ಟ್ರ ಸಂಬಂಧಗಳವರೆಗೆ ಉಂಟು ಮಾಡಿದ ಪರಿಣಾಮಗಳನ್ನು ಚಾರಿತ್ರಿಕವಾಗಿಯೂ ಅಧ್ಯಯನ ಮಾಡಲಾಗಿದೆ. ಕಥಾ ಪರಂಪರೆಯ ಸಂಕ್ಷಿಪ್ತ ನೋಟವನ್ನು ಈ ಅಧ್ಯಯನದಲ್ಲಿ ಕೈಗೊಳ್ಳಲಾಗಿದ್ದು, ಅದರಲ್ಲೂ ಸಣ್ಣಕಥೆ ಬೆಳೆದುಬಂದ ಬಗೆಯನ್ನು ಗುರುತಿಸಲಾಗಿದೆ. ಸಿನಿಮಾಕ್ಕೆ ಸಮಾನವಾದ ಕಲಾ ಪ್ರಕಾರ – ಎಂಬ ವಿಮರ್ಶೆಗೆ ಪಾತ್ರವಾದ ಸಣ್ಣಕಥೆಯು ಅತ್ಯಂತ ಸಂಕೀರ್ಣವಾದ ಪ್ರಕಾರವೂ ಆಗಿದೆ. ಇವುಗಳನ್ನು ಪ್ರಮುಖ ಪ್ರವೃತ್ತಿಗಳ ಆಧಾರದಲ್ಲಿ ಓದುವ ಕ್ರಮವನ್ನು ಅನುಸರಿಸುವುದರಿಂದ ಹಲವು ಪ್ರವೃತ್ತಿಗಳು ಏಕೀಭವಿಸುವ ಸಂಕೀರ್ಣ ಕತೆಗಳ ಸೂಕ್ಷ್ಮತೆಯನ್ನು ಅಲಕ್ಷಿಸಿದಂತೆ ಆಗಬಾರದು. ಎಂಬ ಎಚ್ಚರದಲ್ಲಿ ಅಧ್ಯಯನ ಮಾಡಿದೆ. ಸಣ್ಣಕಥೆಯ ಅಧ್ಯಯನ ಎಂದರೆ, ರೂಪನಿಷ್ಠ ಓದು ಮಾತ್ರವಾಗಿರದೆ, ಅದೊಂದು ಸಾಂಸ್ಕೃತಿಕ ಓದು ಮತ್ತು ಚರಿತ್ರೆಯನ್ನು ಸಾಂಸ್ಕೃತಿಕ ನಿಷ್ಪತ್ತಿಗಳಿಂದ ಮರಕಳಿಸಿಕೊಳ್ಳುವ ಕ್ರಿಯೆ ಎಂದು ಕೂಡ ಎಚ್ಚರವಹಿಸಲಾಗಿದೆ. ಆ ಕಾರಣಕ್ಕಾಗಿ ಒಂಬತ್ತು ಮಹತ್ವದ ಸಣ್ಣಕಥೆಗಳನ್ನು ಪ್ರಾಯೋಗಿಕ ವಿಮರ್ಶೆಗೆ ಒಳಪಡಿಸಲಾಗಿದೆ. ಪ್ರಾಯೋಗಿಕ ವಿಮರ್ಶೆ ಎಂದರೆ ರೂಪನಿಷ್ಠ ಓದು ಎಂದು ಮಾತ್ರವಾಗಿರದೆ ಕೃತಿ ಬಯಸುವ ಸಾಂಸ್ಕೃತಿಕ ಚಾರಿತ್ರಿಕ ಅಂಶಗಳ ಸಹಯೋಗದಲ್ಲಿ ಅಧ್ಯಯನಕ್ಕೆ ಒಳಪಡಿಸುವುದಾಗಿದೆ.

ಅಧ್ಯಾಯ ಐದರಲ್ಲಿ ಜಾಗತೀಕರಣ ಸಂದರ್ಭದ ಸಣ್ಣ ಕಥೆಗಳಲ್ಲಿನ ಪ್ರಮುಖ ಪ್ರವೃತ್ತಿಗಳ ಹುಡುಕಾಟವನ್ನು ನಡೆಸಲಾಗಿದೆ. ಜಾಗತೀಕರಣ ಎಂಬ ಆರ್ಥಿಕ ನೀತಿಯು ಮಾನವೀಯ ಸಂಬಂಧಗಳಲ್ಲಿ ಮತ್ತು ಜೀವನ ವಿನ್ಯಾಸಗಳಲ್ಲಿ ಉಂಟುಮಾಡಿದ ಪರಿಣಾಮಗಳನ್ನು ಅಧ್ಯಯನ ಮಾಡಲಾಗಿದೆ. ಈ ಅಧ್ಯಾಯದಲ್ಲಿ ಮಾನವ ಸಂಬಂಧದ ಮುಖ್ಯ ನೆಲೆಗಳಾದ ವ್ಯಕ್ತಿ, ಕುಟುಂಬ, ಗ್ರಾಮ, ನಗರ, ಸಮುದಾಯ ಹಾಗೂ ರಾಷ್ಟ್ರಗಳನ್ನುಮುಖ್ಯವಾಗಿಟ್ಟುಕೊಂಡುಅಲ್ಲಿ ಕಾಣಬರುವ ವೈಚಾರಿಕ ನಿಲುವುಗಳನ್ನು ಸಂವೇದನೆಯ ಸೂಕ್ಷ್ಮಗಳನ್ನು,ಬಂಡವಾಳದ ಆಕ್ರಮಣ,ಅಂಚಿನಲ್ಲಿರುವ ಅರೆಜೀವಗಳು, ಮಾರುಕಟ್ಟೆಯಲ್ಲಿ ತೂಗುವ ಸಂಬಂಧಗಳುಹಾಗೂ ಬೆಂಕಿಗೆ ಚಿಮುಕಿಸಿದ ಹನಿಗಳು ಎಂಬ ಉಪಶೀರ್ಷಿಕೆಗಳ ಅಡಿಯಲ್ಲಿಅಧ್ಯಯನ ಮಾಡಲಾಗಿದೆ. ಜಾಗತೀಕರಣ ಪರಿಕಲ್ಪನೆ ಎಂಬ ವೈಚಾರಿಕ ಆಕೃತಿಯು ಕಥೆ ಎಂಬ ಸಂವೇದನಾಶೀಲ ಮಾಧ್ಯಮದಲ್ಲಿ ಅನುಸಂಧಾನಗೊಳ್ಳುವಾಗ ಉಂಟಾಗುವ ಸಾಧ್ಯಾಸಾಧ್ಯತೆಗಳನ್ನು ಇಲ್ಲಿ ಸೂಕ್ಷ್ಮವಾಗಿ ಗಮನಿಸಲಾಗಿದೆ. ಮತೀಯವಾದ, ಕೋಮುವಾದ, ಹಿಂಸಾರತಿ, ಹಣವೇ ಮುಖ್ಯವಾದ ಬದುಕಿನ ಕ್ರಮಗಳಿಗೆ ಪ್ರತಿಕ್ರಿಯೆಗಳಾಗಿ, ಪರ್ಯಾಯಗಳಾಗಿ ಸೃಜನ ಸಾಧ್ಯತೆಯು ದುಡಿಯುವ ವೈಧಾನಿಕತೆಯನ್ನು ಸೂಚ್ಯವಾಗಿ ತಿಳಿಸಲಾಗಿದೆ.

ಆರನೆಯ ಅಧ್ಯಾಯದಲ್ಲಿ ಅಧ್ಯಯನದ ಕೊನೆಯ ಘಟ್ಟವಾದ ಸಮಾರೋಪವನ್ನು ಬರೆಯಲಾಗಿದೆ. ಅಧ್ಯಯನದಲ್ಲಿ ಶೋಧಿತವಾದ ಫಲಿತಗಳನ್ನು ಕ್ರೂಢಿಕರಿಸುವುದರ ಜೊತೆಗೆ ಅವುಗಳ ಮಹತ್ವವನ್ನು ಸೂಚಿಸಲಾಗಿದೆ. ಅಷ್ಟೇ ಅಲ್ಲದೆ ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದಂತೆ ಕೈಗೊಳ್ಳಬಹುದಾದ ಮುಂದಿನ ಅಧ್ಯಯನಗಳ ಸಾಧ್ಯತೆಗಳನ್ನು ವಿವರಿಸಲಾಗಿದೆ. ಕೊನೆಯಲ್ಲಿ ಈ ಅಧ್ಯಯನಕ್ಕೆ ಸಂಬಂಧಪಟ್ಟ ಅನುಬಂಧಗಳು ಮೂಲ ಚರ್ಚೆಗೆ ಸಾಕಷ್ಟು ಒಳನೋಟಗಳನ್ನು ಒದಗಿಸುವುದರಿಂದ ಪ್ರಾಥಮಿಕ ಆಕರ ಮತ್ತು ಸಹಾಯಕವಾದ ಗ್ರಂಥಗಳ ಪಟ್ಟಿಯಿದೆ. ಹೀಗೆ ಒಟ್ಟು ಆರು ಅಧ್ಯಾಯಗಳಲ್ಲಿ ಈ ಮಹಾಪ್ರಬಂಧವನ್ನು ವಿನ್ಯಾಸಗೊಳಿಸಲಾಗಿದೆ.

**ಅಧ್ಯಯನದ ವ್ಯಾಪ್ತಿ :**

ಕನ್ನಡದಲ್ಲಿ ಸಣ್ಣಕಥೆ ಎಂಬ ಪ್ರಕಾರವು ಅತ್ಯಂತ ಜನಾದರಣೀಯವಾಗಿದೆ. ನವೋದಯ ಕಾಲದಿಂದಲೂ ಸಣ್ಣಕಥೆಗಳು ಬದುಕಿನ ಹಿತಾಹಿತಗಳನ್ನು ತಾತ್ವೀಕರಿಸುವ ಪ್ರಕಾರವಾಗಿ ಬೆಳೆದಿವೆ. ಸೃಜನಶೀಲ ಅಭಿವ್ಯಕ್ತಿಯನ್ನು ಕಾಲದ ಚೌಕಟ್ಟಿನಲ್ಲಿ ನಿರ್ಧಿಷ್ಟವಾಗಿ

ಇಟ್ಟು ಅಧ್ಯಯನಿಸುವುದು ಕಠಿಣ, ಆದರೆ ಜಾಗತೀಕರಣದ ಈ ಕಾಲುಶತಮಾನ ಸಾಮಾಜಿಕ ಸಂರಚನೆಯನ್ನು ದಟ್ಟವಾಗಿ ಪ್ರಭಾವಿಸಿದ್ದರಿಂದ, ಸೃಜನ ರೂಪಗಳಲ್ಲಿಯೂ ಈ ಬದಲಾವಣೆ ಗಾಢವಾಗಿ ದಾಖಲಾಗಿದೆ. ಆ ಕಾರಣಕ್ಕಾಗಿ ಕಳೆದ ಕಾಲುಶತಮಾನದ ಸಣ್ಣಕಥೆಗಳ ಬರವಣಿಗೆಯನ್ನು ಮುಖ್ಯವಾಗಿಸಿಕೊಂಡಿದೆ. ನಿರ್ದಿಷ್ಟ ಇಸವಿಯ ಹಂಗಿಲ್ಲದ, ಅದನ್ನು ಉದ್ದೇಶಪೂರ್ವಕವಾಗಿ ಮೀರಿದ ಅಧ್ಯಯನ ಕ್ರಮ ಇದು.

ಈ ಅವಧಿಯಲ್ಲಿ ಪ್ರಕಟಗೊಂಡ ಕಥಾಸಂಕಲನಗಳನ್ನು ಮುಖ್ಯವಾಗಿ ಪರಿಗಣಿಸಲಾಗಿದೆ. ಕಥೆಗಾರರನ್ನಲ್ಲ. ಆದರೆ, ಕಥೆಗಾರರಿಗೂ ಕಥೆಗಳಿಗೂ ಇರುವ ಅನನ್ಯತೆಯನ್ನು ನಿರ್ಲಕ್ಷಿಸಲಾಗುವುದಿಲ್ಲ. ಕನ್ನಡದಲ್ಲಿ ಈ ಅವಧಿಯಲ್ಲಿ ಬರೆದ ಬಹುತೇಕ ಕಥೆಗಾರರು ಜಾಗತೀಕರಣದ ಫಲಿತಗಳಿಗೆ ಮುಖಾಮುಖಿಯಾಗುತ್ತಾರೆ. ಕಥೆ ಮತ್ತು ಕಥೆಗಾರರನ್ನು ಬೇರ್ಪಡಿಸಿ ನೋಡಲಾಗದ ಸ್ಥಿತಿಯೊಂದು ಅಧ್ಯಯನದಲ್ಲಿ ಸಂಭವಿಸುತ್ತದೆ. ಈ ಕಾಲಘಟ್ಟದ ಕಥೆಗಾರರಲ್ಲಿ ಹಳಬರು-ಹೊಸಬರು ಎಂಬ ಅನಗತ್ಯ ಬೇಧವನ್ನು ಈ ಅಧ್ಯಯನವು ಪರಿಗಣಿಸುವುದಿಲ್ಲ. ಹಿರಿಯ ಕಥೆಗಾರರು ವರ್ತಮಾನಕ್ಕೆ ಸ್ಪಂದಿಸುತ್ತಿರುವ ಬಗೆ, ಅವರ ವಿವೇಕ ಮತಿತ್ವವು ರೂಪಿಸುವ ಜೀವನ ಮೀಮಾಂಸೆಗಾಗಿ ಇದು ಮುಖ್ಯವೆನಿಸಿದೆ. ಹಾಗೆಯೇ ಹೊಸ ಬರಹಗಾರರು-ಜಾಗತಿಕ ಮುಕ್ತ ಮಾರುಕಟ್ಟೆಯು ಹುಟ್ಟು ಹಾಕಿದ ಸಾಮಾಜಿಕ ಸಂಘರ್ಷದಲ್ಲಿ ಸಿಲುಕಿ, ಈ ಬಾಳಿನ ಸ್ವಾದ-ಅರ್ಥವಂತಿಕೆಗಳ ಬಗ್ಗೆ ಕಾತರರಾದವರು – ಅವರ ಕಥನಗಳನ್ನು; ಸದ್ಯದ ಹಂಗು ಈ ಬದುಕನ್ನು ಬಾಧಿಸುತ್ತಿರುವ ಕ್ರಮದ ತಿಳಿವಿಗಾಗಿ ಮುಖ್ಯವೆನಿಸಿಕೊಳ್ಳಲಾಗಿದೆ. ಈ ಎರಡೂ ತಲೆಮಾರಿನಲ್ಲಿ ಯಾವ ಕಥೆಗಾರರು ಎಷ್ಟು ಸಂಕಲನಗಳನ್ನು ಪ್ರಕಟಿಸಿದ್ದಾರೆ ಎನ್ನುವುದು ಮುಖ್ಯವಾಗಿಲ್ಲ. ಆ ಕಥೆಗಳು ಜಾಗತೀಕರಣವನ್ನು ನಿರೂಪಿಸುವ ಬಗೆಯೇ ಮುಖ್ಯವೆಂದು ಆಯ್ದುಕೊಳ್ಳಲಾಗಿದೆ.

ಈ ಕಾಲಸಂದರ್ಭವು ಹಲವು ಸಾಮಾಜಿಕ ಸ್ತರಗಳು ಶಿಕ್ಷಣ-ಉದ್ಯೋಗದ ಜಗತ್ತಿನಲ್ಲಿ ಕ್ರಿಯಾಶೀಲವಾಗಿರುವ ಅವಧಿಯಾಗಿದೆ. ಗ್ರಾಮ, ನಗರ, ಅತಿನಗರ ಸಂವೇದನೆಗಳು ಇಲ್ಲಿ ಲೋಕವನ್ನು ಕಾಣುವ ಕಣ್ಣೋಟವಾಗಿ ದಾಖಲಾಗಿವೆ. ಸಮಾಜದ ಕಡೆಯ ಅಂಚಿನ ಸಮುದಾಯವೂ ತಮ್ಮ ಸಂವೇದನೆಗಳನ್ನು ಅಭಿವ್ಯಕ್ತಿಸಿದ ಸಂದರ್ಭ ಇದು. ಬರವಣಿಗೆಯು ಆರಂಭದ ಬದಲಾವಣೆಯ ಕಾರಣದಿಂದ ಕಿಂಚಿತ್ತಾದರೂ ಕರಗಿ ಒಟ್ಟು ಸಮಾಜದ ಭಾಗವಾಗಿ ಆಲೋಚನಾ ಕ್ರಮ ರೂಪುಗೊಳ್ಳುತ್ತಿರುವ ಕಾಲಾವಧಿಯೂ ಆಗಿದೆ.

ಈ ಅಧ್ಯಯನವು ಕಳೆದ ಇಪ್ಪತ್ತೈದು ವರ್ಷಗಳಲ್ಲಿ ಕನ್ನಡದಲ್ಲಿ ಪ್ರಕಟವಾದ ಒಟ್ಟೂ ಕಥಾಸಂಕಲನಗಳನ್ನು ಪ್ರಾಥಮಿಕ ಆಕರವಾಗಿ ಪರಿಗಣಿಸಿದೆ. ಅವುಗಳಿಂದ ಜಾಗತೀಕರಣದ ಪ್ರತಿಸ್ಪಂದನೆಯ ಮಹತ್ವದ ಕಥೆಗಳನ್ನು ಆಯ್ದುಕೊಳ್ಳಲಾಗಿದೆ. ಇದುವರೆಗೂ ಕನ್ನಡ ವಿಮರ್ಶೆಯು ವಿವರಿಸಿಕೊಂಡ ಜಾಗತೀಕರಣದ ನಂತರದ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಪಲ್ಲಟಗಳ ವಿಶ್ಲೇಷಣೆಯನ್ನು ತಾತ್ವಿಕ ಸ್ಪಷ್ಟೀಕರಣಕ್ಕಾಗಿ ಅಧ್ಯಯನ ಮಾಡಲಾಗಿದೆ. ಜಾಗತಿಕ ನೆಲೆಯಲ್ಲಿ ಈ ಕುರಿತ ಅಭಿಪ್ರಾಯಗಳೇನು? ಎಂಬುದನ್ನು ಗಮನಿಸಲಾಗಿದೆ. ಕಥಾ ಲೋಕವು ಆರ್ಥಿಕ ಪರಿಭಾಷೆಗಳ ಹಂಗಿಗೆ ಒಳಗಾಗದೆಯೂ; ಸಾಮಾಜಿಕ ಸಂಗತಿಗಳ ಮೂಲಕವೇ ಜಾಗತೀಕರಣದ ದುರಂತ ವಾಸ್ತವಗಳನ್ನು ಎದುರಿಡುವುದನ್ನು ಗಮನಿಸಿದೆ.ಪ್ರಸ್ತುತ ಅಧ್ಯಯನದ ಮಿತಿಯನ್ನು ಸಾಧ್ಯತೆಯನ್ನು ಸಮಕಾಲೀನ ವಿಮರ್ಶಾ ನಿಲುವುಗಳ ಎದುರಿಟ್ಟು ನೋಡಲು ಪ್ರಯತ್ನಿಸಲಾಗಿದೆ. ಇಲ್ಲಿ ಪ್ರಾತಿನಿಧಿಕವಾಗಿ ಮೂವತ್ತು ಕಥೆಗಳನ್ನು ಎತ್ತಿಕೊಳ್ಳಲಾಗಿದೆ. ಆದರೆ, ಒಂದೊಂದು ಕಥೆಯೂ ತನ್ನ ಹೋಲಿಕೆಯ ಹಲವು ಕಥೆಗಳನ್ನು ಮುನ್ನೆಲೆಗೆ ತರುತ್ತದೆ. ಒಟ್ಟೂ ಕಥೆಗಳ ಅಧ್ಯಯನದ ಫಲಿತವನ್ನು ವಿಂಗಡಿಸಿ, ಅಧ್ಯಯನದ ಪರಿವಿಡಿಯನ್ನಾಗಿ ಮಾಡಿಕೊಂಡಿದೆ. ಈ ಕಥೆಗಳು ಮನುಷ್ಯ ಸಂಬಂಧಗಳಲ್ಲಿ ಸಂಭವಿಸಿದ ಏರುಪೇರುಗಳನ್ನೇ ತಮ್ಮ ಅಭಿವ್ಯಕ್ತಿಯ ಕನ್ನಡಿಯನ್ನಾಗಿಸಿಕೊಂಡಿವೆ. ಇವುಗಳನ್ನು ವೈಯಕ್ತಿಕ ಮತ್ತು ಸಾರ್ವಜನಿಕ ಎಂದು ವಿಭಾಜಕವನ್ನು ಎಳೆಯುವುದೂ ಸಾಧ್ಯವಿಲ್ಲದಂತಹ ಸಂಕೀರ್ಣ ರಚನೆಗಳೆಂಬುದನ್ನು ಗಮನಿಸಿದೆ. ಒಬ್ಬ ಕಥೆಗಾರರ ಒಂದು ಕಥೆಯನ್ನು ಅಧ್ಯಯನಕ್ಕೆ ಮುಖ್ಯ ಎಂದು ಆಯುವಾಗ, ಅದಕ್ಕಿರುವ ತಾತ್ವಿಕ ಕಾರಣಗಳನ್ನು ವಿವರಿಸಿಕೊಳ್ಳಲಾಗಿದೆ. ಇದು ಮುಖ್ಯವಾಗಿ ಅಧ್ಯಯನದ ಗಡಿ ಗೆರೆಯಾಗಿದೆ.

ಅಧ್ಯಾಯ-೨

## ಇದುವರೆಗೆ ನಡೆದ ಅಧ್ಯಯನಗಳ ತಾತ್ವಿಕ ಸಮೀಕ್ಷೆ

ಯಾವುದೇ ಓದು, ಓದುಗರ ನೋಟಕ್ರಮದಿಂದಷ್ಟೇ ಪರಿಪೂರ್ಣವಾಗುವುದಿಲ್ಲ. ಅದು ತನ್ನ ಕಾಲದವರೆಗೂ ಬೆಳೆದು ಬಂದ ತಾತ್ವಿಕತೆಯೊಂದಿಗೆ ವೈಚಾರಿಕ ಜಿಜ್ಞಾಸೆಯೊಂದಿಗೆ ಅನುಸಂಧಾನಗೊಳ್ಳಬೇಕಾಗುತ್ತದೆ. ಸಂಶೋಧನೆಯ ಅಧ್ಯಯನಕ್ಕಂತೂ ಈ ಮಾತು ವಿಶೇಷವಾಗಿ ಅನ್ವಯವಾಗುತ್ತದೆ. ಪ್ರಸ್ತುತ ಜಾಗತೀಕರಣ ಸಂದರ್ಭದ ಕನ್ನಡ ಸಣ್ಣಕಥೆಗಳ ಅಭ್ಯಾಸಕ್ಕೆ ಪೂರಕವಾದ ನಾಲ್ಕು ಓದಿನ ದಾರಿಗಳು ತೆರೆದಿವೆ. – ೧) ಸಣ್ಣಕಥೆ ಎಂಬ ಸಾಹಿತ್ಯ ಅಭಿವ್ಯಕ್ತಿಯು ಸಾಧಿತವಾದ ನವೋದಯ ಕಾಲದಿಂದಲೇ – ಸಣ್ಣಕಥೆ ಎಂದರೇನು? ಅದರ ಸ್ವರೂಪ-ಲಕ್ಷಣಗಳೇನು? ಅದು ತನ್ನ ಕಥನದ ಮೂಲಕ ಏನನ್ನು ಸಾಧಿತವಾಗಿಸುತ್ತದೆ.? ಸಣ್ಣಕಥೆಯ ಓದುಕ್ರಮ ಯಾವುದು? ಇಂಗ್ಲೀಷ ವಿಮರ್ಶಕ ಡ್ರೈಡನ್ನನು-"ಸೃಜನಶೀಲ ಸಾಧ್ಯತೆಗಳಲ್ಲಿ ಸಿನೇಮಾಕ್ಕೆ ಹೋಲುವ ಏಕೈಕ ಅಭಿವ್ಯಕ್ತಿ ಪ್ರಕಾರ ಸಣ್ಣಕಥೆ" – ಎಂದು ಹೇಳಲು ಕಾರಣವಾದ ಆಧಾರಗಳೇನು? ಕರಿಯು ಕನ್ನಡಿಯಲಡಗಿದಂತೆ – ಲೋಕ ಸಮಸ್ತವನ್ನೂ ತನ್ನಲ್ಲಿ ಘನೀಕರಿಸಿ ತೋರುವ ಅಭಿವ್ಯಕ್ತಿಯ ಕೌಶಲ್ಯವೇನು? – ಇಂತಹ ವಿಮರ್ಶೆಯ ಒಂದು ಓದುಪರಂಪರೆಯೇ ಕನ್ನಡದಲ್ಲಿದೆ. ಇವು ಮುಖ್ಯವಾಗಿ ಕಥನ ಕ್ರಮವನ್ನು, ಕಥನ ಶಿಲ್ಪವನ್ನು ಮುಖ್ಯವಾಗಿಟ್ಟುಕೊಂಡು ಚರ್ಚಿಸುತ್ತವೆ. ಈ ವಿಮರ್ಶೆಯು ಕಥೆಗಳನ್ನು ಇಡಿಯಾಗಿಯೂ ಬಿಡಿಯಾಗಿಯೂ ಅಭ್ಯಸಿಸುತ್ತವೆ. ೨) ಸಣ್ಣಕಥೆಯನ್ನು ಸಂಶೋಧನೆಯ ಪ್ರಾಥಮಿಕ ಆಕರವಾಗಿಟ್ಟುಕೊಂಡು ಸಿದ್ಧವಾದ ಸಂಶೋಧನಾ ಪ್ರಬಂಧಗಳು. ಇವು ಕಥೆಗಾರರನ್ನೋ, ಕಥೆಯ ಕಾಲಘಟ್ಟವನ್ನೋ, ಕಥೆಯು ಪ್ರತಿಪಾದಿಸುವ ಸೈದ್ಧಾಂತಿಕ ಧೋರಣೆಗಳನ್ನೋ ಚರ್ಚಿಸುತ್ತವೆ. ಒಬ್ಬ ಕಥೆಗಾರರ ಜೀವನ ದೃಷ್ಟಿ, ಒಂದು ಸಾಹಿತ್ಯಿಕ ಪಂಥದ ಒಲವು-ನಿಲುವುಗಳನ್ನು ಸ್ಪಷ್ಟೀಕರಿಸುತ್ತದೆ. ಇಂತಹ ಹತ್ತಾರು ಪ್ರಬಂಧಗಳು ಈಗಾಗಲೇ ಪ್ರಕಟವಾಗಿವೆ. ನಂತರದ ಅಧ್ಯಯನಕ್ಕೆ ಮಾರ್ಗದರ್ಶಕವೂ ಆಗಿವೆ. ೩) ಕವಿ, ಕಥೆಗಾರ, ಕಲಾವಿದರು ಜೀವನವನ್ನು ವ್ಯಾಖ್ಯಾನಿಸುವ ಕ್ರಮವೊಂದು ಬೇರೆಯೇ ಇರುತ್ತದೆ. ಸಂಗೀತಗಾರ ಪಿ.ಬಿ.ಶ್ರೀನಿವಾಸ ಅವರು –"ಈ ಜಗತ್ತಿನ ಎಲ್ಲ ಆಯುಧಗಳನ್ನೂ ಕರಗಿಸಿ ಅವುಗಳನ್ನು ಸಂಗೀತ ಸಾಧಕಗಳಾಗಿ ಎರಕ ಹೊಯ್ಯಬೇಕು" -ಎಂದಿದ್ದರು. ಕಥೆಗಾರನಿಗೆ ತನ್ನ ಕಥೆಗಳ ಹೊರತಾಗಿಯೂ, ತನ್ನ ಸುತ್ತಿರುವ ಲೋಕದೊಂದಿಗೆ ಮಾತನಾಡಲಿಕ್ಕಿರುತ್ತದೆ. ಈ ಕಥೆಯನ್ನು ಯಾಕೆ ಬರೆದೆ, ಪ್ರೇರಕವಾದ

ಸಂಗತಿಗಳು ಯಾವುವು, ಬದುಕಿನ ಕುರಿತ ತನ್ನ ನಿಲುವುಗಳೇನು ಇತ್ಯಾದಿ ಸಂಗತಿಗಳು ಸಂಕಲನದಲ್ಲಿರುತ್ತವೆ. ಅದೇ ಸಂಕಲನದಲ್ಲಿ ವಿಮರ್ಶಕರು ಬರೆದ ಮುನ್ನುಡಿ, ಮೊದಲ ಮಾತುಗಳಿರುತ್ತವೆ. ಇವುಗಳ ಅಧ್ಯಯನ ಕೂಡ ಕಥೆಗಳು ಕಟ್ಟುವ ಲೋಕಮೀಮಾಂಸೆಯನ್ನು ಅರಿಯುವ ಹಾದಿಯಾಗಿದೆ. ೪) ಕಥೆಗಳು ಜಾಗತೀಕರಣಕ್ಕೆ ಪ್ರತಿಸ್ಪಂದಿಸಿದ ಬಗೆಯನ್ನು ಅಧ್ಯಯನ ಮಾಡುವಾಗ ಜಾಗತೀಕರಣ ಎಂದರೇನು? ಮನುಷ್ಯ ಸಮಾಜ, ಶಿಕ್ಷಣ, ರಾಜಕೀಯ, ಅರ್ಥವ್ಯವಸ್ಥೆ ಈ ಹಲವು ವಲಯಗಳಲ್ಲಿ ಅದು ಉಂಟುಮಾಡುವ ಪರಿಣಾಮಗಳೇನು? ಎಂಬ ಸೈದ್ಧಾಂತಿಕ ವಿಶ್ಲೇಷಣೆಗಳು ನಡೆದಿವೆ. ಈ ವಿಚಾರ ಬರಹಗಳು ಜಾಗತೀಕರಣದ ಕುರಿತು ಅರಿವಿನ ದೀಪ ಮುಡಿಸುತ್ತವೆ. ಈ ನಾಲ್ಕು ಪಥಗಳಲ್ಲಿ ಹಲವಾರು ಸಲ ಹೊಕ್ಕು ಹೊರಬಂದಿರುವ ಓದುಕ್ರಮವು ಈ ಅಧ್ಯಯನದ ಸಾಧ್ಯಾಸಾಧ್ಯತೆಗಳನ್ನು ನಿರ್ಧರಿಸಿದೆ.

ಪ್ರಸ್ತುತ ಅಧ್ಯಾಯದಲ್ಲಿ ಜಾಗತೀಕರಣ ಸಂದರ್ಭದ ಕನ್ನಡ ಸಣ್ಣಕಥೆಗಳ ಕುರಿತು ಇದುವರೆಗೂ ನಡೆದ ಅಧ್ಯಯನಗಳ ತಾತ್ವಿಕ ಸಮೀಕ್ಷೆಯನ್ನು ನಡೆಸಲಾಗಿದೆ. ಅದಕ್ಕೆ ಸಂಬಂಧ ಪಟ್ಟ ಕೆಲವು ಮಾಹಿತಿಗಳನ್ನು ಇಲ್ಲಿ ತಿಳಿಸುವ ಪ್ರಯತ್ನವನ್ನು ಮಾಡಲಾಗಿದೆ. ಜಾಗತೀಕರಣದ ದಟ್ಟಪ್ರಭಾವ ಇರುವ ಇತ್ತೀಚಿನ ದಿನಮಾನಗಳಲ್ಲಿ ಸಣ್ಣಕಥೆಗಳು ಹೆಚ್ಚು ಜನಮನ್ನಣೆಯನ್ನು ಪಡೆದುಕೊಂಡಿವೆ. ಸಮಕಾಲೀನ ವಸ್ತುಸ್ಥಿತಿಯನ್ನು ಮುಖ್ಯವಾಗಿರಿಸಿಕೊಂಡಿರುವ ಸಣ್ಣಕಥೆ ಸಾಹಿತ್ಯಿಕವಾಗಿ ಆಧುನಿಕೋತ್ತರ ಕಾಲಘಟ್ಟದ ಮುಖ್ಯ ಜನವಾಹಿನಿ ಎನಿಸಿಕೊಂಡಿದೆ. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಪಟ್ಟಂತೆ ಬಿಡಿ ಬಿಡಿ ಅಧ್ಯಯನಗಳು, ಚರ್ಚೆಗಳು ನಡೆದರೂ. ಸಮಗ್ರವಾದ ಅಧ್ಯಯನಗಳು ನಡೆದಿಲ್ಲ. ವಿಶ್ಲೇಷಣೆ, ವಿಮರ್ಶಾತ್ಮಕ ಲೇಖನಗಳ ಜೊತೆಗೆ ಕಥಾಸಂಕಲನದ ಮುನ್ನುಡಿ, ಕತೆಗಾರನ ಮಾತುಗಳಲ್ಲಿ ಇಂತಹ ಕುರುಹಗಳು ಕಾಣಸಿಗುತ್ತವೆ. ಅದರಂತೆ ವಿವಿಧ ವಿಶ್ವವಿದ್ಯಾಯಗಳ ಅಡಿಯಲ್ಲಿ ಕೈಗೊಳ್ಳಲಾಗುವ ಎಂ.ಫಿಲ್. ಪಿಎಚ್.ಡಿ ಅಧ್ಯಯನಗಳಲ್ಲಿ ಆಧುನಿಕ ಕನ್ನಡ ಕಥನ ಸಾಹಿತ್ಯವನ್ನು ವಿಭಿನ್ನ ಆಯಾಮಗಳಲ್ಲಿ ಸಂಶೋಧನೆಗೆ ಒಳಪಡಿಸಲಾಗಿದೆ. ಇವೆಲ್ಲವುಗಳನ್ನು ಅಧ್ಯಯನದ ಪೂರ್ವದಲ್ಲಿ ಗಮನಿಸಿದ್ದು, ಅವುಗಳ ಮಾಹಿತಿ ಮತ್ತು ಸಂಕ್ಷಿಪ್ತ ವಿವರಣೆಯನ್ನು ಇಲ್ಲಿ ನೀಡಲಾಗಿದೆ. ಇವು ಪ್ರಸ್ತುತ ವಿಷಯದ ಸಮಗ್ರ ಅಧ್ಯಯನದ ಪೂರಕ ಆಕರಗಳಾಗಿದ್ದು, ಜಾಗತೀಕರಣ ಸಂದರ್ಭದ ಸಣ್ಣಕಥೆಗಳ ವಿಶೇಷತೆಯನ್ನು ಗುರುತಿಸಲು ಅನುಕೂಲಕರವಾಗಿವೆ.

**ಅಧ್ಯಯನ ವಿಷಯಗಳ ಪಟ್ಟಿ :**

**I.ಪಿಎಚ್.ಡಿ ಮಹಾಪ್ರಬಂಧಗಳು :** ಆಧುನಿಕ ಕಾಲದ ಕನ್ನಡ ಕಥಾ ಸಾಹಿತ್ಯದ ಮೇಲೆ ವಿವಿಧ ಪ್ರಕಾರದ ಅಧ್ಯಯನಗಳು ನಡೆದಿವೆ. ಈ ಅಧ್ಯಯನಗಳು ಆಧುನಿಕ ಕಾಲಘಟ್ಟವನ್ನು ನಿರ್ದಿಷ್ಟವಾಗಿರಿಸಿರುವುದರಿಂದ ಅವುಗಳ ಮಾಹಿತಿ ಪಟ್ಟಿಯನ್ನು ಮಾತ್ರ ಇಲ್ಲಿ ನೀಡಲಾಗಿದೆ.

**ವಿಷಯ ಸಂಶೋಧಕ ಮಾರ್ಗದರ್ಶಕರು ವಿಶ್ವವಿದ್ಯಾಲಯ**

೧. ಆಧುನಿಕ ಕನ್ನಡ ಕಥಾ– ಎನ್.ಕೆ.ಕೋದಂಡರಾಮ – ರಾಮೇಗೌಡ– ಮೈಸೂರ ವಿ.ವಿ.
ಸಾಹಿತ್ಯದಲ್ಲಿ ಸಂಸ್ಕೃತಿಕ
ಸಂಘರ್ಷ

೨. ಕನ್ನಡ ನವ್ಯ ಕಥೆಗಳು – ಬಿ.ಕೆ.ಕರಿಗೌಡ ——ಬೆಂಗಳೂರ ವಿ.ವಿ
ಒಂದು ಅಧ್ಯಯನ

೩. ಆಧುನಿಕ ಕನ್ನಡ ಸಣ್ಣ – ಸಿ.ಬಿ.ಹೊನ್ನಯ್ಯ – ಸಿ.ವೀರಣ್ಣ–ಬೆಂಗಳೂರ ವಿ.ವಿ
ಕತೆಗಳಲ್ಲಿ ದಲಿತರ
ಜೀವನ

೪. ಆಧುನಿಕ ಕನ್ನಡ ಕಥಾ – ಎನ್ ಗಾಯತ್ರಿ – ಕೆ.ಮರುಳಸಿದ್ಧಪ್ಪ –ಬೆಂಗಳೂರ ವಿ.ವಿ
ಸಾಹಿತ್ಯದ ಮೂರು
ಪ್ರಮುಖ ಚಳುವಳಿಯಲ್ಲಿ
ಸ್ತ್ರೀ ವಸ್ತು ನಿರ್ವಹಣೆ

೫. ಕನ್ನಡದಲ್ಲಿ ಮುಸ್ಲಿಂ– ಕಲ್ಲಣ್ಣವರ ಶಿವಾನಂದ –ಡಿ.ಎ.ಹುಬ್ಬಳ್ಳಿ–ಕರ್ನಾಟಕ ವಿ.ವಿ
ಲೇಖಕರ ಕಥಾ
ಸಾಹಿತ್ಯ

೬. ಗುಲ್ಬರ್ಗಾ ಜಿಲ್ಲೆಯ – ಸಿದ್ಧಲಿಂಗ –ಚೆನ್ನಣ್ಣ ವಾಲೀಕಾರ –ಗುಲ್ಬರ್ಗಾ ವಿ.ವಿ
ಸಣ್ಣ ಕಥೆಗಳು

೭. ದ.ಕ.ಜಿಲ್ಲೆಯ ಸಣ್ಣ – ಸಬಿಹಾ – ಬಿ.ಎ.ವಿವೇಕ ರೈ –ಮಂಗಳೂರ ವಿ.ವಿ
ಕತೆಗಳ ಹುಟ್ಟು ಮತ್ತು
ಬೆಳವಣಿಗೆ

೮. ನವೋದಯ ಕತೆಗಳು – ಎಸ್.ಪ್ರಸಾದ್‌ಸ್ವಾಮಿ – ಸಿ.ಎಸ್. –ಕುವೆಂಪು ವಿ.ವಿ
–ಪ್ರಯೋಗ ಮತ್ತು ಶಿವಕುಮಾರಸ್ವಾಮಿ
ಅಭಿವ್ಯಕ್ತಿ

೯. ಆರಂಭಿಕ ಕನ್ನಡ ಸಣ್ಣ – ಪ್ರಭು ಸೊಪ್ಪಿನ –ಕರಿಗೌಡ ಬೀಚನಹಳ್ಳಿ– ಹಂಪಿ ವಿ.ವಿ
ಕತೆಗಳ ಕಥನಕ್ರಮದ
ನೆಲೆಗಳು

| | | | |
|---|---|---|---|
| ೧೦.ಕನ್ನಡ ಸಣ್ಣ ಕತೆಗಳು– ಒಂದು ಅಧ್ಯಯನ | ಕೆ.ಭಾಸ್ಕರ | – ಶ್ರೀ.ಕೃಷ್ಣಭ ಆರ್ತಿಕಜೆ | –ಮದ್ರಾಸ್ ವಿ.ವಿ |
| ೧೧.೧೯೭೦–೮೦ ದಶಕದ– ಕನ್ನಡ ಸಣ್ಣ ಕತೆಗಳು ಒಂದು ಅಧ್ಯಯನ | ಮೋಹನಕುಮಾರ | – ವಿ.ಕುಲಕರ್ಣಿ | – ಮಧುರೈ ವಿ.ವಿ |
| ೧೨.ಕನ್ನಡ ಸಣ್ಣ ಕತೆಗಳು– –ಒಂದು ಸ್ತ್ರೀವಾದಿ ಅಧ್ಯಯನ | ಗಿರಿಜಾ ಶಾಸ್ತ್ರಿ | – ತಾಳ್ತಜೆ ವಸಂತಕುಮಾರ | –ಮುಂಬೈ ವಿ.ವಿ |
| ೧೩.ಆಧುನಿಕ ಕನ್ನಡ ಕಥನ– ಸಾಹಿತ್ಯದಲ್ಲಿ ವಾಸ್ತವದ ಪ್ರತಿನಿಧೀಕರಣ : ಒಂದು ಸ್ತ್ರೀವಾದಿ ಅಧ್ಯಯನ | ಎಲ್.ಜಿ.ಮೀರಾ | – _ _ _ | –ಬೆಂಗಳೂರ ವಿ.ವಿ |

**II.ಕೃತಿಗಳ ಮುನ್ನುಡಿ** : ಜಾಗತೀಕರಣ ಸಂದರ್ಭದ ಕನ್ನಡ ಸಣ್ಣಕಥೆಗಳ ಮುಖ್ಯ ಆಶಯಗಳನ್ನು ಕೆಲವು ಕೃತಿಗಳ 'ಮುನ್ನುಡಿ'ಯಲ್ಲಿ ನೋಡಬಹುದಾಗಿದೆ. ಇಲ್ಲಿ ಉಲ್ಲೇಖಿಸಿರುವ ವಿಚಾರಗಳು ನೇರವಾಗಿ ಆಯಾ ಕೃತಿಯಲ್ಲಿನ ಕಥೆಗಳಿಗೆ ಸಂಬಂಧಿಸಿದ್ದು, ಅವು ಕಥಾವಸ್ತುವಿನ ಮುಖ್ಯವಿಚಾರವನ್ನು ಕಥೆಯ ಓದಿನ ಮುಂಚೆಯೆ ಓದುಗನಲ್ಲಿ ಹರಿಬಿಡುತ್ತವೆ. ಇದು ಆತನಿಗೆ ಕಥಾ ಗ್ರಹಿಕೆಯನ್ನು ತಿಳಿಸುವುದರ ಜೊತೆಗೆ ಕತೆಗಾರನ ಮನೋಭಿಲಾಷೆಯನ್ನು ತಿಳಿಯಲು ಪೂರಕವಾಗಿ ನಿಲ್ಲುತ್ತದೆ. ಇಂತಹ ಪ್ರಕ್ರಿಯೆಗೆ ಕೈ ಹಾಕಿರುವ ಕೆಲವು ಬರಹಗಾರರು 'ಮುನ್ನುಡಿ'ಗೆ ಮಹತ್ವವನ್ನು ತಂದುಕೊಟ್ಟಿದ್ದಾರೆ. ಕಾಲಘಟ್ಟವನ್ನು ಗಮನದಲ್ಲಿಟ್ಟುಕೊಂಡು ಕಥೆಗಾರರನ್ನು ಪರಿಭಾವಿಸುವ, ಕಥೆಯನ್ನು ವಿಮರ್ಶಿಸುವ, ವಿಷಯವನ್ನು ಸಂವಾದಿಸುವ ಮತ್ತು ಕಥಾವಸ್ತುವನ್ನು ವಿಶ್ಲೇಷಿಸುವ ಅವರ ಈ ಪ್ರವೃತ್ತಿ ಗಮನಾರ್ಹ ವಿಷಯವಾಗಿದೆ. ಇದು ಕಥೆಯ ಪರಿಪೂರ್ಣ ಓದಿಗೆ ಸಹಾಯಕವಾಗಿದೆ. ಈ ತರಹದ ಕೆಲವು ಅಧ್ಯಯನದ ಪರಿಕರಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ. ಹೊಸತಲೆಮಾರಿನ ಬಹುತೇಕ ಕಥಾ ಸಂಕಲನಗಳ ಮುನ್ನುಡಿಯಲ್ಲಿ ಆಯಾ ಕಥೆಗಳ ಕಿರುವಿಮರ್ಶೆ, ವಿಶ್ಲೇಷಣಾತ್ಮಕ ಚರ್ಚೆಯನ್ನು ನಡೆಸಲಾಗಿದೆ. ಅವುಗಳಲ್ಲಿ ಜಾಗತೀಕರಣ ಸಂದರ್ಭಕ್ಕೆ ಅನುಗುಣವಾಗುವಂತೆ ಕಥಾವಸ್ತುವನ್ನು ಚರ್ಚೆಗೆ ಒಳಪಡಿಸಿರುವ ಕೆಲವು ಮಾಹಿತಿಯನ್ನು ಇಲ್ಲಿ ನೀಡಲಾಗಿದೆ.

**ಕೃತಿಗಳು ಕಥೆಗಾರರು ಮುನ್ನುಡಿ ಲೇಖಕರು**

| | | |
|---|---|---|
| ೧. ಉಡಿಯಲ್ಲಿಯ ಉರಿ | –ಕಲಿಗಣನಾಥ ಗುಡದೂರು | –ರಾಘವೇಂದ್ರ ಪಾಟೀಲ |
| ೨. ಹಕೂನ ಮಟಾಟ | –ನಾಗರಾಜ ವಸ್ತಾರೆ | –ಕೆ.ಸತ್ಯನಾರಾಯಣ |
| ೩. ನಕ್ಸಲ್ ವರಸೆ | –ಕೆ.ಸತ್ಯನಾರಾಯಣ | –ಕೆ.ಫಣಿರಾಜ್ |
| ೪. ಕಾಣದಾಯಿತೋ ಊರುಕೇರಿ | – ಬಿ.ಶ್ರೀನಿವಾಸ | –ಡಾ.ಬಂಜಗೆರೆ ಜಯಪ್ರಕಾಶ |

**೧. ಉಡಿಯಲ್ಲಿಯ ಉರಿ – ಕಲಿಗಣನಾಥ ಗುಡದೂರ: ಮುನ್ನುಡಿ– ರಾಘವೇಂದ್ರ ಪಾಟೀಲ**

ಕಲಿಗಣನಾಥ ಗುಡದೂರರವರ ಮೊದಲ ಕಥಾಸಂಕಲನ 'ಉಡಿಯಲ್ಲಿಯ ಉರಿ' ಎಂಬ ಕೃತಿಗೆ ರಾಘವೇಂದ್ರ ಪಾಟೀಲರವರು ಮುನ್ನುಡಿಯನ್ನು ಬರೆದಿದ್ದಾರೆ. ಇದರಲ್ಲಿ ಅವರು, "ತುಂಗಭದ್ರೆಯ ಆಚೆಯಿಂದ ಅಮರೇಶ ನುಗಡೋಣಿಯವರ ನಂತರ ಇಷ್ಟು ಬೇಗನೇ ಮತ್ತೊಬ್ಬ ಶಕ್ತ ಕಥೆಗಾರನು ಮೂಡಿಬರುತ್ತಿರುವುದು" ಸಂತೋಷವಾಗಿದೆ ಎಂದು ಹೇಳಿಕೊಂಡಿದ್ದಾರೆ. ಇದು ಸಮಕಾಲೀನ ಇಬ್ಬರು ಕತೆಗಾರರಲ್ಲಿನ ವಿಚಾರಗಳ ಸಾಮ್ಯತೆಯನ್ನು ತಿಳಿಸುತ್ತಿರುವಂತೆ ಕಾಣಿಸುತ್ತದೆ. ಈ ರೀತಿಯ ಚರ್ಚೆ ಜಾಗತೀಕರಣ ಸಂದರ್ಭದ ಕಥಾವಸ್ತುವಿನ ಮೇಲೆಯೂ ಬೆಳಕು ಚಲ್ಲುತ್ತದೆ.

"ಹೈದರಾಬಾದ ಕರ್ನಾಟಕ ಪ್ರದೇಶದಲ್ಲಿ ಶಾಂತರಸ & ರಾಜಶೇಖರ ನೀರಮಾನ್ವಿಯವರ ನಂತರ ದೀರ್ಘಕಾಲದವರೆಗೆ ಇಂಥ ಸಂಯಮದ ಕಲಾತ್ಮಕತೆಯನ್ನು ತೋರುವ ಕಥೆಗಾರರು ಕಾಣಿಸದೆ ಈ ಅತ್ಯಲ್ಪ ಕಾಲದಲ್ಲಿಯೇ ಈ ಇಬ್ಬರು ಇಂಥ ಶಕ್ತ ಕಥೆಗಾರರು ಮೂಡಿ ಬರುತ್ತಿರುವುದು ಕುತೂಹಲಕಾರಿಯಾದ ಸಂಗತಿಯಾಗಿದೆ." ಎನ್ನುವಂತಹ ವಿಚಾರ ಕನ್ನಡ ಕಥಾ ಸಾಹಿತ್ಯ ಪರಂಪರೆಯನ್ನು ನಿರೂಪಿಸುತ್ತದೆ.

ಕಲಿಗಣನಾಥ ಗುಡದೂರವರ ಕಥೆಗಳಲ್ಲಿ ಕೆಲವು ಸಂಗತಿಗಳನ್ನು ಗುರುತಿಸುವ ಸಂದರ್ಭದಲ್ಲಿ "ಆಧುನಿಕತೆ, ಆಧುನಿಕ ಶಿಕ್ಷಣ, ಆಧುನಿಕ ಕೈಗಾರಿಕೆಗಳು ಮತ್ತು ಇವೆಲ್ಲವುಗಳು ಕೂಡಿ ರೂಪಿಸುವ ನವಪುರಷಶಾಹಿ" ಎಂದು ಹೇಳುತ್ತಾರೆ. ಈ ಮಾತು ಜಾಗತೀಕರಣದ ದಟ್ಟ ಪ್ರಭಾವವನ್ನು ಕಲಿಗಣನಾಥ ಗುಡದೂರವರ ಕಥೆಗಳು ಒಳಗೊಂಡಿವೆಂಬುದನ್ನು ಸ್ಪಷ್ಟಪಡಿಸುತ್ತದೆ. ಇದರ ಜೊತೆಗೆ ಮುಂದುವರೆದು ಹೇಳುವ ಅವರ ವಿಚಾರಗಳು ಗುಡದೂರವರ ಕತೆಗಳು ಆಧುನಿಕ ಕಥಾ ಸಾಹಿತ್ಯದಿಂದ ಹೇಗೆ ಭಿನ್ನವಾಗಿ ನಿಲ್ಲುತ್ತವೆಂಬುದನ್ನು ತಿಳಿಸುತ್ತಾರೆ.

೨) **ಹಕೂನ ಮಟಾಟ– ನಾಗರಾಜ ವಸ್ತಾರೆ: ಮುನ್ನುಡಿ–ಕೆ. ಸತ್ಯನಾರಾಯಣ.**

ನಾಗರಾಜ ವಸ್ತಾರೆ ಅವರ 'ಹಕೂನ ಮಟಾಟ' ಎಂಬ ಕೃತಿಗೆ ಕೆ. ಸತ್ಯನಾರಾಯಣವರು ಮುನ್ನುಡಿಯನ್ನು ಬರೆದಿದ್ದಾರೆ. ಇದರಲ್ಲಿ "ಹೊಸ ಗೆಳೆಯ ಶ್ರೀ ನಾಗರಾಜ ವಸ್ತಾರೆಯವರ ಮೊದಲ ಸಂಕಲನದ ಇಲ್ಲಿನ ಕತೆಗಳನ್ನು ಕುರಿತಂತೆ ನನ್ನ ಅನಿಸಿಕೆಗಳನ್ನು ನಾನು ಓದುಗರೊಡನೆ ಹಂಚಿಕೊಳ್ಳುತ್ತಿರುವುದು ಇನ್ನೊಬ್ಬ ಕತೆಗಾರನ ಸಮಾನ ಮನಸ್ಕ ನೆಲೆಯಲ್ಲಿ. ಹಾಗಾಗಿ ಇದು ಮುನ್ನುಡಿಯಲ್ಲ"ವೆಂದು ತಿಳಿಸುತ್ತಾರೆ. ಅಂದರೆ ಸಹೃದಯನ ಸ್ಥಾನದಲ್ಲಿ ನಿಂತು ಕಥೆಗಳನ್ನು ಚರ್ಚಿಸುತ್ತಾರೆ. ಇದು ಕಥೆ, ಕಥೆಗಾರನ ಪರಿಚಯಿಸುವುದಕ್ಕಿಂತ ಕಥೆಗಾರ ಮತ್ತು ಸಹೃದಯನ ಮನದಾಳದಲ್ಲಿರುವ ಸಮಾಜದ ವಾಸ್ತವತೆಗೆ ಒತ್ತು ನೀಡುವ ನಿಲುವೆಂದೇ ಹೇಳಬಹುದಾಗಿದೆ. ಈ ರೀತಿ ಚರ್ಚಿಸುವುದರಿಂದ ಕಥೆಯ ನಿಜವಾದ ಮುಖ್ಯ ಆಶಯವೇನೆಂಬುದು ಓದುಗನಿಗೆ ಸ್ಪಷ್ಟವಾಗುತ್ತದೆ.

ಮುಂದುವರೆದು, "ಕಳೆದೆರಡು–ಮೂರು ದಶಕಗಳಲ್ಲಿ ನಮ್ಮ ಸಾಮಾಜಿಕ ವೈಯಕ್ತಿಕ ಜೀವನದಲ್ಲಿ ಆಗುತ್ತಿರುವ ಪಲ್ಲಟಗಳು ಅವರ ಕತೆಗಳ ಹಿನ್ನೆಲೆಯಾಗಿದೆ. ಜಾಗತೀಕರಣ, ಉದಾರೀಕರಣ, ಹಣದ ಪ್ರಭಾವ, ಸರಕು ಸಂಸ್ಕೃತಿ ನಮ್ಮೆಲ್ಲರ ಒಳಬದುಕನ್ನು ಪ್ರವೇಶಿಸಿದೆ, ಪ್ರಭಾವಿಸಿದೆ. ಇದೆಲ್ಲದರ ಬಗ್ಗೆ ನಮ್ಮ ಪ್ರಾಮಾಣಿಕ ನಿಲುವೇನು ಎಂಬುದು ನಮಗೇ ಗೊತ್ತಿಲ್ಲ. ಹಾಗೆ ಗೊತ್ತು ಮಾಡಿಕೊಳ್ಳುವಂತಹ ಹುಡುಕಾಟಕ್ಕೆ ನಾವೆಲ್ಲರು ನಮ್ಮ ನಮ್ಮ ಬರಹಗಳಲ್ಲಿ, ವೃತ್ತಿಗಳಲ್ಲಿ ಕೌಟುಂಬಿಕ ಜೀವನದಲ್ಲಿ ತೊಡಗಿದ್ದೇವೆಯೇ ಎಂಬ ಪ್ರಶ್ನೆಗೆ ಉತ್ತರ ನಮ್ಮ ಕಾಲದ ಪ್ರತಿಯೊಬ್ಬ ಮನುಷ್ಯನ ವೈಯಕ್ತಿಕ ದೈವಕ್ಕೆ ಬಿಟ್ಟಿದ್ದು." ಎನ್ನುವ ಮೂಲಕ ಓದುಗನಲ್ಲಿ ಕಥಾವಸ್ತುವಿನ ಜಾಗೃತಿಯನ್ನು ಬೆಳೆಸಲೆತ್ನಿಸಿದ್ದಾರೆ. ಜಾಗತೀಕರಣ, ಉದಾರೀಕರಣಗಳ ಪರಿಕಲ್ಪನೆಯನ್ನು ಬಿಚ್ಚಿಡುವುದರ ಜೊತೆಗೆ ಕಥೆಗಳನ್ನು ವಿಶ್ಲೇಷಣೆ ಮಾಡಿರುವುದು ಇಲ್ಲಿ ಮುಖ್ಯವಾಗಿ ಗಣನೆಗೆ ಬರುವ ವಿಷಯವಾಗಿದೆ. ಈ ಪರಿಕಲ್ಪನೆಗಳು ಮಾನವ ಬದುಕನ್ನು ಹೇಗೆ ಪ್ರವೇಶಿಸಿದವು? ನಂತರ ಅವು ತಮ್ಮ ಪ್ರಭಾವವನ್ನು ಯಾವ ಬಗೆಯಲ್ಲಿ ಭದ್ರಪಡಿಸಿಕೊಂಡಿವೆ. ಎನ್ನುವಂತಹ ಹತ್ತು ಹಲವು ವಿಚಾರಗಳನ್ನು ಇಲ್ಲಿ ಪ್ರಸ್ತಾಪಿಸುತ್ತಾರೆ. ಒಟ್ಟಾರೆಯಾಗಿ ಮಾನವನ ಸ್ವಾರ್ಥಭಾವನೆ ಇಂತಹ ಪರಿಕಲ್ಪನೆಗಳನ್ನು ಪೋಷಿಸುತ್ತಿದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

೩) ನಕ್ಸಲ್ ವರಸೆ– ಕೆ.ಸತ್ಯನಾರಾಣ – ಕೆ.ಫಣಿರಾಜ

"ಸಾಮಾಜಿಕ ವಾಸ್ತವಗಳನ್ನು ನಯಗೊಳಿಸದೆ ಎಲ್ಲ ಒರಟು ಮುಖಗಳೊಡನೆ ತಮ್ಮ ಕತೆಯೊಳಗೆ ಆವಾಹಿಸಿಕೊಳ್ಳುವ ನಿಷ್ಠುರತೆಯನ್ನು ಸತ್ಯನಾರಾಯಣರವರು ಮೊದಲ ಸಂಕಲನ ದಿಂದಲೂ ಪಾಲಿಸಿಕೊಂಡು ಬಂದಿದ್ದಾರೆ. ಅಷ್ಟೆ ಅಲ್ಲದೆ ಸಂಸಾರಿಕ ಆಯಾಮದಿಂದ ಮಾತ್ರ ಶೋಧಿಸುವುದಕ್ಕೆ ತಮ್ಮ ಕಥನ ತಂತ್ರವನ್ನು ಮಿತಗೊಳಿಸಿಕೊಂಡಿದ್ದರು. ಸಾಮಾಜಿಕ, ರಾಜಕೀಯದ ಆಯಾಮವೇನಿದ್ದರೂ ಅದು ವಾಸ್ತವದ ಬಿಗುವನ್ನು ಹಿಡಿದಿಡುವ ಜಡ ತೂಕದ ಕಲ್ಲಿನ ಹಾಗೆ ಆ ಕತೆಗಳಲ್ಲಿ ಉಪಸ್ಥಿತವಾಗಿತ್ತು. ಒಂದೂವರೆ ದಶಕಗಳ ನಂತರ ಬಂದ ಕತೆಗಳಲ್ಲಿ ಮತ್ತಷ್ಟು ಹುಮ್ಮಸ್ಸಿನಿಂದ ಕೆಲಸ ಮಾಡಿದ್ದಾರೆ" ಇದನ್ನು ಕೆ. ಫಣಿರಾಜ್‌ರವರು 'ನಕ್ಸಲ್ ವರಸೆ' ಎಂಬ ಕೃತಿಗೆ ಬರೆದ ಮುನ್ನುಡಿಯಲ್ಲಿ ಪ್ರಸ್ತಾಪಿಸಿದ್ದಾರೆ. ಸತ್ಯನಾರಾಯಣ ಕತೆಗಳಲ್ಲಿ ವ್ಯಕ್ತವಾಗುವ ನಿಲುವುಗಳ ಆಧಾರದಲ್ಲಿ ಮಾತ್ರ ಅವರ ಕಥಾ ಸಾಹಿತ್ಯದ ಸೈದ್ಧಾಂತಿಕ, ವೈಚಾರಿಕ ನೋಟಗಳ ಕುರಿತಾಗಿ ಇಲ್ಲಿ ಚರ್ಚಿಸಿರುವುದಾಗಿ ಕೆ. ಫಣಿರಾಜ ಅವರು ಹೇಳಿಕೊಂಡಿದ್ದಾರೆ. ಇಲ್ಲಿರುವ ವಿಚಾರಗಳು ಜಾಗತೀಕರಣ ಸಂದರ್ಭದಲ್ಲಿನ ಕೆಲವು ವಾಸ್ತವ ಸಂಗತಿಗಳನ್ನು ಬಿಚ್ಚಿಡುತ್ತವೆ. ಹೀಗಾಗಿ ಈ ಕಥಾಸಂಕಲನದ ಬಹುತೇಕ ಕಥೆಗಳಲ್ಲಿ ಜಾಗತೀಕರಣದ ಪ್ರಭಾವವಿರುವುದನ್ನು ಅವರು ಬಿಚ್ಚಿಡುವ ಪ್ರಯತ್ನವನ್ನು ಮಾಡಿದ್ದಾರೆಂದೇ ಹೇಳಬಹುದಾಗಿದೆ.

೪) ಕಾಣದಾಯಿತೋ ಉರು ಕೇರಿ– ಬಿ.ಶ್ರೀನಿವಾಸ – ಡಾ. ಬಂಜಗೆರೆ ಜಯಪ್ರಕಾಶ

"ಆಧುನಿಕ ಬಂಡವಾಳ ಮತ್ತು ಅದರ ರೀತಿ ರಿವಾಜುಗಳಿಂದ ನೆಲೆ ಕಳೆದುಕೊಳ್ಳುತ್ತಿರುವ ಜನರ ಸಂಕಟಗಳು ಇವರ ಕಥೆಯ ಮುಖ್ಯ ಕಥಾವಸ್ತುಗಳಾಗಿವೆ. ಒಂದು ಸೀಮೆಗೆ ಪ್ರವೇಶಿಸುವ ಹೊಸ ಬಗೆಯ ಯಂತ್ರಗಳು, ವಾಣಿಜ್ಯ ಸಂಬಂಧಗಳು, ಕೈಗಾರಿಕೆಗಳು, ಗಣಿಗಾರಿಕೆ ಮುಂತಾದ ಚಟುವಟಿಕೆಗಳು ಗ್ರಾಮ ಜೀವನದಲ್ಲಿ ಉಂಟು ಮಾಡುವ ಪಲ್ಲಟಗಳನ್ನು ಇವು ಬೇರೆ ಬೇರೆ ಮುಖಗಳಿಂದ ಚಿತ್ರಿಸುತ್ತವೆ." ಎನ್ನುವಂತಹ ವಿಚಾರವನ್ನು ಬಿ.ಶ್ರೀನಿವಾಸ ಅವರ ಕಥೆಗಳನ್ನು ಆಧರಿಸಿ ಬಂಜಗೆರೆ ಜಯಪ್ರಕಾಶರವರು ಹೇಳಿರುವಂತದ್ದು. ಇದು ಕಾಣದಾಯಿತೋ ಊರು ಕೇರಿ ಎಂಬ ಕಥಾಸಂಕಲನದ ಮುನ್ನುಡಿಯಲ್ಲಿ ಮೂಡಿಬಂದಿದೆ.

**III.ಕತೆಗಾರನ ಮಾತುಗಳು :**

೧. ಸವಾರಿ – ಅಮರೇಶ ನುಗಡೋಣಿ

೨. ದೇವರ ದಾರಿ – ಮೊಗಳ್ಳಿ ಗಣೇಶ

ಕೆಲವು ಕಥೆಗಾರರು 'ಮನದಾಳದ ಮಾತು', 'ಮೊದಲ ಮಾತು', 'ನನ್ನ ಮಾತು'ಗಳ ಮೂಲಕ ತಮ್ಮ ಅಂತರಂಗದಲ್ಲಿನ ವಿಚಾರಗಳನ್ನು ಹೊರಹಾಕುವ ಪ್ರಯತ್ನವನ್ನು ಮಾಡಿದ್ದಾರೆ. ಅದರಲ್ಲಿ ಕಲಿಗಣನಾಥರವರು 'ಮನದೊಳಗಿನ ಉರಿ' ಎನ್ನುವ ಶಿರ್ಷಿಕೆಯನ್ನು ಹಾಕಿಕೊಂಡಿದ್ದರೆ. ಇದು ಅವರ ಅಂತರಂಗದಲ್ಲಿನ ಹುಟ್ಟಿಕೊಂಡ ತಳಮಳವನ್ನು ಹೊರಹಾಕಲು ಬಳಸಿದಂತೆ ಭಾಸವಾಗುತ್ತದೆ. ಒಟ್ಟಾರೆಯಾಗಿ ಹೇಳುವುದಾದರೆ ಕಥೆಗಾರರು ತಮ್ಮ ಕಥಾವಸ್ತುಗಳ ಮೂಲ ಕಲ್ಪನೆಯನ್ನು ಇಲ್ಲಿ ಬಿಚ್ಚಿಡುವ ಪ್ರಯತ್ನವನ್ನು ಮಾಡುತ್ತಿದ್ದಂತೆಯೂ ಕಾಣಿಸುತ್ತದೆ. ಅಂತಹ ಪ್ರಮುಖ ಕಥೆಗಾರರ ಮಾತುಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ.

೧. **ಸವಾರಿ– ಅಮರೇಶ ನುಗಡೋಣಿ:**

ಪ್ರತಿಯೊಬ್ಬರು ಬಾಲ್ಯಾವಸ್ಥೆಯಲ್ಲಿ ಮುಗ್ಧ ಮನಸ್ಸನ್ನು ಹೊಂದಿರುತ್ತಾರೆ ಆಗ ತಮ್ಮ ಮುಂದೆ ನಡೆಯುವಂತ ಘಟನೆಗಳನ್ನು ಬಹಳ ಕೂತೂಹಲಕಾರಿಯಾಗಿ ಆಸಕ್ತ ಮನಸ್ಸಿನಿಂದ ವೀಕ್ಷಿಸುತ್ತಾರೆ. ಅಂತಹ ಸಂಗತಿಗಳನ್ನು ತಮ್ಮ ಜೀವನದುದ್ದಕ್ಕೂ ಮರೆಯಲಾರರು. ಅಂತಹ ನೆನಪುಗಳನ್ನು ತಮ್ಮ ಅನುಭವಕ್ಕೆ ಬಂದ ಸಂಗತಿಗಳನ್ನು ಹಾಗೂ ತಮ್ಮ ಬದುಕಿಗೆ ಹೊಂದಿಕೊಂಡ ವ್ಯವಸ್ಥೆಯನ್ನೆ ಕತೆಗಾರರು ತಮ್ಮ ಕಥಾವಸ್ತುವನ್ನಾಗಿಸಿಕೊಂಡು ಕತೆಗಳನ್ನು ರಚಿಸುವುದು ಸಹಜ ಎಂಬ ಅಭಿಪ್ರಾಯವನ್ನು ಅಮರೇಶ ನುಗಡೋಣಿಯವರು ತಮ್ಮ 'ಸವಾರಿ' ಕಥಾಸಂಕಲನದ ಕತೆಗಾರನ ಮಾತಿನಲ್ಲಿ ಹೇಳಿಕೊಂಡಿದ್ದಾರೆ.

ಜಾಗತೀಕರಣ, ಆಧುನೀಕರಣ, ಕಾರ್ಪೋರೇಟಗಳು ಜೀವನ ಪದ್ಧತಿಯನ್ನೇ ಬದಲು ಮಾಡಿವೆ. ಅದರಿಂದಾಗಿ ಹೊಸ ಸಮಸ್ಯೆಗಳು ಮನುಷ್ಯ ಬೆನ್ನಿಗೆ ಕಟ್ಟಿಕೊಳ್ಳುತ್ತಿವೆ ಎಂದು ತಿಳಿಸುತ್ತಾರೆ. ಜೊತೆಗೆ ಗಣಿಗಾರಿಕೆ, ರೈತಾಪಿ ವರ್ಗದ ಸ್ಥಿತಿ, ವಲಸೆಹೋಗುವವರ ಜೀವನ ಕ್ರಮ, ಮುಂತಾದ ವಿಷಯಗಳ ನಿಜಸಂಗತಿಗಳನ್ನು ಇಲ್ಲಿ ಪ್ರಸ್ತಾಪಿಸಿದ್ದಾರೆ.

೨. ದೇವರ ದಾರಿ–ಮೊಗಳ್ಳಿ ಗಣೇಶ:

"ಬಹರಾಷ್ಟ್ರೀಯ ಕಂಪನಿಗಳಲ್ಲೋ; ವಿದೇಶಗಳಲ್ಲೊ ಇದ್ದು ಬಹಳ ಚೆನ್ನಾಗಿ ಕಥೆ ಬರೆಯುವವರು ಈಗ ಸಾಕಷ್ಟು ಸಂಖ್ಯೆಯಲ್ಲಿ ಇದ್ದಾರೆ. ಅವರು ಜಾಗತೀಕರಣದ ಬದಲಾವಣೆಗಳು ತಂದೊಡ್ಡುವ ವಿಪರ್ಯಾಸಗಳನ್ನು ನಿವೇದಿಸುತ್ತಲೇ; ಅದೇ ವ್ಯವಸ್ಥೆಯ ಫಲಾನುಭವಿಗಳೂ ಆಗಿರುತ್ತಾರೆ. ನಾನು ಜಾಗತೀಕರಣದ ಪರ ಎಂಬ ಒಂದು ಬೀಸು ಅಭಿಪ್ರಾಯವಿದೆ. ಇರಬಹುದು; ಆದರೆ ಕಥೆ ಬರೆವಾಗ ನಾನು ಅದನ್ನು ಅನುಮಾನಿಸುತ್ತೇನೆ; ವೈಚಾರಿಕ ನಿರ್ವಚನದಲ್ಲಿ ಅದರ ಬಗ್ಗೆ ಉದಾರವಾಗಿರುತ್ತೇನೆ. ಕಾಲ ಜನನ ಮರಣಗಳಿಗೆ ವ್ಯತ್ಯಾಸ ಮಾಡುವುದಿಲ್ಲ ಎಂದುಕೊಂಡರೂ; ಜನನ ಮರಣಗಳಿಗೆ ಒಳಪಡುವ ಜನರಿಗೆ ಕಳೆದು ಹೋದದ್ದರ ಬಗ್ಗೆ ವಿಪರೀತ ಮೋಹವಿರುತ್ತದೆ. ಮನುಷ್ಯರ ಕಥೆ ಭಾಗಶಃ ಇಂತಹ ಮೋಹದಿಂದಲೇ ಭಾಷೆಯನ್ನು ಸಾಹಿತ್ಯವನ್ನು ವಿಸ್ತರಿಸಿಕೊಂಡಿತೇನೊ..." ಎನ್ನುವುದು ಗಣೇಶ ಮೊಗಳ್ಳಿಯವರ ಮನದಾಳದ ಮಾತುಗಳು. ಇಂತಹ ವಿಚಾರವೊಂದನ್ನು ತಮ್ಮ 'ದೇವರ ದಾರಿ' ಕಥಾಸಂಕಲನದ 'ನನ್ನ ಮಾತು' ಎನ್ನುವಲ್ಲಿ ಹಂಚಿಕೊಳ್ಳುತ್ತಾರೆ. ಇದು ಕತೆಗಾರನೊಬ್ಬನ ಕಥಾವಸ್ತುವಿನ ಮೂಲವನ್ನು ತಿಳಿಸಿಕೊಡುವ ಪ್ರಯತ್ನವೆಂದೇ ಹೇಳಬಹುದಾಗಿದೆ. ಇಂತಹ ವಿಚಾರಗಳನ್ನು ಅವರು ಇಲ್ಲಿ ತಿಳಿಸಿರುವುದು ಸೂಕ್ತವಾದ ಮಾರ್ಗವೊಂದನ್ನು ಓದುಗನಿಗೆ ಕಟ್ಟಿಕೊಟ್ಟಂತಾಗಿದೆ.

IV. ವಿಮರ್ಶಕ ಮತ್ತು ವಿಶ್ಲೇಷಕರ ಮಾತುಗಳು :

೧. ಜಿ.ಎಸ್.ಆಮೂರ

೨. ರಹಮತ್ ತರೀಕೆರಿ

೩. ಟಿ.ಪಿ.ಅಶೋಕ

ಜಾಗತೀಕರಣ ಸಂದರ್ಭದ ಸಣ್ಣ ಕತೆಗಳನ್ನು ಕುರಿತು ವಿಮರ್ಶಕರು ತಮ್ಮ ನಿಲುವುಗಳನ್ನು ವ್ಯಕ್ತಪಡಿಸಿದ್ದಾರೆ. ಇದರಿಂದ ನವ ಕಥಾ ಸಾಹಿತ್ಯಕ್ಕೆ ಮೆರಗು ಬಂದಿದೆ. ಅಂತಹ ಕೆಲವು ವಿಮರ್ಶಕರ ಮಾತುಗಳು ಹೀಗಿವೆ.

೧) ಜಿ.ಎಸ್. ಆಮೂರ:

"ಸುಮಾರು ೧೯೮೦ ರ ಆಸುಪಾಸಿನಲ್ಲಿ ತಮ್ಮ ಪ್ರಥಮ ಕಥಾ ಸಂಗ್ರಹಗಳನ್ನು ಪ್ರಕಟಿಸಿದ ಕತೆಗಾರರನ್ನು ನಾನು ಹೊಸ ಕತೆಗಾರರೆಂದು ಪರಗಣಿಸಿದ್ದೇನೆ ಇವರಲ್ಲಿ ದಲಿತ–ಬಂಡಾಯ ಚಳುವಳಿಗೆ ಸೇರಿದ ಕತೆಗಾರರಿದ್ದಾರೆ. ಮಹಿಳೆಯರಿದ್ದಾರೆ ಹಾಗೂ ಕೆಲವೊಂದು

ನವ್ಯೋತ್ತರ ಧೋರಣೆಗಳನ್ನು ಹೊಂದಿದ ಸ್ವತಂತ್ರ ಬರಹಗಾರರಿದ್ದಾರೆ. ಎರಡು ದಶಕಗಳಿಂದ ಕಾದಂಬರಿಗಿಂತ ಸಣ್ಣ ಕತೆಯ ಪ್ರಕಾರವೇ ಹೆಚ್ಚು ಪ್ರತಿಭಾವಂತ ಬರಹಗಾರರನ್ನು ಆಕರ್ಷಿಸುತ್ತಿರುವುದರಿಂದ ಇವರ ಸಂಖ್ಯೆಯೂ ದೊಡ್ಡದಿದೆ. ಈ ಕಾಲಖಂಡದ ಯಾವುದೇ ಪ್ರಾತಿನಿಧಿಕ ಸಂಕಲನವೂ ಜಯಂತ ಕಾಯ್ಕಿಣಿ, ರಾಘವೇಂದ್ರ ಪಾಟೀಲ, ಕೆ.ಸತ್ಯನಾರಾಯಣ, ಎಸ್.ದಿವಾಕರ, ರಾಜೇಂದ್ರ ಚೆನ್ನಿ, ಮಹಾಬಲಮೂರ್ತಿ ಕೊಡ್ಲೆಕೆರೆ, ಎಂ.ಎಸ್. ಶ್ರೀರಾಮ, ಕೇಶವ ಮಳಗಿ, ಶ್ರೀಧರ ಬಳಗಾರ, ಎಸ್.ಎಫ್. ಯೋಗಪ್ಪನವರ್, ರಾಜಶೇಖರ ಹತಗುಂದಿ, ಲೋಹಿತ್ ನಾಯ್ಕರ – ಇಂತಹ ಲೇಖಕರನ್ನು ನಿರ್ಲಕ್ಷಿಸಲಾರದು." ಎಂದು ಜಿ.ಎಸ್. ಆಮೂರವರು ಜಾಗತೀಕರಣ ಸಂದರ್ಭದ ಕತೆಗಾರರ ಪಟ್ಟಿಯನ್ನು ನೀಡುವುದರ ಜೊತೆಗೆ ಸಮಕಾಲೀನ ಸಣ್ಣ ಕಥಾ ಪರಂಪರೆ ಆಧುನಿಕತೆಗಿಂತ ಹೇಗೆ ಭಿನ್ನವಾಗಿದೆ ಎನ್ನುವುದನ್ನು ತಿಳಿಯಪಡಿಸುತ್ತಾರೆ.

**೨) ರಹಮತ್ ತರೀಕೆರೆ:**

"ಬಂಡಾಯ ಚಳುವಳಿಯು ಕಾವ್ಯ ಪ್ರಧಾನವಾಗಿರುವಂತೆ ಕಂಡರೂ, ೧೯೮೦ರ ದಶಕದಲ್ಲಿ ಬಂದ ಕತೆ–ಕಾದಂಬರಿಗಳು ಕನ್ನಡಕ್ಕೆ ಹೊಸ ಸತ್ವವನ್ನು ಸೇರಿಸಲಾರಂಭಿಸಿವೆ. ಹೆಚ್ಚಾಗಿ ಮಧ್ಯಮವರ್ಗದ ಶಿಷ್ಟ ಅನುಭವದ ಲೇಖಕರ ಅಡುಂಬೊಲವಾಗಿದ್ದ ಸಣ್ಣಕತೆಯ ಕ್ಷೇತ್ರಕ್ಕೆ, ಗ್ರಾಮೀಣ ಕೆಳಜಾತಿ ವರ್ಗ ಹಾಗೂ ಅಲ್ಪ ಸಂಖ್ಯಾತ ಸಮುದಾಯಗಳಿಂದ ಮೊದಲ ಸಲಕ್ಕೆ ಅಕ್ಷರಸ್ಥವಾದ ತರುಣ ತಲೆಮಾರು ಕಾಲಿಡುತ್ತಾ, ಹೊಸ ಸಾಂಸ್ಕೃತಿಕ ಚಲನೆಯ ಆಶಯಗಳನ್ನು ಪ್ರಕಟಿಸುತ್ತಿದೆ." ಎನ್ನುವಂತಹ ವಿಚಾರಗಳು ರಹಮತ್ ತರೀಕೆರೆಯವರ 'ಪ್ರತಿಸಂಸ್ಕೃತಿಯನ್ನು ರೂಪಿಸುತ್ತಿರುವ ಸಣ್ಣಕತೆಗಳು' ಎಂಬ ಲೇಖನದಲ್ಲಿ ಮೂಡಿಬಂದಿವೆ. ಇದು ಜಾಗತಿಕ ಜಗತ್ತನ್ನು ಸಣ್ಣಕಥೆಗಳು ನೋಡುತ್ತಿರುವ ದೃಷ್ಟಿಕೋನವನ್ನು ತಿಳಿಸುತ್ತದೆ. ಇಂತಹ ಹಲವು ವಿಚಾರಗಳನ್ನು ಒಳಗೊಂಡಿರುವ ಈ ಲೇಖನವು ಆಧುನಿಕೋತ್ತರದ ಸಣ್ಣಕಥೆಗಳ ಪ್ರಾಮುಖ್ಯತೆಯನ್ನು ಬಿಂಬಿಸುತ್ತದೆ.

**೩) ಟಿ.ಪಿ.ಅಶೋಕ :**

"ಕನ್ನಡ ಸಣ್ಣಕಥೆಗಳು ಒಳಗೊಂಡಿರುವ ಅನುಭವದ್ರವ್ಯ ಅಗಾಧವಾದದ್ದು. ಮನುಷ್ಯ ಸ್ವಭಾವ, ಮನುಷ್ಯ ಸಂಬಂಧಗಳು, ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ, ಆರ್ಥಿಕ, ಮನೋವೈಜ್ಞಾನಿಕ, ಆಧ್ಯಾತ್ಮಿಕ ಸಮಸ್ಯೆಗಳ ಜಿಜ್ಞಾಸೆ, ಜಾತಿ–ವರ್ಗ–ಲಿಂಗ ಅಸಮಾನತೆಗಳ ಶೋಧ, ಅಸ್ಮಿತೆಯ ಪ್ರಶ್ನೆ, ಸಾಮಾಜಿಕ ನ್ಯಾಯದ ನಿರ್ವಚನೆ, ಪಲ್ಲಟಗೊಳ್ಳುತ್ತಿರುವ

ಜೀವನಕ್ರಮಗಳ ಅವಲೋಕನ, ಚಲನಶೀಲ ಇತಿಹಾಸದ ದಿಕ್ಕು-ದೆಸೆ-ಗತಿಗಳ ಪ್ರತಿಫಲನ ಹೀಗೆ ಮನುಷ್ಯಾನುಭವದ ಹಲವು ಮುಖಗಳ ದರ್ಶನವನ್ನು ಮಾಡಿಸುವ ಕನ್ನಡ ಕತೆಗಾರರು ಸಾಧಿಸಿರುವ ಕಥನ ವೈವಿಧ್ಯ ಮತ್ತು ನಿರೂಪಣೆಯಲ್ಲಿ ತೋರಿರುವ ಪ್ರಯೋಗಶೀಲತೆಗಳೂ ಅಭ್ಯಾಸಯೋಗ್ಯವಾಗಿವೆ." ಇದು ಟಿ.ಪಿ. ಅಶೋಕರವರ ಸಣ್ಣಕಥೆಗಳ ಓದಿನ ವಿಚಾರಗಳಾಗಿದ್ದರೂ ವಾಸ್ತವ ಬದುಕಿನೊಂದಿಗೆ ಸಣ್ಣಕಥೆಗಳು ರೂಪಗೊಂಡಿವೆಯೆಂಬ ಸಂದೇಶವನ್ನು ಸಾರುತ್ತದೆ.

**V. ವಿಮರ್ಶಾ ಲೇಖನಗಳು :**

೧. ಹುಲಿ ಸವಾರಿ (ವಿವೇಕ ಶಾನಭಾಗ) ನರಹಳ್ಳಿ ಬಾಲಸುಬ್ರಹ್ಮಣ್ಯ

೨. ಅಮೃತಬಳ್ಳಿ ಕಷಾಯ ( ಜಯಂತ ಕಾಯ್ಕಿಣಿ) ಜಿ.ಎಸ್.ಆಮೂರ

**೧) ಹುಲಿ ಸವಾರಿ (ವಿವೇಕ ಶಾನಭಾಗ)- ನರಹಳ್ಳಿ ಬಾಲಸುಬ್ರಹ್ಮಣ್ಯ**

"ವಿವೇಕ ಶಾನಭಾಗ ಅವರಿಗೆ ಕತೆಯ ರಚನೆ ಒಂದು ರೀತಿಯಲ್ಲಿ ನಿಧಿಯ ಹುಡುಕಾಟ ಇದ್ದಂತೆ. ಈ ನಿಧಿ ದೇಹದಲ್ಲಿರಬಹುದು, ದೇಗುಲದಲ್ಲಿರಬಹುದು, ನಮ್ಮ ಸಾಮಾಜಿಕ ರಚನೆಯ ಸ್ವರೂಪದಲ್ಲಿರಬಹುದು, ಪ್ರಜಾಪ್ರಭುತ್ವವನ್ನು ಅರ್ಥೈಸಿಕೊಳ್ಳುವ ರಾಜಕೀಯ ಪ್ರಜ್ಞೆಯಲ್ಲಿರಬಹುದು. ವಿವೇಕರ ಸೃಜನಶೀಲತೆ ಈ ಎಲ್ಲದರಲ್ಲೂ ಇರಬಹುದಾದ ಅಥವಾ ಇವುಗಳಲ್ಲಿ ಕಳೆದುಹೋಗಿರುವ ಬದುಕಿನ ಅರ್ಥವಂತಿಕೆಯ 'ನಿಧಿ'ಯನ್ನು ಹುಡುಕಿ ಹೊರಟಿದೆ" ಎಂಬ ಅಭಿಪ್ರಾಯವನ್ನು ನರಹಳ್ಳಿ ಬಾಲಸುಬ್ರಹ್ಮಣ್ಯ ಅವರು ವಿವೇಕರ ಕಥಾ ಸಾಹಿತ್ಯ ರಚನೆಯ ವಿಶಿಷ್ಟತೆಯನ್ನು ಹೇಳಿದ್ದಾರೆ.

" 'ಹುಲಿಸವಾರಿ' ವಿವೇಕ ಶಾನಭಾಗರ ಮೂರನೆಯ ಕಥಾಸಂಕಲನ. 'ಅಂಕುರ' ಹಾಗೂ 'ಲಂಗರು' ಕಥಾ ಸಂಕಲನಗಳಲ್ಲಿ ಅಷ್ಟೇನೂ ಎದ್ದು ಕಾಣುವ ಕತೆಗಾರಿಕೆಯನ್ನು ಪ್ರಕಟಿಸದಿದ್ದ ವಿವೇಕ 'ಹುಲಿಸವಾರಿ'ಯಲ್ಲಿ ಮಹತ್ವಾಕಾಂಕ್ಷೆಯ ಪ್ರಯತ್ನ ಮಾಡಿದ್ದಾರೆ." ಹುಲಿಸವಾರಿಯಲ್ಲಿನ ಕೆಲವು ಮುಖ್ಯ ವಿಚಾರವನ್ನು ಸೂಕ್ಷ್ಮವಾಗಿ ಗಮನಿಸುತ್ತ "ಆಧುನಿಕ ಬದುಕು ಒಂದು ರೀತಿಯಲ್ಲಿ 'ಮ್ಯಾನೇಜ್‌ಮೆಂಟ್ ಗೇಮ್'. ಜಾಗತಿಕ ಮಟ್ಟದಲ್ಲಿ ವ್ಯವಹಾರ ನಿರ್ವಹಿಸಲು ತರಬೇತುಗೊಳಿಸುವ ಅತ್ಯುತ್ತಮ ವಿಧಾನವೆಂದು ಈ ಮ್ಯಾನೇಜ್ ಮೆಂಟ್ ಗೇಮ್ ಹೆಸರುವಾಸಿ." ಎಂದು ಹೇಳುವುದು ಜಾಗತೀಕರಣದ ಪ್ರಭಾವ ತೃತೀಯ ರಂಗದ ದೇಶಗಳಲ್ಲಿ ಆವರಿಸಿಕೊಳ್ಳುತ್ತಿರುವುದನ್ನು ತಿಳಿಸುತ್ತದೆ. ಇದು ವಿವೇಕ ಶಾನಭಾಗ ಅವರ

ಕಥೆಯಲ್ಲಿ ಚಿತ್ರಿತವಾಗಿರುವುದನ್ನು ನರಹಳ್ಳಿ ಬಾಲಸುಬ್ರಹ್ಮಣ್ಯರು ಗುರುತಿಸಿದ್ದಾರೆ. ಜೊತೆಗೆ ಈ ಕಥೆಯು ಆಧುನಿಕ ಬದುಕನ್ನು ಯಾವ ಮಾದರಿಯಲ್ಲಿ ಪ್ರತಿನಿಧಿಸುತ್ತದೆ ಎಂಬುದನ್ನು ಚರ್ಚಿಸಿದ್ದಾರೆ. ಒಟ್ಟಾರೆಯಾಗಿ ಈ ಲೇಖನವು ಆಧುನಿಕೋತ್ತರದ ಒಳ ಹರಿವನ್ನು ಈ ಕಥೆಯು ಒಳಗೊಂಡಿದೆ ಎಂಬುದನ್ನು ಇಲ್ಲಿ ತಿಳಿಸುವ ಪ್ರಯತ್ನ ಮಾಡಿದ್ದಾರೆ.

**೨) ಅಮೃತಬಳ್ಳಿ ಕಷಾಯ (ಜಯಂತ ಕಾಯ್ಕಿಣಿ) ಜಿ.ಎಸ್.ಆಮೂರ:**

"'ಅಮೃತಬಳ್ಳಿ ಕಷಾಯ'ದ ಕತೆಗಳಲ್ಲಿ ಕಾಯ್ಕಿಣಿಯವರು ಸಂಪೂರ್ಣವಾಗಿ ಹೊಸ ಹಾದಿ ತುಳಿದಿದ್ದಾರೆ. ಈ ಕತೆಗಳ ಒಂದು ಎದ್ದು ಕಾಣುವ ವೈಶಿಷ್ಟ್ಯವೆಂದರೆ ಅವುಗಳ ಸಾಮಾಜಿಕತೆ. ಕಾಯ್ಕಿಣಿಯವರ ಪ್ರಾರಂಭದ ಕತೆಗಳೆಲ್ಲ ವ್ಯಕ್ತಿಕೇಂದ್ರಿತವಾದವುಗಳು. ಸಾಮಾಜಿಕ ಪರಿಸರಕ್ಕೆ ಅಲ್ಲಿ ಆದ್ಯತೆಯಿಲ್ಲ. ಆದರೆ ಇತ್ತೀಚಿನ ಕತೆಗಳಲ್ಲಿ ಸಮಾಜದ ನಿರ್ಲಕ್ಷಿತ, ಶೋಷಿತ ಹಾಗೂ ತೀರ ಸಾಮಾನ್ಯರೆನ್ನಿಸುವವರ ಬದುಕು ಅವರ ಶೋಧನೆಯ ವಿಷಯವಾಗಿದೆ. ಈ ಬದುಕಿನ ನೋವು ಯಾತನೆಗಳ ವಾಸ್ತವದ ಗ್ರಹಿಕೆಯೊಡನೆ ಅವುಗಳನ್ನು ಮೀರಿ ಹೊರಹೊಮ್ಮುವ ಜೀವಧ್ವನಿ ಹಾಗೂ ಸುಖದ ಹಂಬಲಗಳನ್ನು ಗುರುತಿಸುವ ಒಂದು ಪ್ರಾಮಾಣಿಕ ಪ್ರಯತ್ನ ಇಲ್ಲಿರುವುದು ಈ ಕತೆಗಳ ವೈಶಿಷ್ಟ್ಯವಾಗಿದೆ." ಇದು ಜಯಂತ ಕಾಯ್ಕಿಣಿಯವರ ಕಥಾವೈಶಿಷ್ಟ್ಯದ ಜೊತೆಗೆ ಜಾಗತೀಕರಣ ಸಂದರ್ಭದ ಸಣ್ಣಕತೆಗಳ ಮುಖ್ಯ ಕಥಾವಸ್ತುವಿನ ಮೇಲೂ ಬೆಳಕು ಚೆಲ್ಲುತ್ತದೆ.

ಜಾಗತೀಕರಣ ಸಂದಂರ್ಭದ ಸಣ್ಣ ಕಥೆಗಳ ಮುಖ್ಯ ಪ್ರವೃತ್ತಿಗಳು ಎಂಬ ವಿಷಯಕ್ಕೆ ಸಂಬಂಧಿಸಿದಂತೆ ಈ ಹಿಂದೆ ನಡೆದ ಅಧ್ಯಯನಗಳ ಪಟ್ಟಿಯನ್ನು ಹೀಗೆ ಗುರುತಿಸಿಕೊಳ್ಳಲಾಗಿದೆ. ಆಧುನಿಕೋತ್ತರ ಕಾಲಘಟ್ಟದಲ್ಲಿ ಸಣ್ಣ ಕಥೆಯು ಬಹುಬೇಗನೆ ಸಹೃದಯನ ಮನಸ್ಸನ್ನು ಆಕ್ರಮಿಸಿದೆ. ಇದು ಪ್ರತಿಭಾವಂತ ಲೇಖಕನ ಆಸಕ್ತಿಯ ನೆಲೆಯಾಗಿ ಪರಿಣಮಿಸಿದ್ದರಿಂದ ವಿಭಿನ್ನ ರೀತಿಯಲ್ಲಿ ತನ್ನ ವಿಸ್ತಾರವನ್ನು ರೂಪಿಸಿಕೊಳ್ಳಲು ಕಾರಣವಾಯಿತು. ಅಲ್ಪ ಮಿತಿಯಲ್ಲಿಯೆ ಸಹೃದಯನಿಗೆ ವಿಷಯವಸ್ತುವನ್ನು ಮುಟ್ಟಿಸುವುದರಿಂದ ಕನ್ನಡ ಸಾಹಿತ್ಯದಲ್ಲಿ ಹಾಗೂ ಸಮಾಜ ಸುಧಾರಣೆಯಲ್ಲಿ ಬಹುಮುಖ್ಯ ಪಾತ್ರವಹಿಸುತ್ತದೆ. ಹೀಗಾಗಿ ಇದರ ಬಗೆಗೆ ಇನ್ನೂ ಹೆಚ್ಚು ಅಧ್ಯಯನಗಳು ನಡೆಯಬೇಕಾಗಿದೆ. ನಡೆಯಬೇಕಾದ ಅವಶ್ಯಕತೆಯನ್ನು ಮನಗಂಡು ಈ ವಿಷಯವನ್ನು ಆಯ್ದು ಕೊಳ್ಳಲಾಗಿದೆ.

## ಪರಾಮರ್ಶನ ಗ್ರಂಥಗಳು


ಉಡಿಯಲ್ಲಿಯ ಉರಿ – ಕಲಿಗಣನಾಥ ಗುಡದೂರ

ಹಕೂನ ಮಟಾಟ – ನಾಗರಾಜ ವಸ್ತಾರೆ

ನಕ್ಸಲ್ ವರಸೆ – ಕೆ. ಸತ್ಯನಾರಾಯಣ

ಕಾಣದಾತೋ ಊರುಕೇರಿ – ಬಿ.ಶ್ರೀನಿವಾಸ

ಸವಾರಿ – ಅಮರೇಶ ನುಗಡೋಣಿ

ದೇವರ ದಾರಿ – ಮೊಗಳ್ಳಿ ಗಣೇಶ

ಕನ್ನಡ ಕಥನ ಸಾಹಿತ್ಯ ಸಣ್ಣಕತೆ – ಜಿ.ಎಸ್. ಆಮೂರು

ಪ್ರತಿ ಸಂಸ್ಕೃತಿ – ರಹಮತ್ ತರೀಕೇರೆ

ಕಥನ ಪ್ರೀತಿ – ಟಿ.ಪಿ.ಅಶೋಕ

ಸಾಹಿತ್ಯ ಸಂಸ್ಕೃತಿ – ನರಹಳ್ಳಿ ಬಾಲಸುಬ್ರಹ್ಮಣ್ಯ

# ಅಧ್ಯಾಯ–ಮೂರು
# ಪರಿಕಲ್ಪನಾತ್ಮಕ ಚರ್ಚೆ : ಸೃಜನಶೀಲತೆಯ ಭೂಮಿಕೆಯಾಗಿ

೩:೧ ನವವಸಾಹತುಶಾಹಿ

೩:೨ ಉದಾರೀಕರಣ

೩:೩ ಖಾಸಗೀಕರಣ

೩:೪ ನಗರೀಕರಣ

೩.೫ ಜಾಗತೀಕರಣ

೩.೬ ಕೋಮುವಾದ, ಮತೀಯವಾದ, ರಾಷ್ಟ್ರೀಯವಾದ

## ಪರಿಕಲ್ಪನಾತ್ಮಕ ಚರ್ಚೆ : ಸೃಜನಶೀಲತೆಯ ಭೂಮಿಕೆಯಾಗಿ

ಜಾಗತೀಕರಣ ಎನ್ನುವುದು ಅರ್ಥವ್ಯವಸ್ಥೆಯಲ್ಲಿ ಉಂಟಾದ ಚಾರಿತ್ರಿಕ ಪಲ್ಲಟ. ಈ ಪಲ್ಲಟವು ಮುಕ್ತ ಆರ್ಥಿಕತೆಯನ್ನು ಪ್ರತಿಪಾದಿಸಿತು. ಹಣದ ಹರಿವು ಊಹೆಯನ್ನು ಮೀರಿ ಹೆಚ್ಚಿತು. ಸಮಾಜದ ರಚನೆಯಲ್ಲಿ ಮೂಲಭೂತ ಬದಲಾವಣೆಗಳು ನಡೆದವು. ಈ ಬದಲಾವಣೆಯು ಯಾವುದೇ ಒಂದು ಸಮಾಜದಲ್ಲಿ ಸಹಜವಾಗಿ ನಡೆಯುವ ಬದಲಾವಣೆ ಅಥವಾ ಬೆಳವಣಿಗೆ ಆಗಿರಲಿಲ್ಲ. ಇದಕ್ಕೊಂದು ಆಸ್ಫೋಟಕ ಗುಣವಿತ್ತು. ಇದು ಸಾಮಾಜಿಕ ಸಂರಚನೆಯನ್ನು ಅಕ್ಷರಶಃ ಛಿದ್ರವಾಗಿಸಿತು. ಹಲವು ಜಾತಿ, ಧರ್ಮ, ಲಿಂಗ, ವರ್ಗ ತಾರತಮ್ಯಗಳನ್ನು ಉಸಿರಾಡುತ್ತ, ಮೇಲ್ನೋಟಕ್ಕೆ ಒಂದು ಸಾಂಸ್ಕೃತಿಕ ವಿನ್ಯಾಸವಾಗಿ ಭಾಸವಾಗುತ್ತಿದ್ದ ಭಾರತೀಯ ಸಮಾಜವು ಈ ಛಿದ್ರತೆಯನ್ನು ತಾಳಿಕೊಳ್ಳುವುದು ಸಾಧ್ಯವಿರಲಿಲ್ಲ. ಜೀವನದ ಪ್ರಾಥಮಿಕ ತಿಳುವಳಿಕೆಗಳೂ ಹಲವು ಸ್ಥಿತ್ಯಂತರಗಳಿಗೆ ಒಳಗಾದವು.

ಭಾರತೀಯ ಸಮಾಜಕ್ಕೆ ಹತ್ತೊಂಭತ್ತನೆಯ ಶತಮಾನದ ಆರಂಭದ ದಶಕದಲ್ಲಿ ಪ್ರವೇಶಿಸಿದ ಆಧುನಿಕತೆಗೂ ; ಹತ್ತೊಂಭತ್ತನೆಯ ಶತಮಾನದ ಕೊನೆಯ ದಶಕದಲ್ಲಿ ಪ್ರವೇಶಿಸಿದ ಜಾಗತೀಕರಣಕ್ಕೂ ವ್ಯತ್ಯಾಸವಿದೆ. ಆದರೆ ಈ ವ್ಯತ್ಯಾಸ ಗೋಚರವಾಗದ ರೀತಿಯಲ್ಲಿ ಇವು ಹೊರ ಆವರಣದಲ್ಲಿ ಒಂದೇ ಆಗಿವೆ. ಮೇಲ್ನೋಟಕ್ಕೆ ಆಧುನಿಕತೆಯ ಮುಂದುವರಿಕೆಯಾಗಿಯೇ ಜಾಗತೀಕರಣ ಕಾಣುತ್ತದೆ. ವಾಸ್ತವದಲ್ಲಿ, ಆಧುನಿಕತೆಯು ಈ ಸಮಾಜದ ಅಂತಃಸತ್ವದ ಅರಳುವಿಕೆಯಾಗಿರಲಿಲ್ಲ. ಸ್ವಾತಂತ್ರ್ಯ ಹೋರಾಟ, ಪುನರುಜ್ಜೀವನ ಚಳುವಳಿ, ಸಮಾಜ ಸುಧಾರಣಾ ಚಳುವಳಿ, ಪಾಶ್ಚಾತ್ಯ ಶಿಕ್ಷಣವು ರೂಪಿಸಿದ ಚಿಂತನಾ ವಿಧಾನಗಳು ಈ ದೇಶದಲ್ಲಿ ಆಧುನಿಕ ವಿನ್ಯಾಸಕ್ಕೆ ಕಾರಣವಾಗಿದ್ದವು. ಅಥವಾ ಭಾರತದ ಪ್ರಾಚೀನ ಸಮಾಜವು ಮತೀಯತೆ, ಪುರೋಹಿತಶಾಹಿ ವಿಜೃಂಭಣೆ, ಜಾತೀಯತೆ ಹಾಗೂ ಲಿಂಗ ತಾರತಮ್ಯಗಳಿಂದ ಅದೆಷ್ಟು ಬಳಲಿತ್ತು ಎಂದರೆ, ತನ್ನ ಅಂತಃಸತ್ವದಿಂದ ಹೊಸದೃಷ್ಟಿಕೋನವನ್ನು ರೂಪಿಸಿಕೊಳ್ಳಲಾಗದ ಸ್ಥಿತಿಯಲ್ಲಿತ್ತು. ಈ ಸಂಕೀರ್ಣ ಕಾಲದಲ್ಲಿ ಬ್ರಿಟೀಷ್ ವಸಾಹತುಶಾಹಿಯು ತನ್ನ ಅನುಕೂಲಕ್ಕಾಗಿ ಚಾಲ್ತಿಗೆ ತಂದ ಶಿಕ್ಷಣ ಪದ್ಧತಿಯು ಹೊಸ ಬೆಳಕಿನ ಕಿಂಡಿಯಾಗಿ ಕೆಲಸ ಮಾಡಿತು. ಸಾಮಾಜಿಕ ಬದುಕಿನಲ್ಲಿ ಜಾತಿ–ವರ್ಗ–ಲಿಂಗಗಳ ಏಕಸ್ವಾಮ್ಯ, ಯಜಮಾನ–ಗುಲಾಮ ಎಂಬ ವರ್ಗೀಕರಣ ಬೆಳೆದುಬಿಟ್ಟಿತ್ತು. ಕೆಳಜಾತಿ, ವರ್ಗಗಳ ಜನರು ಉಸಿರುಗಟ್ಟಿದ ಸ್ಥಿತಿಯಲ್ಲಿದ್ದರು. ಇಂತಹ ಸ್ಥಿತಿಯಲ್ಲಿ ಈ ನೆಲದ

ಹಳ್ಳಿಯ ಬದುಕಿಗೆ ಮೋಟಾರುಗಾಡಿಯ ಪ್ರವೇಶ, ಸೈಕಲ್ಲಿನ ಪ್ರವೇಶ, ಶಾಲೆಗಳ ಪ್ರವೇಶ, ಮತಾಂತರದ ನಂತರವಾದರೂ ಹೊಲೆ-ಮಾದಿಗರು ಪಡೆದ ಭೂಮಿಯ ಹಕ್ಕುಪತ್ರ, ಮುಟ್ಟಿಸಿಕೊಳ್ಳಬಾರದವರು, ಊರು ಹೊಕ್ಕಲು ಅನುಮತಿಯಿಲ್ಲದವರು ಈಸ್ಟ ಇಂಡಿಯಾ ಕಂಪನಿಯ ಸೈನಿಕರಾಗಿ ಬದಲಾಗಿದ್ದು; ಈ ಮುಂತಾದವು ವಸಾಹತು ಬದುಕಿನ ಕಾರಣವಾಗಿ ನಡೆದ ಮೂಲಭೂತ ಪಲ್ಲಟವಾಗಿದ್ದವು. ವಸಾಹತು ಆಳ್ವಿಕೆಯನ್ನು ವಿರೋಧಿಸಿ ಸಂಘಟಿತವಾಗತೊಡಗಿದ ಚಳುವಳಿಯಲ್ಲಿ ದೇಶದ ಎಲ್ಲ ಪ್ರಜೆಗಳೂ ಪಾಲ್ಗೊಳ್ಳುವ ಅವಶ್ಯಕತೆ ನಿರ್ಮಾಣವಾಗತೊಡಗಿದಂತೆ ಸ್ಥಾಪಿತ ಮೇಲು-ಕೀಳೆಂಬ ಭೇದನೀತಿಯು ಹಳಸಲಾಗತೊಡಗಿತ್ತು. ದೇಶದ ಸ್ವಾತಂತ್ರ್ಯದ ಸಂಗ್ರಾಮವು ಸಾಮಾಜಿಕ ಭೇದವನ್ನು ಉಪೇಕ್ಷೆ ಮಾಡಿತ್ತು. ಮಹಾತ್ಮಾ ಗಾಂಧೀಜಿಯವರ ಮತ್ತು ಆ ಕಾಲದ ರಾಷ್ಟ್ರನಾಯಕರ ಒತ್ತಾಸೆಯಿಂದ ಅದುವರೆಗೂ ಹೊಸ್ತಿಲಾಚೆ ಹೆಜ್ಜೆಯಿಡುವುದು ನಿಷೇಧಿತವಾಗಿದ್ದ ಮೇಲ್ವರ್ಗ-ಮೇಲ್ಜಾತಿಯ ಮಹಿಳೆಯರೂ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದರು. ಹಾಗೆಂದ ಮಾತ್ರಕ್ಕೆ ಪರಂಪರಾಗತ ಸಮಾಜದ ಧೋರಣೆಗಳಲ್ಲಿ ಪೂರ್ಣ ಪ್ರಮಾಣದ ಬದಲಾವಣೆ ನಡೆದುಬಿಟ್ಟಿತ್ತು ಎಂದಲ್ಲ. ಸ್ಥಾಪಿತ ಜಡತೆಯಲ್ಲಿ ಕನಿಷ್ಠ ಪ್ರಮಾಣದ ಚಲನಶೀಲತೆ ಸಾಧ್ಯವಾಗಿತ್ತು. ಈ ಚಲನೆಯಿಂದ ಸಮಾಜದ ಕೆಳಜಾತಿ, ವರ್ಗಗಳು ಮತ್ತು ಮಹಿಳೆಯರು ಒಂದಿಷ್ಟು ಬಿಡುಗಡೆಯ ಭಾವನೆಯನ್ನು ಅನುಭವಿಸಿದ್ದರು. ಈ ಸಂಕೀರ್ಣ ಪದರುಗಳನ್ನು ಕವಿ ಕುವೆಂಪು ಅವರ 'ನೆನಪಿನ ದೋಣಿಯಲ್ಲಿ' ಎಂಬ ಆತ್ಮಚರಿತ್ರೆಯ ಉಲ್ಲೇಖದ ಮೂಲಕ ಅರ್ಥೈಸಿಕೊಳ್ಳಬಹುದಾಗಿದೆ. "ಒಂದೊಮ್ಮೆ ನಮ್ಮ ಕುಪ್ಪಳ್ಳಿಗೆ ಪಾದ್ರಿಗಳು ಬಂದು ಶಾಲೆಯನ್ನು ಪ್ರಾರಂಭಿಸದೇ ಇದ್ದಿದ್ದರೆ ನಾನು ಯಾವುದಾದರೂ ಜಮೀನ್ದಾರರ ಮನೆಯ ಗೊಬ್ಬರವನ್ನು ಹೊರುತ್ತ ಇರಬೇಕಿತ್ತು" ಹಾಗಾಗಿ ಭಾರತದ ಸಾಮಾಜಿಕ ಚರಿತ್ರೆಯಲ್ಲಿ ಪ್ರವೇಶಿಸಿದ ಆಧುನಿಕತೆಯು ಗಮನಾರ್ಹ ಪರಿವರ್ತನೆಗಳಿಗೆ ಕಾರಣವಾಗಿದ್ದನ್ನು ಮರೆಯುವಂತಿರಲಿಲ್ಲ. ಆದರೆ, ಈ ಸಂದರ್ಭದಲ್ಲಿಯೂ ಬದಲಾವಣೆಯ ಕಕ್ಷೆಯೊಳಕ್ಕೆ ಪ್ರವೇಶ ಪಡೆದವರು ಮೇಲ್ಜಾತಿ, ಮೇಲ್ವರ್ಗಗಳು ಅಥವಾ ಈ ಎರಡು ಕೇಂದ್ರಗಳ ಸಮೀಪವರ್ತಿಗಳಾದ ಸಮುದಾಯಗಳು "ಸಮಾಜದ ಕಟ್ಟಕಡೆಯ ಮನುಷ್ಯರನ್ನು ತಲುಪುವುದು" ದೇಶದ ಸ್ವಾತಂತ್ರ್ಯದ, ಸಂವಿಧಾನದ, ಸಾಮಾಜಿಕ ಪರಿವರ್ತನೆಯ ಆದರ್ಶವಾಗಿತ್ತು. ಈ ಆದರ್ಶದ ಈಡೇರಿಕೆ ಸುಲಭ ಸಾಧ್ಯವಾಗಿರಲಿಲ್ಲ. ಹಳ್ಳಿಯ ಜಮೀನ್ದಾರನೇ, ಸ್ವತಂತ್ರ ಭಾರತದ ರಾಜಕೀಯ ಮುಂದಾಳುವೂ ಆದ-ಆಗುವ-ಆಗಬೇಕಾದ ಸ್ಥಿತಿಯಲ್ಲಿ ಬದಲಾವಣೆಯು ಅತ್ಯಂತ ನಿಧಾನ ಗತಿಯದಾಗಿತ್ತು.

ಸ್ವತಂತ್ರ ಭಾರತದ ಕೆಲವು ರಾಜಕೀಯ ನಿರ್ಣಯಗಳು ಮತ್ತು ಜನಪರವಾದ ಕಾರ್ಯಯೋಜನೆಗಳು, ಸಾಮಾಜಿಕ ಅಸಮಾನತೆಯನ್ನು ನೀಗುವ, ಸ್ವಾತಂತ್ರ್ಯ ಹೋರಾಟದ ಆದರ್ಶದ ಕನಸನ್ನು ನೆನಪಿಸಿಕೊಳ್ಳುವ ಬಗೆಯಲ್ಲಿದ್ದವು. 'ಊಳುವವನೆ ಹೊಲದೊಡೆಯ' ಎಂಬ ನಿರ್ಣಯವು ಜಮೀನ್ದಾರೀ ಹಿತಾಸಕ್ತ ಸಮಾಜಕ್ಕೆ ಬಿದ್ದ ದೊಡ್ಡ ಏಟಾಗಿತ್ತು. ಇದನ್ನು ಕಾರ್ಯತತ್ಪರಗೊಳಿಸುವಲ್ಲಿ ಹಲವಾರು ಅಡೆತಡೆಗಳು ಎದುರಾದವು ಎನ್ನುವುದು ನಿಜ. ಆದರೆ, ರೈತ ಕಾರ್ಮಿಕರ ಪರಿಸ್ಥಿತಿಯನ್ನು ಸುಧಾರಿಸಲು ಇದೊಂದು ಊರುಗೋಲಾಗಿತ್ತು. ಬ್ಯಾಂಕುಗಳ ರಾಷ್ಟ್ರೀಕರಣ ಕೂಡ ಇಂತಹದೇ ಮಹತ್ವದ ತೀರ್ಮಾನವಾಗಿತ್ತು. ಬಂಡವಾಳವಾದವು ವಿಜೃಂಭಿಸದಂತೆ, ದೇಶದ ಒಳಗಿನ ಹಣದ ಹರಿವಿನ ಮೇಲೆ ಸರ್ಕಾರದ ನಿಯಂತ್ರಣವಿರುವಂತೆ ಮಾಡುವಲ್ಲಿ; ಬಡಜನರಿಗೆ ಆರ್ಥಿಕ ಬೆಂಬಲವನ್ನು ಒದಗಿಸುವಲ್ಲಿ ಸಹಾಯಕವಾದ ತೀರ್ಮಾನಗಳು ಇವಾಗಿದ್ದವು. ದೇಶದಲ್ಲಿ ಪ್ರಾರಂಭವಾಗಿ ವಿಸ್ತರಣೆಗೊಳ್ಳತೊಡಗಿದ ಶಿಕ್ಷಣ ಹಕ್ಕು, ಜನರ ಮೂಲಭೂತ ಅಗತ್ಯಗಳ ಪೂರೈಕೆಯು ಸರ್ಕಾರದ ಆದ್ಯತೆ ಎಂಬ ಭಾವನೆ, ಸರ್ಕಾರಿ ವಲಯಗಳ ಉದ್ಯೋಗಾವಕಾಶಗಳು, ಮೀಸಲಾತಿ ನೀತಿಯನ್ನು ಅನ್ವಯಗೊಳಿಸಿದ್ದು..... ಇಂತಹ ನೂರೊಂದು ವಿದ್ಯಮಾನಗಳು ಭಾರತವನ್ನು ರಾಷ್ಟ್ರವಾಗಿ ಬಲಿಷ್ಠಗೊಳಿಸುತ್ತ ಸಾಮಾಜಿಕವಾಗಿ ಉದಾತ್ತಗೊಳಿಸುತ್ತ ಹೆಚ್ಚು ಜೀವಪರ ನಿಲುವುಗಳಿಂದ ಪೂರಣಗೊಳಿಸುತ್ತಿತ್ತು. ದೇಶವೀಗ ಗಾಂಧೀಹತ್ಯೆಯಿಂದಾದ ಮಾನಸಿಕ ಆಘಾತದಿಂದ, ದೇಶವಿಭಜನೆಯ ಹಿಂಸಾತ್ಮಕ ಉನ್ಮಾದದಿಂದಾದ ಗಾಯದಿಂದ ಚೇತರಿಸಿಕೊಳ್ಳುತ್ತಿತ್ತು.

ಈ ಸ್ಥಿತಿಯನ್ನು ತಡೆದು, ಭಾರತೀಯ ಸಾಮಾಜಿಕ ಬದುಕನ್ನು ಆಘಾತಕಾರಿ ವಾಸ್ತವದ ಎದುರು ನಿಲ್ಲಿಸಿದ್ದು ಜಾಗತೀಕರಣವೆಂಬ ಪರಿಸ್ಥಿತಿ. ಇದು ಆಧುನಿಕತೆಯು ಕಷ್ಟದಿಂದ ತೆರೆಯುತ್ತಿದ್ದ ಪುರಾತನ ಜಿಡ್ಡು ಜಾಡ್ಯಗಳ ಕವಾಟವನ್ನು ಮರಳಿ ಯಥಾಸ್ಥಿತಿಗೆ ತಳ್ಳಿಬಿಟ್ಟಿತು. ಇದನ್ನು ಕನ್ನಡದ ಕವಿ ಎನ್.ಕೆ.ಹನುಮಂತಯ್ಯ –

ನಾನೇ ದಾಟಬಂದ ಕೋಟೆಯ ಕಿಂಡಿಗೆ
ನನ್ನನ್ನೇ ಮುರಿದು ತುರುಕುತಿಹರು

ಎಂದು ವ್ಯಾಖ್ಯಾನಿಸುತ್ತಾರೆ, ಶೂದ್ರರು, ದಲಿತರು, ಅಲ್ಪಸಂಖ್ಯಾತರು, ಬಡವರು ಮತ್ತು ಸ್ತ್ರೀಯರು ಹೊಸದಾಗಿ ಪಡೆದುಕೊಳ್ಳುತ್ತಿದ್ದ ಅಧಿಕಾರ ಹಾಗೂ ಸೌಲಭ್ಯಗಳನ್ನು ಜಾಗತೀಕರಣ ನಿರ್ದಾಕ್ಷಿಣ್ಯವಾಗಿ ತುಂಡರಿಸಿತು. ಅದೂ ಕೈಗೆ ರಕ್ತ ಮೆತ್ತದ ಹಾಗೆ, ಕೊಲೆಗೆ

ಸಾಕ್ಷಿಯುಳಿಯದ ಹಾಗೆ, ತುಳಿತಕ್ಕೊಳಗಾಗುವವರೆ ತುಳಿತವನ್ನು ಸಂಭ್ರಮಿಸುವ ಹಾಗೆ ಮಾಡಿತು. ಅದು ಕೆ.ಎಸ್.ನಿಸಾರ್‌ಅಹಮದ್ ಹೇಳುವ– "ಒಳಗೊಳಗೇ ಬೇರುಕೊಯ್ವ, ಲೋಕದೆದುರಲ್ಲಿ ನೀರು ಹೊಯ್ವ" ಜಾಣ್ಮೆಯಾಗಿತ್ತು. ಆಧುನಿಕತೆಯ ವೇಷದಲ್ಲಿ ಮೂಲಭೂತವಾದ ವಿಜೃಂಭಿಸುತ್ತಿರುವ ಸದ್ಯದ ವಾಸ್ತವವನ್ನು ಭಾರತದ ಕಲೆ–ಸಾಹಿತ್ಯಗಳು ಸೃಜನಶೀಲವಾಗಿ ಪುನರ್‌ರೂಪಿಸಿ ಪ್ರತಿರೋಧವನ್ನು ದಾಖಲಿಸುವ ಪ್ರಯತ್ನದಲ್ಲಿ ಮಗ್ನವಾದವು ಇದಕ್ಕೆ ಕನ್ನಡದ ಕಥಾ ಸಾಹಿತ್ಯವೂ ಹೊರತಾಗಿಲ್ಲ. ಈ ಅಧ್ಯಯನಕ್ಕೆ ಪೂರ್ವಸಿದ್ಧತೆಯಾಗಿ, ಜಾಗತೀಕರಣದ ವಿಸ್ತಾರ ನೆಲೆಗಳನ್ನು, ವೈವಿಧ್ಯಮಯ ಪರಿಕಲ್ಪನೆಗಳನ್ನು ಅರ್ಥೈಸಿಕೊಳ್ಳುವುದು ಅನಿವಾರ್ಯವಾಗಿದೆ. ಜಾಗತೀಕರಣವು ಕಳೆದ ಶತಮಾನದ ಮಾನವೀಯ ಆದರ್ಶಗಳಿಗೆ ವಿರುದ್ಧವಾಗಿ ವಿಷ ಹರಡಿದ ಶತಪದಿ ಹೇಗೆಂಬುದನ್ನು ವಿವರಿಸಿಕೊಳ್ಳಲು ಮುಖ್ಯವಾದ ಕೆಲವು ಪರಿಕಲ್ಪನಾತ್ಮಕ ಸ್ಪಷ್ಟತೆಗಳನ್ನು ಒದಗಿಸಿಕೊಳ್ಳಬೇಕಾಗಿದೆ.

**೩.೧ ನವವಸಾಹತುಶಾಹಿ :**

ಜಗತ್ತಿನ ಶ್ರೀಮಂತ ರಾಷ್ಟ್ರಗಳು ತಮಗಿಂತಲೂ ಬಡರಾಷ್ಟ್ರಗಳನ್ನು ತಮ್ಮ ಉಪಭೋಗದ ನೆಲವಾಗಿ ಹಕ್ಕು ಚಲಾಯಿಸುವುದನ್ನು ವಸಾಹತುಶಾಹಿ ಎನ್ನಲಾಗುತ್ತದೆ. ಈ ವಸಾಹತೀಕರಣವು ದೇಶದ ಗಡಿರೇಖೆಗಳ ಒತ್ತುವರಿ ಎಂಬ ಅನ್ಯರಾಷ್ಟ್ರ–ಸಂಸ್ಕೃತಿಗಳ ಪ್ರವೇಶವಾಗಿಯೂ; ದೇಶದೊಳಗಿರುವ ಬುಡಕಟ್ಟು–ಆದಿವಾಸಿಗಳ ಸ್ಥಳವನ್ನು ಅಧಿಕಾರದಿಂದ ಪ್ರವೇಶಿಸುವಿಕೆಯಾಗಿಯೂ ಚಾಲ್ತಿಯಲ್ಲಿದೆ. ಈ ಎರಡೂ ಹಂತಗಳಲ್ಲಿಯೂ ಅಧಿಕಾರದ ಒತ್ತುವರಿ ನಡೆಯುತ್ತದೆ. ನೆಲದ ಮೂಲನಿವಾಸಿಗಳನ್ನು ಅವರ ಸಂಸ್ಕೃತಿ, ಭಾಷೆ, ಕಲೆ, ನಲಿವು, ನಂಬಿಕೆಗಳಿಂದ ಆಚೆ ತರುವ ಪ್ರಯತ್ನ ನಡೆಯುತ್ತದೆ. ಅವರದ್ದಾಗಿರುವ ಎಲ್ಲವೂ ಅಮುಖ್ಯವಾಗುತ್ತ, ಅರ್ಥಹೀನವಾಗುತ್ತ, ಅಧಿಕಾರ ಸೂತ್ರ ಹಿಡಿದವರ ನಡೆ–ನೀತಿಗಳೆಲ್ಲವೂ ಉತ್ಕೃಷ್ಟವೆಂದು ವೈಭವೀಕರಿಸಲಾಗುತ್ತದೆ. ಒಂದು ಸಂಸ್ಕೃತಿಯ ಅದರಲ್ಲೂ ಅಧೀನ ಸಂಸ್ಕೃತಿಯ ಸಾರವನ್ನು ಇನ್ನೊಂದು ಸಂಸ್ಕೃತಿಯು (ಯಾಜಮಾನ್ಯ ಸಂಸ್ಕೃತಿಯು) ಅತಿಕ್ರಮಿಸುವಿಕೆಯು ವಸಾಹತುಶಾಹಿಯ ಗುಣ. ಇಲ್ಲಿ ಎರಡು ವಿಭಿನ್ನ ನೆಲೆಗಳು ಸಂಕರಗೊಂಡು ಇನ್ನೊಂದಾಗುವುದಿಲ್ಲ. ಎರಡು ಬಣ್ಣಗಳು ಬೆರೆತು ಮತ್ತೊಂದು ಬಣ್ಣವಾಗುವುದಿಲ್ಲ. ಹೊರತೂ, ಯಾಜಮಾನ್ಯವು ಅಧೀನದ ಗುಣ–ಶಕ್ತಿ–ಸಂಪನ್ನತೆಗಳನ್ನೆಲ್ಲ

ಹೇರಿಕೊಂಡು ತನ್ನನ್ನು ತಾನು ಸಶಕ್ತಗೊಳಿಸಿಕೊಳ್ಳುತ್ತದೆ. ಇದು ವಸಾಹತುಶಾಹಿಯಿಂದ ಪಡೆಯುವ ಸಾಂಸ್ಕೃತಿಕ ಆಕ್ರಮಣ.

ವಸಾಹತುಶಾಹಿಯು ಇಂದು ನಿನ್ನೆಯದಲ್ಲ. ಭೂಖಂಡಗಳ ಶೋಧ, ಜನಸಮುದಾಯಗಳ ಶೋಧ, ಯುದ್ಧ, ರಾಜ್ಯವಿಸ್ತಾರ ಈ ಎಲ್ಲವೂ ಇದೇ ಪ್ರಕ್ರಿಯೆಯ ಬಿಡಿ ಭಾಗಗಳು. ಆದರೆ ಬ್ರಿಟೀಷ ಈಸ್ಟ ಇಂಡಿಯಾ ಕಂಪನಿ, ಫ್ರೆಂಚರು ಇವರೆಲ್ಲ ಪ್ರಪಂಚದ ಸಂಪದ್ಭರಿತ ಭೂ ಭಾಗಗಳನ್ನು ಲಪಟಾಯಿಸಿ, ಒತ್ತುವರಿ ಮಾಡಿ, ಅನಗತ್ಯವಾಗಿ ತಮ್ಮ ಕಾನೂನುಗಳನ್ನು ಹೇರಿ ಆಡಳಿತ ನಡೆಯಿಸಿದ್ದನ್ನು ಜಗತ್ತಿನ ಇತಿಹಾಸ ಹೇಳುತ್ತದೆ. ಭಾರತದ ಬದುಕು ಬಲು ಗಾಢವಾಗಿಯೇ ಈ ಅನುಭವಕ್ಕೆ ಒಳಗಾಗಿತ್ತು. ಬ್ರಿಟೀಷರು ಎರಡು ಶತಮಾನಕ್ಕೂ ಹೆಚ್ಚುಕಾಲ ಭಾರತವನ್ನು ತಮ್ಮ ವಸಾಹತು ಮಾಡಿಕೊಂಡರು ಎನ್ನುವುದು ಭಾರತದ ಚರಿತ್ರೆಗೆ ಮಾತ್ರ ಸಂಬಂಧಿಸಿದ ಸಂಗತಿಯಲ್ಲ. ಇದು ಭಾರತದ ವರ್ತಮಾನವನ್ನು ನಿಯಂತ್ರಿಸುತ್ತಿರುವ ಸಂಗತಿ ಮತ್ತು ಭವಿಷ್ಯತ್ತನ್ನು ನಿರ್ದೇಶಿಸುತ್ತಿರುವ ಸಂಗತಿ. ಭಾರತೀಯರು ತಮ್ಮ ಸಾಂಪ್ರದಾಯಿಕ ಪಾನೀಯಗಳ ಹೊರತಾಗಿ ಚಹ ಸೇವಿಸಲು ಪ್ರಾರಂಭಿಸಿದರು ಎನ್ನುವುದು ಪೂರ್ಣವಿರಾಮವಲ್ಲ. ಈ ಚಹದ ಒಪ್ಪಿಗೆ ಮುಂದೆ ತಂಪು ಪಾನೀಯಗಳ, ಮಾದಕ ಪಾನೀಯಗಳ ತರಹಾವರಿ ಸೇವನೆಗೆ ಒಪ್ಪಿಗೆಯನ್ನು ಒದಗಿಸುತ್ತ ಹೋಯಿತು. ಅವರು ನಿರ್ದೇಶಿಸುವವರು, ನಾವು ಅನುಸರಿಸುವವರು ಎಂಬ ಅಂತರ ಹಾಗೇ ಮುಂದುವರಿಯಿತು. ನಮ್ಮ ಕಾಡುಗಳು ಎಸ್ಟೇಟ್‌ಗಳಾಗಿ ಪರಿವರ್ತನೆಗೊಳ್ಳುವುದಕ್ಕೂ, ದೀರ್ಘಾವಧಿ ಪರಿಣಾಮದಲ್ಲಿ ಅದೀಗ ಭೂಕುಸಿತಗಳಾಗಿ ಮರಳಿ ಪುನರುಜ್ಜೀವಿತಗೊಳ್ಳಲಾರದಷ್ಟು ಅಧಃಪತನಕ್ಕೆ ಒಳಗಾಗುವುದಕ್ಕೂ ಇರುವ ಸಹಸಂಬಧವನ್ನು ತಿಳಿಯಬೇಕಿದೆ. ಈ ಭೂಕುಸಿತವೇ ವಸಾಹತುಶಾಹಿಯಿಂದಾಗುವ ಸಾಂಸ್ಕೃತಿಕ ಕುಸಿತದ ರೂಪಕವಾಗಿದೆ.

ವಸಾಹತೋತ್ತರ ಕಾಲಘಟ್ಟದಲ್ಲಿ ಉಂಟಾದ ಪರಿಸ್ಥಿತಿಯನ್ನು 'ನವವಸಾಹತುಶಾಹಿ' ಎಂಬ ಪರಿಕಲ್ಪನೆಯ ನ್ನು ಸೂಚಿಸುತ್ತದೆ. ಆಧುನಿಕ ತಂತ್ರ ಜ್ಞಾನದ ಬೃಹತ್ ಹಿಡಿತವನ್ನು ಸಾಧಿಸಿರುವ, ಆರ್ಥಿಕವಾಗಿ ಬಲಾಢ್ಯವಾಗಿರುವ ರಾಷ್ಟ್ರಗಳು ತಮ್ಮ ಅಭಿವೃದ್ಧಿಯ ಸೂಚ್ಯಂಕವನ್ನು ಎತ್ತರಿಸಿಕೊಳ್ಳಲಿಕ್ಕಾಗಿ; ತಮಗಿಂತ ಆರ್ಥಿಕವಾಗಿ ದುರ್ಬಲವಾಗಿರುವ ದೇಶಗಳನ್ನು ಸಾಂಸ್ಕೃತಿಕವಾಗಿ ಆವರಿಸಿಕೊಳ್ಳುತ್ತ ಆ ಮೂಲಕ ಆ ದೇಶಗಳನ್ನು ತಮ್ಮ ಮಾರುಕಟ್ಟೆಯ ಪ್ರದೇಶವಾಗಿಯೂ, ಕಚ್ಚಾ ಪದಾರ್ಥಗಳ ಪೂರೈಕೆಯ ಜಾಗೆಯಾಗಿಯೂ ಬಳಸುವ ವಿಧಾನವೇ ನವವಸಾಹತುಶಾಹಿಯಾಗಿದೆ. ಬಲಿಷ್ಠ ರಾಷ್ಟ್ರಗಳು ಔದ್ಯಮಿಕ

ವಲಯವಾಗಿ ಅಧಿಕಾರ ಸ್ಥಾಪಿಸಲು, ದುರ್ಬಲ ರಾಷ್ಟ್ರಗಳ ಜನಸಮುದಾಯವು ಈ ಶ್ರೇಷ್ಠತೆಯನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಈ ಒಪ್ಪಿಗೆಯನ್ನು ಆಧುನಿಕ ತಂತ್ರಜ್ಞಾನ ಮತ್ತು ಮಾಧ್ಯಮಗಳ ಒಡೆತನದಿಂದ ಸ್ಥಾಪಿಸಲಾಗುತ್ತದೆ. ಇದನ್ನೇ ಶ್ರೇಷ್ಠ ಚಿಂತಕ ಚಾಮಸ್ಕಿ "ಜಾಗತೀಕರಣವೆಂದರೆ, ಒಪ್ಪಿಗೆಯನ್ನು ಉತ್ಪಾದಿಸುವ ವ್ಯವಸ್ಥೆ" ಎಂದಿರುವುದು.

ಮಾಧ್ಯಮಗಳ ಮೂಲಕ ಒಂದು ಅಭಿಪ್ರಾಯವನ್ನು ನಿರಂತರವಾಗಿ ಬಿತ್ತರಿಸುವುದು ಮತ್ತು ಇಂತಹ ಬಿತ್ತರಗಳ ಮೂಲಕವೇ ಅದಕ್ಕೆ ಸತ್ಯದ ಲೇಪನವನ್ನು ನೀಡಿ; ಜನಾಭಿಪ್ರಾಯವನ್ನು ರೂಪಿಸುವುದು –ಇಂದು ಅಥವಾ ಇತ್ತೀಚೆಗೆ ನಡೆಯುತ್ತಿರುವ ಸಂಗತಿಯಾಗಿದೆ. ಭಾರತೀಯ ಸಮಾಜ ತನ್ನ ಪ್ರಾಚೀನ ಕಾಲಘಟ್ಟದಲ್ಲಿ ಮಾತು ಮತ್ತು ಕಲೆಯನ್ನು ಸಂವಹನ ಮಾಧ್ಯಮವಾಗಿಸಿಕೊಂಡಿತ್ತು ಆಗ ಅವು ಆ ಪ್ರದೇಶದ ಜನಬದುಕಿನ ವಿವೇಕದ ಆಧಾರದಲ್ಲಿ ರೂಪಿಸಲ್ಪಟ್ಟಿದ್ದವು. ಮುದ್ರಣ ಮಾಧ್ಯಮವು ಆಧುನಿಕತೆಯ ಬಳುವಳಿಯಾಗಿ ಬಂದಿತು. ಇದರಿಂದ ಸಂವಹನದ ಸಾಧ್ಯತೆಯು ವಿಸ್ತಾರಗೊಂಡಿತು. ಹೆಚ್ಚು ವಿವೇಕಯುತವೂ ಆಯಿತು. ತರ್ಕಬದ್ಧವಾಯಿತು. ಭಾರತದ ಸ್ವಾತಂತ್ರ್ಯ ಚಳುವಳಿಯ ಯಶಸ್ಸಿನಲ್ಲಿ, ಸಮಾಜ ಸುಧಾರಣೆಯ ಚಳುವಳಿಯ ಇತ್ಯಾತ್ಮಕತೆಯಲ್ಲಿ ಮುದ್ರಣ ಮಾಧ್ಯಮಗಳು ವಹಿಸಿದ ಪಾತ್ರವನ್ನು ನಿರ್ಲಕ್ಷಿಸುವುದು ಸಾಧ್ಯವಿಲ್ಲ. ಈ ಹಂತವನ್ನು ಮಾತಿನ ಮೌಲ್ಯದಿಂದ ಅಕ್ಷರದ ಮೌಲ್ಯಕ್ಕೆ ಚಲಿಸಿದ ಕಾಲವಾಗಿ; ನಾಲಿಗೆಯ ಮಾನದಂಡದಿಂದ ಕಣ್ಣಿನ ಮಾನದಂಡಕ್ಕೆ ಬದಲಾದ ಕಾಲವಾಗಿ ನೋಡಬೇಕಿದೆ.

ನವವಸಾಹತುಶಾಹಿಯ ಕಾಲದಲ್ಲಿ ಮಾಧ್ಯಮಗಳ ಪಾಲುದಾರಿಕೆಯು ಹೆಚ್ಚು ಸಂಕೀರ್ಣವಾಗತೊಡಗಿತು. ತಂತ್ರಜ್ಞಾನ ಮತ್ತು ಅತ್ಯಾಧುನಿಕ ಸೌಲಭ್ಯಗಳ ಪರಿಣಾಮವಾಗಿ ಮಾಧ್ಯಮಗಳು ಆತ್ಯಂತಿಕ ಪ್ರಭಾವೀ ವಲಯಗಳಾಗಿ ಬದಲಾದವು. ದೃಶ್ಯ ಮಾಧ್ಯಮಗಳು, ಅನಕ್ಷರಸ್ಥರಿಗೆ ಅನುಕೂಲಕಾರಿ ಎಂಬ ಪ್ರಾಥಮಿಕ ತಿಳುವಳಿಕೆ ಕಳಚಿಹೋಗಿ –ಕಲಿತವರಿಗೂ ಕಲಿಯದವರಿಗೂ ಕಾಮಧೇನು –ಎಂಬ ಎತ್ತರಕ್ಕೇರಿಸಿದವು. ಜನಾಭಿಪ್ರಾಯವನ್ನು ರೂಪಿಸುವ ಇಂದ್ರಜಾಲಿಕ ಶಕ್ತಿಯು ಮಾಧ್ಯಮಗಳಿಗಿರುವುದು ಪ್ರಸ್ತುತಗೊಳ್ಳತೊಡಗಿತ್ತು. ಇದರ ಪರಿಣಾಮವಾಗಿ, ಬಂಡವಾಳಶಾಹಿಗಳಿಗೆ ಮಾಧ್ಯಮ ವ್ಯವಸಾಯವು ಲಾಭದಾಯಕವಾಗಿ ತೋರಿತು. ಅದಾಗಲೇ ತಾತ್ತ್ವಿಕವಾಗಿ ಭ್ರಷ್ಟಗೊಳ್ಳುತ್ತ; ಅಧಿಕಾರವನ್ನು ಪಡೆಯುವುದು ಮಾತ್ರ ಯಶಸ್ವಿ ರಾಜಕಾರಣವಾಗಿದ್ದ ವ್ಯವಸ್ಥೆಗೆ ಮಾಧ್ಯಮಗಳನ್ನು ಕೊಂಡುಕೊಳ್ಳುವುದು; ಅವುಗಳ ಮೇಲೆ ಹಿಡಿತ ಸಾಧಿಸುವುದು ಲಾಭದಾಯಕವಾಗಿ

ತೋರಿತು. ಇದರ ಪರಿಣಾಮವಾಗಿ ಬಹುಕೋಟಿ ಹೂಡಿಕೆಯ ಉದ್ಯಮವಾಗತೊಡಗಿದ ರಾಜಕಾರಣವು, ತನ್ನ ಯಶಸ್ಸಿನ ಭಾಗವಾಗಿ ಮಾಧ್ಯಮ ಕ್ಷೇತ್ರದ ಮೇಲೆ ಹೂಡಿಕೆ ಮಾಡತೊಡಗಿತು. ಕ್ರಮೇಣ, "ಒಂದು ಸುಳ್ಳನ್ನು ನೂರು ಸಲ ಹೇಳಿದರೆ ಅದು ಸತ್ಯವಾಗಿ ಪರಿಣಮಿಸುತ್ತದೆ" ಎಂಬ ಹಿಟ್ಲರನ ಆಪ್ತ ಗೋಬೆಲ್ಸನ ಜೀವವಿರೋಧಿ ನಿಲುವಿಗೆ ಸಾರ್ವತ್ರಿಕ ಮನ್ನಣೆಯು ಪ್ರಾಪ್ತವಾಗತೊಡಗಿತು. ಪರಿಣಾಮವಾಗಿ, ಯಾವುದು ಸತ್ಯ, ಯಾವುದು ಸುಳ್ಳು ಎಂಬ ವ್ಯತ್ಯಾಸ ತಿಳಿಯದ ಭ್ರಮಾಧೀನ ಸ್ಥಿತಿಗೆ ಸಮಾಜ ಹೋಗುವಂತಾಯಿತು. ಸುದ್ದಿ ಬಿತ್ತರಗೊಳ್ಳುವ ಕಾಲದಲ್ಲಿ ಸುದ್ದಿ ವಿಶ್ಲೇಷಣೆ ಪ್ರಾರಂಭವಾಗಿದ್ದೇ, ಕೇಳುಗರನ್ನು ನಿರ್ದಿಷ್ಟ ನಿರ್ದೇಶನದಲ್ಲಿ ಮುನ್ನಡೆಸುವ ತಂತ್ರಗಾರಿಕೆಯಾಗಿತ್ತು.

ಮಾಧ್ಯಮಗಳಲ್ಲಿ ಅತಿರಂಜಿತವಾಗಿ ಮತ್ತು ನಿರಂತರವಾಗಿ ಬಿತ್ತರಗೊಳ್ಳುತ್ತಿರುವ ಮನರಂಜನೆ, ಹಾಸ್ಯಗಳು ಜನಸಾಮಾನ್ಯರ ಯೋಚನಾ ಶಕ್ತಿಯನ್ನು ವಿವೇಕವನ್ನು ನಿಯಂತ್ರಿಸತೊಡಗಿತು. ಆರ್ಥಿಕ ಶ್ರೀಮಂತಿಕೆಯ ಭ್ರಮೆ ತಗುಲಿದ ಸಮಾಜವು ದುಡ್ಡು ಮಾಡುವ ಜಂಜಾಟದಲ್ಲಿ ಸಿಲುಕಿ ಅಸ್ವಸ್ಥಗೊಳ್ಳುವುದಕ್ಕೂ, ಗಂಭೀರ ಯೋಚನೆಗಳಿಂದ ವಿಮುಖವಾಗುವುದಕ್ಕೂ ಸಂಬಂಧವಿತ್ತು. ಈ ದುರ್ಬಲ ಸ್ಥಿತಿಯ ಲಾಭವನ್ನು ಅಧಿಕಾರ ರಾಜಕಾರಣವು, ಮಾಧ್ಯಮಗಳನ್ನು ತನ್ನ ಅಡಿಯಾಳಾಗಿಸಿಕೊಳ್ಳುವ ಮೂಲಕ ಪಡೆಯಿತು. ಅಲ್ಲಿಗೆ, ಮಾಧ್ಯಮಗಳು ಪ್ರಜಾಪ್ರಭುತ್ವದ ನಾಲ್ಕನೆಯ ಸ್ತಂಭ ಎಂಬ ನಂಬಿಕೆಯೇ ಕುಸಿಯಿತು. ಇದು, ನವವಸಾಹತುಶಾಹಿಯ ಆತ್ಯಂತಿಕ ಗೆಲುವಾಗಿತ್ತು. ಯಾಕೆಂದರೆ ಅದು ತನ್ನ ಜಾಹೀರಾತನ್ನು, ವಿಚಾರವನ್ನು, ನಿರ್ದೇಶನವನ್ನು ಅದೃಶ್ಯವಾಗಿದ್ದುಕೊಂಡೇ ನೀಡುವ ಅತ್ಯಾಧುನಿಕ ಯಾಜಮಾನ್ಯದ ಪಟ್ಟುಗಳನ್ನು ಕೊಡಬಹುದಾಗಿತ್ತು. ಮತ್ತು ಕೊಡತೊಡಗಿತು. ಅಲ್ಲಿಗೆ ಶಿಕ್ಷಣವು ವಿವೇಕವನ್ನು ನೀಡುತ್ತಿಲ್ಲವಲ್ಲ. ಯಾಕೆ? ಎಂಬ ಯಕ್ಷಪ್ರಶ್ನೆ ಎದುರಾಯಿತು. ಬೌದ್ಧಿಕ ಸಾಮರ್ಥ್ಯವು ವಿವೇಚನಾಶಕ್ತಿಯಾಗಿ ಬದಲಾಗದ; ಮಾನವೀಯ ಸ್ಪಂದನೆಯಾಗಿ ರೂಪುಗೊಳ್ಳದ ವೈರುಧ್ಯ ನಿರ್ಮಾಣಗೊಂಡಿತು.

### ೩.೨ ಉದಾರೀಕರಣ:

ಎಲ್‌ಪಿಜಿ ಎಂಬುದೊಂದು ಸಂಯುಕ್ತ ಪದ. ಲಿಬರಲೈಸೇಶನ್, ಪ್ರೈವೆಟೈಜೇಶನ್ ಮತ್ತು ಗ್ಲೋಬಲೈಸೇಶನ್‌ಗಳನ್ನು ಒಂದರಿಂದ ಇನ್ನೊಂದನ್ನು ವಿಭಜಿಸಿ ನೋಡಲಾಗದಷ್ಟು ಸಂಕೀರ್ಣ ಸಂಬಂಧ ಈ ಪರಿಕಲ್ಪನೆಗಳಲ್ಲಿದೆ. ಇವು ಮುಖ್ಯವಾಗಿ ಮತ್ತು ಆತ್ಯಂತಿಕವಾಗಿ ಅರ್ಥವ್ಯವಸ್ಥೆಯನ್ನು ಪ್ರತಿಪಾದಿಸುತ್ತವೆ. ಆದರೆ, ಈ ಆರ್ಥಿಕ ಬದಲಾವಣೆಯು ಸಾಮಾಜಿಕ,

ರಾಜಕೀಯ ಮತ್ತು ಒಟ್ಟಾರೆ ಸಾಂಸ್ಕೃತಿಕ ಸ್ಥಿತಿಗತಿಯನ್ನು ಮರುರೂಪಿಸುವಷ್ಟು ಸಮರ್ಥವಾಗಿವೆ. ಉದಾರೀಕರಣವು ಬಂಡವಾಳೋದ್ಯಮಕ್ಕೆ ಪೂರಕವಾಗಿರುವ ನಿಯಮವಾಗಿದೆ. ಬಡರಾಷ್ಟ್ರಗಳ ಆರ್ಥಿಕ ಅಭಿವೃದ್ಧಿಯ ಹೆದ್ದಾರಿ ಎಂಬ ನಂಬಿಕೆಯನ್ನು ಹುಟ್ಟಿಸಿ, ಜಗತ್ತಿನ ಬೃಹತ್ ಉದ್ದಿಮೆದಾರರನ್ನು ಆ ದೇಶಗಳಿಗೆ ಆಹ್ವಾನಿಸಿ, ಅಲ್ಲಿಯ ಪ್ರಾಕೃತಿಕ ಸಂಪನ್ಮೂಲ ಮತ್ತು ಮಾನವ ಸಂಪನ್ಮೂಲವನ್ನು ಬಳಸಿಕೊಂಡು ಬೃಹತ್ ಉದ್ಯಮಗಳನ್ನು ಸ್ಥಾಪಿಸಲು ಪ್ರಚೋದನೆ ನೀಡುವುದು ಉದಾರೀಕರಣದ ಮುಖ್ಯ ನೀತಿಯಾಗಿದೆ. ಇದು ಮೇಲ್ನೋಟಕ್ಕೆ ಬಡ, ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಉದ್ಯೋಗಾವಕಾಶ ಸೃಷ್ಟಿಯೇ ಮುಂತಾದ ಪ್ರಗತಿಯ ಮಾದರಿ ಎನಿಸುತ್ತದೆ. ಆದರೆ, ಇಂತಹ ಉದ್ಯಮಗಳು ತಮ್ಮ ಅನುಕೂಲ ಮತ್ತು ಬಂಡವಾಳ ಹೆಚ್ಚಳದ ಗುರಿಯಿಂದ ವಿಮುಖವಾಗುವುದಿಲ್ಲ. ಅವರಿಗೆ ಬೇಕಿರುವುದು ಸ್ವಹಿತವೇ ವಿನಃ ಬಡಜನರ ಹಿತವಲ್ಲ. ಅವರು ಪ್ರಾಕೃತಿಕ ಸಂಪನ್ಮೂಲವನ್ನು ಮಾನವ ಸಂಪನ್ಮೂಲವನ್ನು ಹೀರಿಕೊಳ್ಳಲು ಉದ್ಯುಕ್ತರಾಗಿರುತ್ತಾರೆ. ಅವರು ಉತ್ಪಾದಿಸುವ ವಸ್ತುಗಳು ಜನರ ಹಿತಾಹಿತಗಳನ್ನು ಲಕ್ಷಿಸುತ್ತವೆಯೇ ಎನ್ನುವುದೂ ಮುಖ್ಯವಲ್ಲ. ಉದಾಹರಣೆಗೆ, ಧಾರವಾಡ ಸಮೀಪ ಇರುವ ಪೆಪ್ಸಿ ಕಂಪನಿಯು, ಒಂದು ದಿನಕ್ಕೆ ಬಳಸುವ ನೀರಿನ ಪ್ರಮಾಣವು ಧಾರವಾಡ ನಗರಕ್ಕೆ ಒಂದುದಿನ ಪೂರ್ತಿಯಾಗಿ ಪೂರೈಸುವ ನೀರಿನ ಪ್ರಮಾಣಕ್ಕೆ ಸಮ– ಎಂದು ಸರ್ಕಾರೀ ಅಂಕಿ ಅಂಶಗಳು ಹೇಳುತ್ತವೆ. ಇದಕ್ಕೆ ಪ್ರತಿಫಲವಾಗಿ ಪಡೆಯುವುದು ಪೆಪ್ಸಿ ಎಂಬ ರಾಸಾಯನಿಕಯುಕ್ತ ಪೇಯವನ್ನು. ನೀರಸಾಗರ ಜಲಾಶಯದ ಶುದ್ಧನೀರನ್ನು ಹೀಗೆ ವಿಷಯುಕ್ತ ನೀರಾಗಿ, ಮೂರುಪಟ್ಟು ಬೆಲೆ ತೆತ್ತು ಕುಡಿಯುವುದೇ ಅಭಿವೃದ್ಧಿ ನಾಗರಿಕತೆ ಎಂದು ಒಪ್ಪಿರುವುದರಿಂದ, ಅತ್ಯಂತ ಸರಳವಾಗಿ ನಡೆಯುವ ಈ ಅನ್ಯಾಯ ಯಾರಿಗೂ ಕಾಣುವುದಿಲ್ಲ. ಇಂತಹ ಕೋಟ್ಯಂತರ ನಿದರ್ಶನಗಳು ಕಳೆದ ಕಾಲು ಶತಮಾನದ ಭಾರತದ ವಾಸ್ತವವಾಗಿದೆ. ಈ ಉದಾರೀಕರಣದ ತಾತ್ವಿಕತೆಯನ್ನು ಅಭಿವೃದ್ಧಿ ಎಂದು ಒಪ್ಪಿಕೊಂಡಿರುವುದರಿಂದಲೇ ವಿಶ್ವಬ್ಯಾಂಕ್, ಐಎಂಎಫ್‌ಗಳಂತಹ ಜಾಗತಿಕ ಸಂಸ್ಥೆಗಳು, ಬಡರಾಷ್ಟ್ರಗಳಿಗೆ ಸಹಾಯ ಮಾಡಲು ಮತ್ತೆ ಬಹುರಾಷ್ಟ್ರೀಯ ಕಂಪನಿಗಳ ಮೊರೆಹೋಗುತ್ತವೆ. ಉದಾರೀಕರಣವನ್ನು 'ಸಾಲ ಪ್ರವೃತ್ತಿಯನ್ನು ಪುನರ್ ಸ್ಥಾಪಿಸುವುದು' ಎಂದು ವ್ಯಾಖ್ಯಾನಿಸಲಾಗುತ್ತದೆ. ಬಂಡವಾಳ ಹೂಡಿಕೆ ಮತ್ತು ಬಂಡವಾಳ ಸಂಗ್ರಹ ಎಂಬ ಸರಪಳಿಯನ್ನು ನಿರಂತರವಾಗಿ ಉತ್ತೇಜಿಸುವುದು ಇದರ ಲಕ್ಷಣ. ಇದರಿಂದಾಗಿ ಜನಸಾಮಾನ್ಯರು ಎರಡು ಪಟ್ಟು ಬೆಲೆ ತೆರುತ್ತ ಕಂಪನಿಗಳ ಬಂಡವಾಳವಾದಿ ನಿಲುವನ್ನು ಬೆಳೆಸುತ್ತಾರೆ. ರಾಷ್ಟ್ರೀಯ ಹೆದ್ದಾರಿಗಳ

ನಿರ್ಮಾಣದಂತಹ ಯೋಜನೆಗಳಲ್ಲಿ ಈ ಉದಾರವಾದಿ ಬಂಡವಾಳವಾದದ ಸುಲಿಗೆಕೋರತನ ಕಣ್ಣಿಗೆ ರಾಚುತ್ತಿರುತ್ತದೆ. ಜನಸಾಮಾನ್ಯರ ಹಣವು ಬಂಡವಾಳವಾದಿಗಳ ನಿಧಿಯಾಗಿ ಬೆಳೆಯಲು ಉದಾರವಾದದ ಕೊಡುಗೆ ದೊಡ್ಡದು.

ಉದಾರೀಕರಣವು ಸೈದ್ಧಾಂತಿಕವಾಗಿ ಮುಕ್ತ ಮಾರುಕಟ್ಟೆಯ ನೀತಿಗೆ ಪೂರಕವಾದುದಾಗಿದೆ. ಇದು ಜಗತ್ತಿನಾದ್ಯಂತ ವ್ಯಾಪಾರ ವಹಿವಾಟಿಗಿರುವ ಗಡಿ–ಗೆರೆಗಳನ್ನು ವಿಭಜಿಸುತ್ತದೆ. ಉಲ್ಲಂಘಿಸುತ್ತದೆ. ಯಾರು ಬೇಕಾದರೂ ಎಲ್ಲಿ ಬೇಕಾದರೂ ವ್ಯಾಪಾರೋದ್ಯಮ ಪ್ರಾರಂಭಿಸಲು ಸಹಕಾರಿಯಾದ ನೀತಿಯನ್ನು ತಂದಿದೆ. ಆದರೆ ಸಡಿಲ ಕಾನೂನಿನ ನಿಯಮವು ದೂರಗಾಮಿ ಪರಿಣಾಮದಲ್ಲಿ ಬೃಹತ್ ಬಂಡವಾಳಶಾಹಿಗಳಿಗೆ ಮಾತ್ರ ಸೂಕ್ತವಾಗಿದೆ. ಬಂಡವಾಳೋದ್ಯಮದ ಉತ್ಪನ್ನಗಳ ಸ್ವೀಕಾರ ಮಾರಾಟಗಳೆಲ್ಲ ಬಹುತೇಕ ಸ್ಥಳೀಯವಾಗಿ ನಡೆಯುತ್ತದೆ. ಇದರಿಂದ ಅನಗತ್ಯ ವಸ್ತು ಬಳಕೆಯ ಅಭಿಶಾಪಕ್ಕೆ ಕುಟುಂಬ ಹಾಗೂ ಸಮಾಜ ಒಳಗಾಗಬೇಕಾಗುತ್ತದೆ. ಉತ್ಪನ್ನಗಳು ಸಾಂಸ್ಕೃತಿಕ ಪಲ್ಲಟಗಳನ್ನು ಹುಟ್ಟು ಹಾಕುತ್ತವೆ. ಈ ಪಲ್ಲಟ ಇತ್ಯಾತ್ಮಕವಾದದ್ದಕ್ಕಿಂತಲೂ ನೇತ್ಯಾತ್ಮಕವಾದದ್ದೇ ಹೆಚ್ಚು. ಎಷ್ಟೋ ಸಂದರ್ಭದಲ್ಲಿ ಇವು ಸ್ಥಳೀಯ ಬದುಕಿನ ಚೆಲುವನ್ನು ಹದಗೆಡಿಸುವ ಹಾಗೆಯೂ ಇರುತ್ತವೆ. ಭಾರತದ ಸಂದರ್ಭದಲ್ಲಿ, ಉದಾರೀಕರಣದ ಫಲಿತಗಳು ಸಾಕಷ್ಟು ವೈವಿಧ್ಯಮಯವಾಗಿವೆ. ವಿಶ್ವಬ್ಯಾಂಕಿನಿಂದ ಸಾಲ ಪಡೆದು ಅಭಿವೃದ್ಧಿ ಯೋಜನೆಗಳನ್ನು ರೂಪಿಸಿಕೊಂಡ ಭಾರತವು ಇಂದಿಗೂ ಆ ಋಣಭಾರಕ್ಕಾಗಿ ಬೇರೆಲ್ಲ ಬಗೆಯ ಒಪ್ಪಂದಗಳಿಗೆ ಸಮ್ಮತಿಸಬೇಕಾಗುತ್ತದೆ. ಬಡದೇಶಗಳು ಐಎಂಎಫ್ ಮತ್ತು ವಿಶ್ವಬ್ಯಾಂಕುಗಳಲ್ಲಿ ಬೃಹತ್ ಪ್ರಮಾಣದ ಶೇರುದಾರರಾದ ರಾಷ್ಟ್ರಗಳ ಮರ್ಜಿಯನ್ನು ಕಾಯಬೇಕಾದ ಸ್ಥಿತಿ ನಿರ್ಮಾಣವಾಗಿದೆ. ಕೃಷಿ ಚಟುವಟಿಕೆಗಳಿಗೆ ಸಾಲ ಕೊಡುವ ಸಂದರ್ಭದಲ್ಲಿ ಆ ಸಾಲವನ್ನು ನಿರ್ದಿಷ್ಟ ಪದಾರ್ಥಗಳಿಗೆ ಸೂಚಿಸಲಾಗಿರುತ್ತದೆ. ಆಗ ಅನಿವಾರ್ಯವಾಗಿ, ಅದೇ ಪದಾರ್ಥಗಳನ್ನು ರೈತರು ಪಡೆಯಬೇಕಾಗುತ್ತದೆ. ಆ ಪದಾರ್ಥಗಳು ಇಲ್ಲಿಯ ಮಣ್ಣಿನ ಗುಣಕ್ಕೆ ಹೊಂದಲಿ, ಹೊಂದದಿರಲಿ; ಅವುಗಳಿಗೆ ಪರ್ಯಾಯಗಳಿರುವುದಿಲ್ಲ. ಈ ಸಾಲಬಾಧೆಯು ಪ್ರಾದೇಶಿಕ ಜ್ಞಾನವನ್ನು ನಿರ್ನಾಮ ಮಾಡಿಬಿಡುತ್ತದೆ. ಸಾಂಪ್ರದಾಯಿಕ, ಸಾವಯವ ಕೃಷಿ ಪದ್ಧತಿಯಲ್ಲಿದ್ದ ಸಹಜ ತಿಳುವಳಿಕೆ ಮತ್ತು ಕೌಶಲ್ಯಗಳು ಮರೆಮಾಚಲ್ಪಟ್ಟು ಮರೆಯಾಗುತ್ತವೆ. ಇದು ಕೃಷಿಕ್ಷೇತ್ರವೊಂದರಲ್ಲಿ ಮಾತ್ರ ನಡೆಯುವುದಿಲ್ಲ. ಎಲ್ಲ ಸಾಂಪ್ರದಾಯಿಕ ತಿಳುವಳಿಕೆಯೂ ಹೀಗೆ ಆಘಾತಕ್ಕೊಳಗಾಗುತ್ತದೆ. ಇದರ ಪರಿಣಾಮ ಸಾಮಾಜಿಕವಾಗಿ ಸಂಭವಿಸುತ್ತದೆ.

## ೩.೩ ಖಾಸಗೀಕರಣ:

ಬ್ಯಾಂಕುಗಳ ರಾಷ್ಟ್ರೀಕರಣವಾದ ದೇಶದಲ್ಲಿ ಖಾಸಗಿ ಬ್ಯಾಂಕುಗಳು ಹುಟ್ಟಿದ್ದು, ಜಾತಿಯಾಧಾರಿತ ಬ್ಯಾಂಕ ಸೇವೆ ಲಭ್ಯವಾಗಿದ್ದು; ಮನುಷ್ಯರ ಮೂಲಭೂತ ಅಗತ್ಯಗಳನ್ನು ಪೂರೈಸುವ ಸೇವಾವಲಯಗಳು ಸರ್ಕಾರಿ ಸೆಕ್ಟರ್‌ನಿಂದ ಸರಿದು ಖಾಸಗಿ ಸೆಕ್ಟರ್‌ಗೆ ಒಳಗಾಗಿದ್ದು- ಇವು ಜಾಗತೀಕರಣದ ಪರಿಣಾಮವಾದ ಖಾಸಗೀಕರಣದ ಫಲಿತಗಳು. ಸರ್ಕಾರೀ ವಲಯದಲ್ಲಿರುವ ಸಮುದಾಯ ಜವಾಬ್ದಾರಿಗಿಂತಲೂ, ಏಕ ವ್ಯಕ್ತಿ-ಸಂಸ್ಥೆಗಳ ಖಾಸಗಿ ಯಾಜಮಾನ್ಯದಲ್ಲಿ ನಂಬಿಕೆಯಿಡುವ ಸೈದ್ಧಾಂತಿಕತೆ ಇದು. ಇದು ಸರಿಯಾದದ್ದೇ? ಸಾಧುವಾದದ್ದೇ? ಪ್ರಜಾಸತ್ತೀಯ ಮೌಲ್ಯಗಳಿಗೆ ವಿರುದ್ಧವಾದುದಲ್ಲವೇ? ಎಂಬ ಚಿಂತನೆಗೂ ಅವಕಾಶವಿಲ್ಲದಂತೆ, ಸಾಮಾಜಿಕವಾಗಿ ಈ ಹೇರಿಕೆಯು ನಡೆದುಹೋಗಿದೆ. ಭಾರತದಂತಹ ಅಸಮಾನತೆಯ ನೆಲೆಗಟ್ಟಿನ ಮೇಲೆ ನಿಂತಿರುವ ಸಮಾಜದಲ್ಲಿ ಏಕಸ್ವಾಮ್ಯವನ್ನು ಪುರಸ್ಕರಿಸುವುದು ಎಂದರೆ; ಮರಳಿ ಪುರೋಹಿತಶಾಹಿ ರಾಜಶಾಹಿ ಕಾಲಕ್ಕೆ ಹಿಮ್ಮುಖವಾಗಿ ಚಲಿಸುವುದಾಗಿದೆ. ವರ್ಗ, ಜಾತಿ, ಲಿಂಗ ತಾರತಮ್ಯಗಳ ಸಮಾಜದಲ್ಲಿ ಸಹಜವಾಗಿಯೇ ಗುಲಾಮಗಿರಿಯ ಭಾವನೆಯನ್ನು ಉದ್ದೀಪಿಸುತ್ತದೆ. ಆರೋಗ್ಯ, ಆಹಾರ, ನೀರು, ಸಾರಿಗೆ, ಶಿಕ್ಷಣಗಳಂತಹ ಮೂಲಭೂತ ಅವಶ್ಯಕತೆಗಳನ್ನು ಪೂರೈಸಿಕೊಳ್ಳುವಲ್ಲಿಯೂ ಸರ್ಕಾರೀ ವಲಯವು ಹಿಂದೆ ಸರಿದು ಆ ಎಲ್ಲ ವಲಯಗಳನ್ನು ಖಾಸಗಿ, ಅರೆಖಾಸಗಿ ಸುಪರ್ದಿಗೆ ಒಪ್ಪಿಸಲಾಗಿದೆ. ಇದಕ್ಕೆ ಮುಖ್ಯ ಕಾರಣವೆಂದರೆ, ಖಾಸಗಿ ವಲಯದ ಬಂಡವಾಳೋದ್ಯಮಕ್ಕೆ ಅವಕಾಶವನ್ನು ಮಾಡಿಕೊಡುವುದು. ಆದರೆ ಶ್ರೀಮಂತರನ್ನು ಶ್ರೀಮಂತರನ್ನಾಗಿಸುವ ಈ ಅಭಿವೃದ್ಧಿ ಯೋಜನೆಗಳ ಪರಿಣಾಮ ಮಾತ್ರ ಭೀಕರವಾದದ್ದು ಹಾಗೂ ದೀರ್ಘ ಕಾಲೀನವಾದದ್ದು. ಖಾಸಗೀಕರಣಕ್ಕೆ ಆಸ್ಪದ ನೀಡುವುದರಿಂದ -ಜನಸಾಮಾನ್ಯರು ತೆರಬೇಕಾದ ಹಣದ ಪ್ರಮಾಣ ಹೆಚ್ಚುತ್ತದೆ. ಹೀಗೆ ಬಂಡವಾಳವನ್ನು ಆಕರ್ಷಿಸುವ ಕಾರಣಕ್ಕಾಗಿಯೇ ಈ ವಲಯಗಳು ಹೊರತೋರಿಕೆಯ ನಿಯತ್ತನ್ನು ವಿಜೃಂಭಣೆಯನ್ನು ಪೋಷಿಸುತ್ತವೆ. ಉದಾಹರಣೆಗೆ, ಪ್ರಾಥಮಿಕ ಶಿಕ್ಷಣದ ಖಾಸಗಿ ಶಾಲೆಗಳಲ್ಲಿ ಹೊರ ಪೋಷಾಕಿನ ತೋರುಗಾಣಿಕೆ ಬಿಗಿಯಾಗಿರುತ್ತದೆ. ಆದರೆ ಕೋಣೆಯೊಳಗೆ ಪಾಠ ಮಾಡುವ ಶಿಕ್ಷಕರಲ್ಲಿ ಬಹುಪಾಲು ಜನರು ಪದವಿಯಲ್ಲಿ ತೇರ್ಗಡೆ ಹೊಂದಲಾಗದೆ ಇದ್ದವರಾಗಿರುತ್ತಾರೆ. ಸರ್ಕಾರಿ ಶಾಲೆಗಳ ಶಿಕ್ಷಕರು ಶೈಕ್ಷಣಿಕವಾಗಿ ಪ್ರಬುದ್ಧರು ಮತ್ತು ತರಬೇತಿಯನ್ನು ಪಡೆದವರಾಗಿರುತ್ತಾರೆ. ಇದೇ ಸ್ಥಿತಿಯು ಎಲ್ಲ ಕ್ಷೇತ್ರಗಳಲ್ಲಿಯೂ ಇರುತ್ತದೆ. ಅತ್ಯಂತ ಬುದ್ಧಿವಂತ ವಿದ್ಯಾರ್ಥಿಗಳನ್ನು ಹೆಚ್ಚು ಹಣ ತುಂಬಿಸಿ ಸಂಸ್ಥೆಗಳಿಗೆ ಸೇರಿಸಿಕೊಳ್ಳುವ ಖಾಸಗಿ

ವಲಯದ ಶಾಲೆಗಳ ಫಲಿತಾಂಶ ಉತ್ತಮವಾಗಿರಲೇಬೇಕು. ಆದರೆ, ಬಡ ಗ್ರಾಮೀಣ ವಲಯದ ವಿದ್ಯಾರ್ಥಿಗಳು ಸಾಧನೆಯಲ್ಲಿ ಹಿಂದೆ ಉಳಿಯುವುದಿಲ್ಲ. ಹಾಗಿದ್ದೂ, ಖಾಸಗಿ ಶಾಲೆಗಳಿಗೆ ಅನಗತ್ಯವಾದ ಮನ್ನಣೆಯ ಗರಿ ಹಾಕುತ್ತಲೇ ಇರುತ್ತೇವೆ.

ಖಾಸಗೀಕರಣ, ಬಂಡವಾಳಶಾಹಿಯನ್ನು ಬೆಳೆಸುತ್ತದೆ ಮಾತ್ರವಲ್ಲ ಸಾಮಾಜಿಕ ನ್ಯಾಯವನ್ನು ಅಸಡ್ಡೆ ಮಾಡಿ, ಅಸಮಾನ ಸಮಾಜವನ್ನು ಪೋಷಿಸುತ್ತದೆ. ಸಂವಿಧಾನ ದತ್ತವಾದ ಮೀಸಲಾತಿಯ ಹಂಗು ಖಾಸಗಿವಲಯಕ್ಕಿರುವುದಿಲ್ಲ. ಯಾವ ಖಾಸಗಿ ಕಂಪನಿಯೂ ತನ್ನ ಮುಂದಿರುವ ಅಭ್ಯರ್ಥಿಯ ಅಂಕಪಟ್ಟಿ-ಕೌಶಲ್ಯ-ಸ್ವಜಾತಿ ಬಾಂಧವ್ಯ ಇತ್ಯಾದಿಗಳನ್ನು ಗಮನಿಸುತ್ತದೆಯೇ ಹೊರತೂ; ದಲಿತನ ೫೦%ಕ್ಕೂ, ಮೇಲ್ವರ್ಗದವನ ೮೦% ಇರುವ ಚಾರಿತ್ರಿಕ ವಾಸ್ತವವನ್ನು ಕಾಣುವುದಿಲ್ಲ. ಇನ್‌ಫೋಸಿಸ್ ಸಂಸ್ಥೆಯ ಮುಖ್ಯಸ್ಥರಾಗಿದ್ದ ನಾರಾಯಮೂರ್ತಿಯವರು ರಾಷ್ಟ್ರಗೀತೆ ನಡೆದ ಸಂದರ್ಭದಲ್ಲಿಯೇ ವೇದಿಕೆಯಿಂದ ಇಳಿದು ಹೋದ ಘಟನೆ, ಇತ್ತೀಚಿನ ವರ್ಷಗಳಲ್ಲಿ ವರದಿಯಾಗಿತ್ತು. ಸಾಂವಿಧಾನಿಕ ತಪ್ಪಿಗೆ ಶಿಕ್ಷೆಯಾಗುವುದು ಬಡವರಿಗೆ ಮತ್ತು ಅಸಹಾಯಕರಿಗೆ ಮಾತ್ರ ಎಂಬ ಅಲಿಖಿತ ಒಪ್ಪಂದವಿರುವ ನಮ್ಮದೇಶದಲ್ಲಿ ನಾರಾಯಣಮೂರ್ತಿಗಳಿಗೆ ಶಿಕ್ಷೆಯಾಗಿಲ್ಲ- ಆ ಮಾತು ಬೇರೆ. ಇಷ್ಟು ಒರಟು ದಾರ್ಷ್ಟ್ಯ ತೋರುವವರು ತಮ್ಮ ಆಂತರಿಕ ಆಳ್ವಿಕೆಯಲ್ಲಿ ಸಾಂವಿಧಾನಿಕ ಶಿಸ್ತನ್ನು ಜಾರಿಗೆ ತರಲು ಸಾಧ್ಯವೇ? ತೀರ ಇತ್ತೀಚೆಗೆ ದೇಶದಲ್ಲಿ ಕೋಮುಗಲಭೆ ವಿಜೃಂಭಿಸುತ್ತಿರುವಾಗ, ಮುಂಬೈಯ ಕಂಪನಿಯೊಂದು ಉದ್ಯೋಗಾವಕಾಶದ ಜಾಹೀರಾತಿನಲ್ಲಿ 'ಮುಸ್ಲಿಮರು ಅರ್ಜಿ ಸಲ್ಲಿಸುವ ಅಗತ್ಯವಿಲ್ಲ' ಎಂದು ನಮೂದಿಸಿತ್ತು. ಹೀಗೆ ಸಂವಿಧಾನ ವಿರೋಧಿಯಾಗಿ, ಸಾಮಾಜಿಕ ನ್ಯಾಯಕ್ಕೆ ವ್ಯತಿರಿಕ್ತವಾಗಿ ಬಂಡವಾಳಶಾಹಿಗಳು ವರ್ತಿಸಲು ಖಾಸಗೀಕರಣವು ಅನುವು ಮಾಡಿಕೊಡುತ್ತದೆ. ಇದರಿಂದ ಸಾಮಾಜಿಕವಾದ ಬೂರ್ಜ್ವಾಯಿಸಂ ಬೆಳೆಯುತ್ತದೆ. ಬಡವ-ಶ್ರೀಮಂತರ ಅಂತರ ಅಮಾನುಷವಾಗಿ ಹೆಚ್ಚುತ್ತದೆ.

ಭಾರತಾಂಬೆಯೆ, ಕಂಡೆ ನಿನ್ನ ಮಡಿಲಲ್ಲಿ ಎಂಥ ಚಿತ್ರ
ಸಂಸ್ಕಾರವಿಲ್ಲ ಹೆಣಕೆಂದು ತಲೆಗೆ ಕೈಹೊತ್ತ ಬಡವನೊಬ್ಬ
ಇನ್ನೊಬ್ಬನಲ್ಲೆ ಆಚರಿಸುತ್ತಿರುವ ವೈಭವದ ಹುಟ್ಟುಹಬ್ಬ

ಎಂಬ ನವೋದಯದ ಅಸಮಾನ ಭಾರತದ ಚಿತ್ರಣ ಇನ್ನೂ ಭೀಕರವಾಗತೊಡಗಿದೆ. ಇಂದಿಗೂ, ಹಸಿವಿನಿಂದ ಸಾಯುತ್ತಿರುವ ಜನರಿರುವ ದೇಶದಲ್ಲಿ ಕಳೆದ ೫ ವರ್ಷಗಳಲ್ಲಿ ಮಿಲೇನಿಯರ್ಸ, ಬಿಲೇನಿಯರ್ಸ ಸಂಖ್ಯೆ ಏರುತ್ತಿದೆ ಎಂಬ ಅಪಾಯದ ಗಂಟೆ ಬಾರಿಸ್ತಿದೆ.

ಪಿ.ಸಾಯಿನಾಥ ಹೇಳುತ್ತಾರೆ- ದೇಶವೊಂದರ ಸಾಮಾಜಿಕ ಆರೋಗ್ಯವನ್ನು ಉದ್ಯೋಗಸ್ಥರ ೧:೧೦೦೦ ಅನುಪಾತದಲ್ಲಿ ನೋಡಬೇಕು. ಅಂದರೆ, ಕಂಪನಿಯ ಯಜಮಾನನ ಸಂಪಾದನೆ ಮತ್ತು ಕಂಪನಿಯ ಕಾರ್ಮಿಕನ ಸಂಪಾದನೆಗಳ ಅನುಪಾತವಿದು. ಇದೂ ಅಸಹಜ ಅನುಪಾತವೇ. ಆದರೆ ನಮ್ಮ ದೇಶದಲ್ಲಿ ಈ ಅನುಪಾತ ೧:೩೦,೦೦೦ ಆಗಿದೆ. ಇಂತಹ ಅನಾರೋಗ್ಯಕಾರಿ ಸ್ಥಿತಿಗೆ ಖಾಸಗೀಕರಣದ ಕೊಡುಗೆ ದೊಡ್ಡದಿದೆ. ಇದು ಆರ್ಥಿಕ ವ್ಯತ್ಯಾಸ ಮಾತ್ರ ಆಗಿರುವುದಿಲ್ಲ. ಸಮಾಜದಲ್ಲಿ ತಲ್ಲಣವನ್ನು ಸೃಷ್ಟಿಸುವ ಸ್ಥಿತಿಯಾಗಿರುತ್ತದೆ. ಕೇಂದ್ರ ಮತ್ತು ಪರಿಧಿಗಳು ಸತತವಾಗಿ ಹಿಗ್ಗುತ್ತ ಸಂಬಂಧ ಬೆಸೆಯುವ ತ್ರಿಜ್ಯ ಸ್ಥಿತಿಯೇ ಪುಡಿಪುಡಿಯಾಗಿ ವ್ಯವಸ್ಥೆ ನಾಶವಾಗುವ ಹಂತಕ್ಕೆ ತಲುಪುತ್ತದೆ. ವಿಶ್ವವ್ಯಾಪಾರ ಸಂಘಟನೆಯು ತನ್ನ ಖಾಸಗೀಕರಣದ ತತ್ವದ ಮೂಲಕ ಬಡಜನತೆಯ ಬದುಕಿನ ಹಕ್ಕನ್ನು ಕಸಿದುಕೊಳ್ಳುತ್ತಿದೆ. ಇದುವರೆಗೆ, ಸರ್ಕಾರಗಳು 'ಕಲ್ಯಾಣ ರಾಜ್ಯದ ಪರಿಕಲ್ಪನೆಯಲ್ಲಿ ಜನತೆಯ ಮೂಲಭೂತ ಅಗತ್ಯಗಳಾದ ಆರೋಗ್ಯ, ಶಿಕ್ಷಣ, ಶುದ್ಧನೀರು, ಆಹಾರ ಇತ್ಯಾದಿಗಳನ್ನು ತಮ್ಮ ಆದ್ಯತೆಯಾಗಿಸಿಕೊಂಡಿದ್ದವು. ಇಂತಹ ೧೬೦ ಸೇವೆಗಳನ್ನು ಖಾಸಗೀಕರಣಗೊಳಿಸಿದ್ದರಿಂದ, ಬಡವರ ಬದುಕಿನ ಹಕ್ಕು ನಿರ್ನಾಮಗೊಳ್ಳುತ್ತಿದೆ. ಇದನ್ನು ಜನಸಮುದಾಯ ನಿಭಾಯಿಸಬೇಕಾದ ಬಿಕ್ಕಟ್ಟು ಎದುರಾಗಿದೆ.

**೩.೪ ನಗರೀಕರಣ:**

ಪ್ರಾಚೀನ ಕಾಲದಿಂದಲೂ ಒಂದು ನಿರ್ಧಿಷ್ಟ ಪ್ರದೇಶಕ್ಕೆ ಅನುಗುಣವಾಗಿ ವ್ಯಾಪಾರ-ವಹಿವಾಟು ನಡೆಯುವ ಕೇಂದ್ರವನ್ನು ಪುರ, ಪಟ್ಟಣ, ನಗರ ಎಂದು ಗುರುತಿಸಿಕೊಂಡು ಬರಲಾಗಿದೆ. ಈ ಪ್ರದೇಶಗಳು ಗ್ರಾಮಗಳ ಮೂಲಭೂತ ಸ್ಥಿತಿಗಿಂತ ಬೇರೆಯಾಗಿರುತ್ತವೆ. ಅವುಗಳ ರುಚಿ-ಅಭಿರುಚಿಗಳು ಉದಾರವಾಗಿರುತ್ತವೆ. ಆಧುನಿಕತೆಯ ಪ್ರವೇಶದೊಂದಿಗೆ ಶಿಕ್ಷಣ, ಉದ್ಯೋಗ, ಕೈಗಾರಿಕೆಗಳ ಕಾರಣದಿಂದ ನಿರ್ಮಾಣಗೊಂಡ ನಗರಗಳು, ದೇಶದ ಚಾರಿತ್ರ್ಯವನ್ನು ರೂಪಿಸುವ ಮಾನದಂಡಗಳಾದವು. ಗ್ರಾಮೀಣ ಮತ್ತು ನಾಗರಿಕ ಸಮುದಾಯಗಳ ಕೊಂಡಿಯಂತೆ ಮಧ್ಯಮವರ್ಗವು ನಗರಗಳನ್ನು ರೂಪಿಸಿತು. ಈ ನಗರಗಳ ಬದುಕಿನ ಅನಿವಾರ್ಯತೆಯು ಪ್ರಾಚೀನ ಸಮಾಜದ ಮಾನವ ಭೇದ ನೀತಿಯನ್ನು ನಿರ್ಲಕ್ಷಿಸಬೇಕಿತ್ತು. ಜಾತಿ, ಧರ್ಮ, ಲಿಂಗ ತಾರತಮ್ಯಗಳ ಗಡಿಯನ್ನು ಎತ್ತರಿಸಿಕೊಂಡು ಬದುಕುವುದು ನಗರಕ್ಕೆ ಒಪ್ಪಿತವಾದುದಾಗಿರಲಿಲ್ಲ. ಹಾಗಾಗಿಯೇ ಹಳ್ಳಿಗಳ ಜಾತಿ ವ್ಯವಸ್ಥೆಯಿಂದ ರೋಸಿಹೋಗಿದ್ದ ಡಾ. ಅಂಬೇಡ್ಕರ್ 'ನಗರಗಳು ಮಾತ್ರ ಮನುಷ್ಯರ

ಘನತೆಯನ್ನು ರಕ್ಷಿಸಬಲ್ಲವು' ಎಂದಿದ್ದರು. ಆಧುನೀಕರಣದ ಸಂದರ್ಭದಲ್ಲಿ ಗ್ರಾಮೀಣ ಬದುಕಿನ ಮೌಢ್ಯ-ಕಂದಾಚಾರಗಳನ್ನು ಹುಸಿಗೊಳಿಸುವ ಪರ್ಯಾಯವಾಗಿ ನಗರಗಳು ಕಂಡಿದ್ದವು. ಮುಂಬೈ ಮಹಾನಗರದ ಬಗ್ಗೆ ಬರೆಯುತ್ತ, ಡಾ. ರಹಮತ್ ತರೀಕೆರೆಯವರು 'ನಗರಗಳೆಂದರೆ ಎಲ್ಲರನ್ನೂ ತಮ್ಮ ಮಡಿಲಲ್ಲಿಟ್ಟುಕೊಂಡು ಪೊರೆಯುವ ತಾಯ ಮಡಿಲುಗಳು' ಎಂದಿದ್ದರು.

ಆದರೆ, ಜಾಗತೀಕರಣದ ಮರ್ಮಾಘಾತಕ್ಕೆ ಸಿಲುಕಿ ನಗರಗಳೂ ತಮ್ಮ ಸಹಜತೆಯಿಂದ ದೂರವಾದವು. ಮತೀಯವಾದ, ಕೋಮುವಾದ, ಜಾತೀಯತೆಗಳು ಸುಶಿಕ್ಷಿತ-ಆಧುನಿಕ ಚೌಕಟ್ಟಿನಿಂದ ಇನ್ನಷ್ಟು ಹೊಳಪನ್ನು ಪಡೆದು ಕಣ್ಣು ಕುಕ್ಕತೊಡಗಿದವು. ಗ್ರಾಮ ಮತ್ತು ನಗರಗಳೆಂದರೆ, ಸೌಲಭ್ಯ ಅವಕಾಶಗಳ ಕಾರಣದ ವ್ಯತ್ಯಾಸವೇ ಹೊರತೂ ಜನರ ಆಲೋಚನಾ ದಾಟಿಯಲ್ಲಿ ಕಾಣುವ ವ್ಯತ್ಯಾಸಗಳಲ್ಲ ಎಂಬ ಸ್ಥಿತಿ ನಿರ್ಮಾಣವಾಯಿತು. ಮೂಡ್ನಾಕೂಡು ಚಿನ್ನಸ್ವಾಮಿಯವರ ಕೆಂಡಮಂಡಲ ಎಂಬ ನಾಟಕವು ಈ ಪ್ರಮೇಯವನ್ನೇ ವಿವರಿಸಿಕೊಳ್ಳುತ್ತದೆ. ಹಳ್ಳಿಯಿಂದ ಪಟ್ಟಣಕ್ಕೆ ಉದ್ಯೋಗವನ್ನು ಅರಸಿ, ಬದುಕಿನ ನೆಮ್ಮದಿಯನ್ನು ಅರಸಿ ಬರುವ ನಾಲ್ವರು ಯುವಕರಲ್ಲಿ; ನಾಲ್ವರೂ ನೆಲೆನಿಲ್ಲುವುದು ತಂತಮ್ಮ ಜಾತಿಯಾಧಾರಿತ ವೃತ್ತಿಗಳಲ್ಲಿಯೇ. ದಲಿತ ಯುವಕರು ನಗರಕ್ಕೆ ಬಂದು ಪೌರಕಾರ್ಮಿಕರಾಗಿ ದುಡಿಯಬೇಕಾಗುತ್ತದೆ ಅಷ್ಟೇ- ಎಂಬ ಕೆಂಡಮಂಡಲ ನಾಟಕದ ಆಶಯವು ಜಾಗತೀಕರಣದ ಕಾಲದಲ್ಲಿ ಮಾನವ ಪ್ರಗತಿಯ ವಿರುದ್ಧ ನೆಲೆಯಲ್ಲಿ ಸಮಾಜವು ಚಲಿಸುತ್ತಿದೆ ಎಂಬ ದುರಂತ ವಾಸ್ತವವನ್ನು ಹೇಳಿತು.

ಲಿಂಗ ಸಮಾನತೆಯ ಅವಕಾಶವಿರುವ ನಗರಗಳಲ್ಲಿ ಮಹಿಳೆಯರ ಸಮಾನತೆಯ ನಡಿಗೆಯ ದಾರಿಯು ದಿನದಿಂದ ದಿನಕ್ಕೆ ಇಕ್ಕಟ್ಟಿನದಾಗುತ್ತಿದೆ. ಲಿಂಗ ದೌರ್ಜನ್ಯದ ಪ್ರಮಾಣ ಏರಿಕೆಯಾಗುತ್ತಿದೆ. ನಗರಗಳಲ್ಲಿ ಅಪಾರ್ಟಮೆಂಟಗಳನ್ನು ನಿವೇಶನಗಳನ್ನು ಮೇಲ್ಜಾತಿಗಳು ತಂತಮ್ಮ ಜಾತಿಯ ಜನರಿಗಾಗಿ ಕಾದಿರಿಸಲಾರಂಭಿಸಿವೆ. ತಮ್ಮ ಜಾತಿಯ ಜನರ ನಡುವೆ ಬದುಕುವ 'ಸೌಖ್ಯಕ್ಕಾಗಿ ಲಕ್ಷಾಂತರ ರೂಪಾಯಿಗಳನ್ನು ಹೆಚ್ಚುವರಿಯಾಗಿ ಕೊಡಲು ಜನರು ಸಿದ್ಧರಿದ್ದಾರೆ. ಇಂದು ನಗರಗಳಲ್ಲಿರುವ ಮಧ್ಯಮವರ್ಗ ಆಧುನಿಕ ತಂತ್ರಜ್ಞಾನ, ಯಂತ್ರ ನಾಗರಿಕತೆಯ ಸೌಲಭ್ಯ, ಸಂವಿಧಾನ ಬದ್ಧವಾದ ಸಮಾನತೆಯ ಸವಲತ್ತುಗಳನ್ನು ಅನುಭೋಗಿಸುತ್ತಿದೆ. ಆದರೆ, ಈ ಯಾವ ಸವಲತ್ತುಗಳೂ ಅವರ ಆಲೋಚನೆಯನ್ನು ಆಧುನಿಕಗೊಳಿಸಲು, ಉದಾರವಾಗಿಸಲು ಸಾಧ್ಯವಾಗುತ್ತಿಲ್ಲ. ಅತ್ಯಾಧುನಿಕ ಯಂತ್ರ

ನಾಗರಿಕತೆಯಲ್ಲಿ ಜೀವನ ನಡೆಸುತ್ತ, ಆ ಸೌಲಭ್ಯಗಳ ಮೂಲಕವೇ ಮತೀಯ ಜಡತೆಯನ್ನು-ಮೌಢ್ಯ ಕಂದಾಚಾರಗಳನ್ನು ಅನುಸರಿಸುತ್ತಿರುವ ಭ್ರಷ್ಟ ಸ್ಥಿತಿಗೆ ನಗರ ಬದುಕು ತಲುಪಿದೆ. ವಾಸ್ತು, ಜ್ಯೋತಿಷ್ಯ, ಮೌಢ್ಯ, ಅತಿಮಾನುಷ ನಂಬಿಕೆಗಳು ವಿವೇಕ ಮತಿತ್ವವನ್ನೇ ನಾಶಮಾಡುತ್ತಿರುವ ಸಂದರ್ಭ ಇದು. "ನಾವು ವೈಜ್ಞಾನಿಕ ಉಪಕರಣಗಳ ಬಳಕೆಯನ್ನು ಕಲಿತೆವು. ಆದರೆ ವೈಚಾರಿಕ ಮನೋಧರ್ಮವನ್ನು ಮರೆತೆವು" –ಎಂದಿದ್ದರು ಕುವೆಂಪು. ಇಂದಿನ ವಾಸ್ತವ ಈ ಜಡತೆಯನ್ನು ಆತ್ಯಂತಿಕವಾಗಿಸಿದೆ.

ಆಧುನಿಕ ಕಾಲಕ್ಕೂ ಜಾಗತೀಕರಣದ ಕಾಲಕ್ಕೂ ನಗರ ಪ್ರಜ್ಞೆಯಲ್ಲಿ ಉಂಟಾದ ವ್ಯತ್ಯಸ್ಥ ನಡೆಯನ್ನು ಸಂವೇದನಾಶೀಲತೆಯು ಎದುರಾಗಿಸಿಕೊಂಡ ಬಗೆಯನ್ನು ಹುಡುಕುವುದು ಮಹತ್ವದ ಸಂಗತಿಯಾಗಿದೆ.

**೩.೫ ಜಾಗತೀಕರಣ:**

ವಿಶ್ವ ವ್ಯಾಪಾರ ಸಂಘಟನೆ ಎಂಬ ಸಂಸ್ಥೆಯ ಅಡಿಯಲ್ಲಿ ಮುಕ್ತ ಮಾರುಕಟ್ಟೆ ಎಂಬ ಪರಿಕಲ್ಪನೆಯಿಂದ ಮಾತ್ರ ಸಮಾನತೆ ಸಾಧ್ಯ ಎಂಬ ನಿಲುವನ್ನು ಅಭಿವೃದ್ಧಿ ಹೊಂದಿದ ರಾಷ್ಟ್ರಗಳು 'ಗ್ಯಾಟ್' ಒಪ್ಪಂದದ ಮೂಲಕ ಜಗತ್ತಿನ ಇನ್ನಿತರ ರಾಷ್ಟ್ರಗಳ ಮೇಲೆ ನಿರ್ಬಂಧಿಸಿದ ವ್ಯವಸ್ಥೆಯೇ ಜಾಗತೀಕರಣ. ಜಗತ್ತಿನ ಆಳುವ ವರ್ಗದ ಹಿತಾಸಕ್ತಿಗೆ ಅನುಕೂಲವಾದ ಆರ್ಥಿಕತೆಯನ್ನು ಮತ್ತು ಸಿದ್ಧಾಂತಗಳನ್ನು ಸರ್ವಮಾನ್ಯವಾಗಿಸುವುದು. ಅವುಗಳು ನ್ಯಾಯಸಮ್ಮತವಾಗಿವೆ, ತಾರ್ಕಿಕವಾಗಿವೆ ಮತ್ತು ಆತ್ಯಂತಿಕವಾಗಿವೆ ಎಂಬ ನಂಬಿಕೆಯನ್ನು ಹುಟ್ಟಿಸುವುದು – ಇದು ಜಾಗತೀಕರಣದ ನಡಾವಳಿಯಾಗಿದೆ. ಇದನ್ನೇ ಚಾಮಸ್ಕಿ There is no alternative ಎಂಬ ನಂಬಿಕೆಯನ್ನು ಉತ್ಪಾದಿಸುವ ವ್ಯವಸ್ಥೆ ಎಂದು ಕರೆಯುತ್ತಾರೆ. ಅಮೇರಿಕಾ ನೇತೃತ್ವದ ಐರೋಪ್ಯ ಸಮುದಾಯ ರಾಷ್ಟ್ರಗಳು ವಿಶ್ವವ್ಯಾಪಾರ ಸಂಘಟನೆ (WTO) ಅಂತರಾಷ್ಟ್ರೀಯ ಹಣಕಾಸು ನಿಧಿ (IMF)ಮತ್ತು ವಿಶ್ವಬ್ಯಾಂಕ್‌ಗಳನ್ನು ತಮ್ಮ ಅನುಕೂಲವರ್ತಿಗಳಾಗಿಸಿಕೊಂಡು ನಡೆಸಿದ ವ್ಯಾಪಾರಿ ಕಾರ್ಯಾಚರಣೆ ಇದು. ಈ ಕಾರ್ಯಾಚರಣೆಯು ಅದ್ವಿತೀಯ ಯಶಸ್ಸನ್ನು ಪಡೆಯಲು ಮತ್ತು ಯಶಸ್ಸಿನ ಪರಂಪರೆಯು ನಿರಂತರವಾಗಿರಲು ಸಾಧ್ಯವಾಗಿದ್ದೇ ಅದು ರೂಪಿಸಿ ಚಲಾವಣೆಗೆ ತಂದ ಕಥನಗಳ ಮೂಲಕ. ಜಗತ್ತಿನಾದ್ಯಂತ ಪ್ರತಿಯೊಂದು ಧರ್ಮವೂ ತನ್ನ ಸಿದ್ಧಾಂತವನ್ನು ಜನಾಕರ್ಷಕವಾಗಿಸಿದ್ದು ಕಥನಗಳ ಮೂಲಕ. ಶ್ರೀಮಂತರ ಧರ್ಮ ಸಿದ್ಧಾಂತವಾದ ಜಾಗತೀಕರಣವೂ ಜನಸಾಮಾನ್ಯರು ತನ್ನನ್ನು ವಿಧೇಯವಾಗಿ ಒಪ್ಪಿ

ಅನುಸರಿಸಬೇಕು ಎಂಬ ಕೌಶಲ್ಯವನ್ನು ಮರೆಯಿತು. ಜಾಗತೀಕರಣ ಎನ್ನುವುದು ಆಧುನಿಕತೆಯ ಮುಂದುವರಿದ ರೂಪ. ಅದೊಂದು ಸಹಜ ವಿದ್ಯಮಾನ. ಅದನ್ನು ನಿರಾಕರಿಸಲು ಸಾಧ್ಯವಿಲ್ಲ ಯಾಕೆಂದರೆ ಅದು ನಿರಾಕರಿಸಲು ಆಗದ್ದು. ಬಡತನ ಮತ್ತು ಅಸಮಾನತೆಗಳ ನಿವಾರಣೆಗೆ, ಸಮಾಜದ ಅಭಿವೃದ್ಧಿಗೆ ಇರುವ ಏಕಮಾತ್ರ ಪರಿಹಾರೋಪಾಯವಿದು. –ಇಂತಹ ಒಪ್ಪಿಗೆಯನ್ನು ಅತ್ಯಾಧುನಿಕ ತಂತ್ರಜ್ಞಾನದ ಮೂಲಕ ಜನಸಮುದಾಯಕ್ಕೆ ಬಿಂಬಿಸಿದ್ದು ಜಾಗತೀಕರಣ.

ಜಾಗತೀಕರಣ ಎನ್ನುವುದು ನಾಗರಿಕ ಸಮಾಜಕ್ಕೆ ಅಳವಡಿಕೆಯಾದ ಪ್ರತ್ಯೇಕ ಅನುಕೂಲಿತ ಅವಕಾಶವೇನಲ್ಲ. ಇದೊಂದು ವ್ಯವಸ್ಥೆ ಮಾತ್ರವಲ್ಲ ಇರುವ ವ್ಯವಸ್ಥೆಯನ್ನು ಮರುರೂಪಿಸುವ ವ್ಯವಸ್ಥೆ. ಆರ್ಥಿಕತೆಯನ್ನು ಕೇಂದ್ರವಾಗಿಟ್ಟುಕೊಂಡು ಸಮಾಜದ ಉಳಿದೆಲ್ಲ ಕ್ಷೇತ್ರಗಳನ್ನು ತನ್ನ ಹಿತಾಸಕ್ತಿಗಾಗಿ ಮರುರಚಿಸಿಕೊಳ್ಳುವ ಸಾಮರ್ಥ್ಯವನ್ನು ಹೊಂದಿದ್ದು. ಜಗತ್ತಿನ ಶ್ರೀಮಂತ ರಾಷ್ಟ್ರಗಳ ಆರ್ಥಿಕ ಉತ್ಪನ್ನವನ್ನು, ಸಾಂಸ್ಕೃತಿಕ ಚಹರೆಯನ್ನು ಉಳಿದೆಲ್ಲ ರಾಷ್ಟ್ರಗಳ ಮೇಲೆ ಬಿತ್ತಿ ಅವುಗಳನ್ನು ತನ್ನ ಮಾರುಕಟ್ಟೆ ಪ್ರದೇಶವಾಗಿ ಬದಲಿಸಿಕೊಳ್ಳುವಂಥದ್ದು. ಹಾಗಾಗಿ ಈ ಆರ್ಥಿಕ ಸಿದ್ಧಾಂತವು, ರಾಷ್ಟ್ರಗಳು ಪರಂಪರಾಗತವಾಗಿ ರೂಪಿಸಿಕೊಂಡು ಬಂದ ವೈವಿಧ್ಯಮಯ ಜೀವನ ವಿಧಾನವನ್ನು, ಪ್ರಾದೇಶಿಕವೂ ಭೌಗೋಳಿಕವೂ ಆದ ಪರಿಸರ ಮತ್ತು ಜನರ ಅಭಿರುಚಿಯನ್ನು ಜೀವನ ವಿನ್ಯಾಸವನ್ನು, ಜನ ಬದುಕಿನ ವಿವೇಕವನ್ನು ಹಲ್ಲೆಗೀಡು ಮಾಡುತ್ತದೆ. ಎಲ್ಲವನ್ನೂ ತನ್ನ ಬುಲ್ಡೋಜರ್ ಸಿದ್ಧಾಂತದಿಂದ ಏಕರೂಪಗೊಳಿಸುತ್ತದೆ. ಶ್ರೀಮಂತ ರಾಷ್ಟ್ರಗಳ ಹಿತಾಸಕ್ತವಾದ ಬಹುರಾಷ್ಟ್ರೀಯ ಕಂಪನಿಯು ಕೈಗಾರಿಕಾ ವಲಯಕ್ಕನುಗುಣವಾದ ಭಾಷೆಯನ್ನು ಬಳಸುತ್ತದೆ. ಆದರೆ ಅದರ ತೀರ್ಮಾನಗಳು ಪ್ರಜಾಪ್ರಭುತ್ವದ ಮೌಲ್ಯಗಳಿಗೆ ವಿರುದ್ಧವಾದದ್ದು. ಇದು ದೇಶ ದೇಶಗಳ ಸರ್ಕಾರವನ್ನೇ ಅನುಪಸ್ಥಿತಗೊಳಿಸಿ, ಜಗತ್ತಿನ ಆಡಳಿತದ ಚುಕ್ಕಾಣಿಯನ್ನೇ ತಾನು ಹಿಡಿತಕ್ಕೆ ತೆಗೆದುಕೊಳ್ಳುವ ಸಮಾಜ ವಿರೋಧಿ ನಿಲುವಿನದ್ದು. ಇದು ಅತ್ಯಂತ ನಯವಾಗಿ ಮಾನವ ಹಕ್ಕು, ಪರಿಸರ ರಕ್ಷಣೆ, ನಾಗರಿಕ ಹಕ್ಕು, ಆರೋಗ್ಯ ರಕ್ಷಣೆ ಮೊದಲಾದ ಸಕಲೆಂಟು ಆದರ್ಶಗಳ ಪರವಾಗಿರುವಂತೆ ತೋರಿಸಿಕೊಳ್ಳುತ್ತದೆ. ವಾಸ್ತವವಾಗಿ ಬಂಡವಾಳವಾದದ ಪರವಾಗಿ ಮಾತ್ರ ಕಾರ್ಯತತ್ಪರವಾಗುತ್ತದೆ. ಜಾಗತೀಕರಣದ ಸೈದ್ಧಾಂತಿಕತೆಯು ಅನ್ವಯುವಾಗುವ ಮೊದಲು ಅಮೇರಿಕಾ ತನ್ನ ವ್ಯಾಪಾರ ವಹಿವಾಟು ದೇಶಗಳನ್ನು ಮಣಿಸಲು ಶಾಂತಿ ಕಾರ್ಯಾಚರಣೆಯ ಹೆಸರಿನಲ್ಲಿ ಯುದ್ಧವನ್ನು ನಡೆಸುತ್ತಿತ್ತು. ಇದರಿಂದ

ಗೆಲುವನ್ನು ಪಡೆದರೂ ಕನಿಷ್ಠ ಪ್ರಮಾಣದ ಮಾನವ ಸಂಪನ್ಮೂಲ ನಾಶ, ಆರ್ಥಿಕ ಶಕ್ತಿಯ ನಾಶವನ್ನು ಹೊಂದಬೇಕಿತ್ತು. ಆದರೆ WTO ಮೂಲಕ, ಯುದ್ಧವಿಲ್ಲದ ಗೆಲುವನ್ನು ಪಡೆಯುವ ಕಾರ್ಯಾಚರಣೆಯನ್ನು ರೂಪಿಸಿಕೊಂಡಿತು. ಜಗತ್ತಿನ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಯತೇಚ್ಛವಾಗಿರುವ ಸಂಪನ್ಮೂಲಗಳನ್ನು ಬಳಸಿಕೊಂಡು, ಅವುಗಳನ್ನು ತನ್ನ ಜಹಗೀರುಗಳನ್ನಾಗಿಸಿಕೊಳ್ಳುವುದು ಮತ್ತು ತನ್ನ ಯಾಜಮಾನ್ಯವನ್ನು ಪರಿಪಾಲಿಸುವ ಗುಲಾಮ ಪಡೆಯಾಗಿ ಅಲ್ಲಿಯ ಪ್ರಜೆಗಳನ್ನು ಬದಲಿಸುವುದು ಅದರ ಆದರ್ಶವಾಗಿದೆ.

ಜಾಗತೀಕರಣದ ಪರಿಣಾಮವನ್ನು ಈಗಾಗಲೇ ಬಡರಾಷ್ಟ್ರಗಳು ಮತ್ತು ಬಡರಾಷ್ಟ್ರಗಳ ಪ್ರಜೆಗಳು ದಿಗ್ಭ್ರಾಂತ ಸ್ಥಿತಿಯಲ್ಲಿ ಅನುಭವಿಸುವಂತಾಗಿದೆ. ಜಗತ್ತಿನ ಕಾಯ್ದೆ ಕಾನೂನುಗಳೇ ಕಂಪನಿಗಳ ಹಿತಾಸಕ್ತಿಯ ಪರವಾದವು. ಇದರಿಂದ ದುಡಿಯುವ ವರ್ಗದ ಹಾತಾಸಕ್ತಿ ನಾಶವಾಯಿತು. ದುಡಿಯುವ ವರ್ಗವು ದುಡಿಮೆಯ ಭದ್ರತೆಯನ್ನು ಕಳೆದುಕೊಂಡು ದಿನಗೂಲಿ ವರ್ಗವಾಗಿ ಮಾರ್ಪಾಟಾಗತೊಡಗಿತು. ದೈಹಿಕ ಶ್ರಮ, ಬೌದ್ಧಿಕ ಶ್ರಮ ಎಂಬ ಭೇದವಿಲ್ಲದೆ ಈ ಅಸಹಾಯಕ ಸ್ಥಿತಿ ಉಲ್ಬಣಗೊಳ್ಳತೊಡಗಿತು. ಬಹುರಾಷ್ಟ್ರೀಯ ಕಂಪನಿಗಳು ಬೃಹತ್ ವ್ಯಾಪಾರೋದ್ಯಮವನ್ನು ನಡೆಸಲು ತೊಡಗಿದ್ದರಿಂದ, ಅಪಾರ ಪ್ರಾಕೃತಿಕ ಸಂಪನ್ಮೂಲಗಳಿದ್ದ ಭೂಪ್ರದೇಶಗಳನ್ನು ಅವೈಜ್ಞಾನಿಕವಾಗಿ ಬಳಸತೊಡಗಿದ್ದರಿಂದ ಪರಿಸರ ನಾಶ, ಪರಿಸರ ಅಸಮತೋಲನ ಮತ್ತು ಪ್ರಾಕೃತಿಕ ವಿಕೋಪಗಳಿಂದ ಗಣನೀಯ ಹಾನಿ ಸಂಭವಿಸಿ, ಬಡ ಜನಸಮುದಾಯಗಳು ಅಕ್ಷರಶಃ ಅನಾಥರಾಗುವಂತಾಯಿತು. ಜಗತ್ತಿನ ಅಪರಿಮಿತ ಜೀವರಾಶಿಗಳ ನಾಶವಾಯಿತು. ನೆಲ, ಜಲ, ಗಾಳಿ, ಕಾಡುಗಳೆಲ್ಲ ಮಲಿನವಾದದ್ದರ ಪರಿಣಾಮವಾಗಿ ಭೂಮಿ ವಾಸಕ್ಕೆ ಅಯೋಗ್ಯವಾಗುವ ಹಂತಕ್ಕೆ ಕುಸಿಯತೊಡಗಿತು. ವಿಪರೀತವೂ ವಿಚಿತ್ರವೂ ಆದ ಸಾಂಕ್ರಾಮಿಕ ರೋಗಗಳು ಜೀವಚೈತನ್ಯವನ್ನೇ ಕಬಳಿಸತೊಡಗಿತು. ಸರ್ಕಾರಗಳು ಬಹುರಾಷ್ಟ್ರೀಯ ಕಂಪನಿಗಳ ಅವಶ್ಯಕತೆಯನ್ನು ಪೂರೈಸುವ ಭರಾಟೆಯಲ್ಲಿ, ತಮ್ಮ ಆದ್ಯತೆಗಳನ್ನೇ ಬದಲಿಸಿಕೊಂಡಿದ್ದರಿಂದ ಸಂಭವಿಸಿದ ಆಘಾತಕಾರಿ ಸಂಗತಿಗಳಿಗೆ ಕಳೆದ ಕಾಲು ಶತಮಾನದ ಭಾರತವೇ ಸಾಕ್ಷಿಯಾಗಿದೆ. WTO ಜಗತ್ತಿನ ತೃತೀಯ ರಾಷ್ಟ್ರಗಳ ಮೇಲೆ ತಂದಿರುವ ಮುಖ್ಯ ಒತ್ತಡವೆಂದರೆ, ಸರ್ಕಾರಗಳು ಕೃಷಿರಂಗಕ್ಕೆ ನೀಡುತ್ತಿರುವ ಸಬ್ಸಿಡಿಗಳನ್ನು ನಿಲ್ಲಿಸಬೇಕು. ಸಮಾಜ ಕಲ್ಯಾಣ ಮತ್ತು ಸಾರ್ವಜನಿಕ ಕ್ಷೇತ್ರಗಳನ್ನು ಕ್ರಮೇಣ ನಿರ್ಲಕ್ಷಿಸಬೇಕು. ಆದರೆ ಇದೇ ನಿಯಮವನ್ನು ಅಭಿವೃದ್ಧಿ ಹೊಂದಿದ ರಾಷ್ಟ್ರಗಳು ತಮ್ಮ ದೇಶಗಳಿಗೆ

ಅನ್ವಯಿಸಿಕೊಳ್ಳುವುದಿಲ್ಲ. ಅಮೇರಿಕಾ, ಯುರೋಪ್, ಜಪಾನ್ ಸರಕಾರಗಳು ತಮ್ಮ ರೈತರಿಗೆ ಕೊಡುವ ಸಬ್ಸಿಡಿಯ ಮೊತ್ತ ಆಫ್ರಿಕಾದ ಎಲ್ಲ ದೇಶಗಳ ಒಟ್ಟೂ ರಾಷ್ಟ್ರೀಯ ಉತ್ಪನ್ನದ ಮೊತ್ತಕ್ಕೆ ಸಮ – ಎಂಬ ಅಂಕಿ ಅಂಶವನ್ನು (Jullian Barge – Guardian Weekly ಪತ್ರಿಕೆ) ನಂಬುವುದೂ ಅಸಾಧ್ಯವಾದ ಸ್ಥಿತಿಯಲ್ಲಿ ಭಾರತೀಯರಿದ್ದಾರೆ. ಆದರೆ ಭಾರತದಂತಹ ದೇಶಗಳಲ್ಲಿ ರೈತರು, ಕಾರ್ಮಿಕರು, ದಲಿತರು, ವಿದ್ಯಾರ್ಥಿಗಳು, ನಿರುದ್ಯೋಗಿಗಳು ಕಟ್ಟಕಡೆಯ ಪರಿಹಾರವೆಂಬಂತೆ, ಆಕ್ರೋಶಭರಿತರಾಗಿ ಆತ್ಮಹತ್ಯೆಮಾಡಿಕೊಳ್ಳುತ್ತಿದ್ದಾರೆ. ಆತ್ಮಹತ್ಯೆಯ ಸಂಖ್ಯೆ ಏರುತ್ತಲೇ ಇದೆ. ಇದರ ನಿಜವನ್ನು ಮರೆಯಮಾಚುವ ಅನಿವಾರ್ಯತೆಯಲ್ಲಿ; ಜನಸಮುದಾಯವನ್ನು ಖಿನ್ನತೆಯ ರೋಗದಿಂದ ಪರಿಹಾರಗೊಳಿಸುವ 'ಅಮೇರಿಕಾ ಪ್ರಣೀತ' ವಿಧಾನಗಳ ಜಾಹೀರಾತು ಮತ್ತು ಪ್ರಚಾರ ಹೆಚ್ಚುತ್ತಿದೆ. ಯಾಕೆಂದರೆ "ಜಾಗತೀಕರಣ ಎಂದರೆ ಅಮೇರಿಕೀಕರಣ. ಅಮೇರಿಕವನ್ನು ಹೊರತುಪಡಿಸಿ". (ರಾಜೇಂದ್ರ ಚೆನ್ನಿ– ಜಾಗತೀಕರಣ ನಿಜವಾಗಿ ಆಗುತ್ತಿದೆಯೇ?) ವಿಶ್ವಬ್ಯಾಂಕ್‌ನ ಮೂಲಭೂತ ಕರ್ತವ್ಯವೆಂದು ಘೋಷಣೆಯಾಗಿದ್ದು– ಆರ್ಥಿಕ ನೆರವಿನ ಮೂಲಕ ಜಾಗತಿಕ ಜೀವನ ಮಟ್ಟವನ್ನು ಏರಿಸುವುದು. ಆದರೆ ಈ ಸಂಸ್ಥೆ ಅಮೇರಿಕದ ಕೈಗೊಂಬೆಯಾಗಿ ವರ್ತಿಸುತ್ತ ಬಂದಿತು. ಇದು ಜಗತ್ತಿನ ದುರಂತ ವಾಸ್ತವ. ಕನ್ನಡ ಮನಸ್ಸು ಅಮೇರಿಕೆಯ ಈ ಅತಿಕ್ರಮಿತ ಅನ್ಯಾಯವನ್ನು ತೀಕ್ಷ್ಣವಾಗಿ ವಿರೋಧಿಸಿದೆ. ಶಿವಪ್ರಕಾಶರ 'ಸ್ವಾತಂತ್ರ್ಯ ಶಿಲೆಗೆ' ಕವಿತೆಯ ಸಾಲುಗಳಿವು–

> ಅಮೇರಿಕಾದಲ್ಲಿ ಎಲ್ಲೆಲ್ಲೂ ಬೋರ್ಡು
> ಸಿಗರೇಟು ಸೇದುವುದು ದಂಡನಾರ್ಹ ಕಾನೂನು ರೀತ್ಯಾ
>
> ------------------
>
> ಜಾರ್ಜಬುಷ್‌ನ ಆರಾಧ್ಯ ದೇವಿ
> ನೀನು ಕಟ್ಟುತ್ತಿರುವ ಸರಕುಗಳ ಸ್ವರ್ಗದಲ್ಲಿ
> ಸಿಗರೇಟು ಸೇದುವಿಕೆ
> ತೀರಾ ಕಡಿಮೆ ಪಾಪ.

ಜಾಗತೀಕರಣದ ಪರಿಣಾಮವನ್ನು ಇಡಿಯಾಗಿ ಚರ್ಚಿಸುವುದು ಈ ಪ್ರಬಂಧದ ಅಗತ್ಯವಲ್ಲ. ಆದರೆ, ಜಾಗತೀಕರಣದ ಸ್ವರೂಪವನ್ನು ಅರಿಯಬೇಕೆಂದರೆ ಅದು ಉಂಟುಮಾಡಿದ ಅನಾಹುತಕಾರಿ ಪರಿಣಾಮವನ್ನು ಹಾಗೂ ಭಾರತದಂತಹ ದೇಶದ

ಜನಶಕ್ತಿ ಅದನ್ನು ಎದುರಿಸುತ್ತ, ತನ್ನ ಅಸ್ಥಿತ್ವವನ್ನು ಉಳಿಸಿಕೊಳ್ಳಲು ನಡೆಸುತ್ತಿರುವ ಸಂಘರ್ಷದ ಕಥನವನ್ನು ಉಪೇಕ್ಷಿಸುವುದು ಸಾಧ್ಯವಿಲ್ಲ. ಭಾರತದ ರಾಷ್ಟ್ರೀಯ ಅಪರಾಧ ದಾಖಲಾತಿ ಕೇಂದ್ರದ ಸಮೀಕ್ಷೆಯ ಪ್ರಕಾರ ೨೦೦೩ ರಿಂದ ೨೦೦೭ರ ವರೆಗೆ ದೇಶದಲ್ಲಿ ೧ ಲಕ್ಷ ೧೨ ಸಾವಿರ ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ೧೯೯೫ರಿಂದೀಚೆಗೆ ಒಟ್ಟು ೨೯೬,೪೩೮ ಭಾರತೀಯ ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಆದರೆ, ರೈತರ ಸಮಸ್ಯೆಗೆ ಶಾಶ್ವತವಾದ ಪರಿಹಾರವನ್ನು ಘೋಷಿಸುವ, ಸಮಸ್ಯೆಯ ಮೂಲವನ್ನು ಕಂಡುಕೊಳ್ಳುವ ಯಶಸ್ವೀ ಪ್ರಯತ್ನ ಸರ್ಕಾರಗಳಿಂದ ಆಗಿಲ್ಲ. ಕೃಷಿ ಪೂರಕವಾದ ಉಪ ಕಸಬುಗಳಿಗೆ ದೊರೆಯಬೇಕಾದಷ್ಟು ಉತ್ತೇಜನ ದೊರೆಯುತ್ತಿಲ್ಲ. ಕೃಷಿ ವಲಯದಿಂದ ಜನ ವಿಮುಖರಾಗುತ್ತಿದ್ದಾರೆ. ನಗರಗಳಲ್ಲಿ ಕೊಳಚೆ ಪ್ರದೇಶಗಳು ಬೆಳೆಯುತ್ತಿವೆ. ಹಣದುಬ್ಬರ ಮಿತಿಮೀರುತ್ತಿದೆ. ವಿಶ್ವದ ಬಿಲೇನಿಯರ್‌ಗಳಲ್ಲಿ ಭಾರತೀಯರ ಸೇರ್ಪಡೆಯ ಸಂಖ್ಯೆ ಹೆಚ್ಚುತ್ತಿದೆ ಮತ್ತು ಭಾರತದ ೮೦% ಜನರ ಆದಾಯ ಒಂದು ದಿನಕ್ಕೆ ಒಂದು ಡಾಲರಗಿಂತ ಕಡಿಮೆ ಎಂದು ಬ್ರಿಟನ್ನಿನ ಸಂಸ್ಥೆ ವರದಿ ಮಾಡಿದೆ. ೪೦% ರಷ್ಟು ಜನ ೧,೬೦೦ಕ್ಕಿಂತ ಕಡಿಮೆ ಕ್ಯಾಲೊರಿಯ ಆಹಾರ ಸೇವಿಸುತ್ತಿದ್ದಾರೆ– ಎಂದು ವಿಶ್ವಸಂಸ್ಥೆ ವರದಿ ಮಾಡಿದೆ. ಅಪೌಷ್ಠಿಕತೆಯಿಂದ ಬಳಲುವ ಮಕ್ಕಳ ಸಂಖ್ಯೆ, ಶಿಶುಮರಣ–ತಾಯ್ಮರಣಗಳ ಸಂಖ್ಯೆ ಹೆಚ್ಚುತ್ತಿದೆ. ಮನುಷ್ಯ ಜಾತಿಯನ್ನು ನಿತ್ರಾಣಗೊಳಿಸುವ, ಮಾರಣ ಹೋಮಮಾಡುವ ಭೀಕರ ಕಾಯಿಲೆಗಳು ಭಾರತದಲ್ಲಿ ಹೆಚ್ಚುತ್ತಿದೆ. ೧೫% ಕ್ಕಿಂತ ಹೆಚ್ಚು ಜನ ೪೦ ವರ್ಷಕ್ಕೆ ಮುನ್ನವೇ ಸಾವನ್ನಪ್ಪುವ ದೇಶವಿದು. ಜನಾರೋಗ್ಯದ ಮಾನದಂಡದಲ್ಲಿ ದೇಶ ಜಗತ್ತಿನಲ್ಲಿ ೧೧೫ನೇ ಸ್ಥಾನದಲ್ಲಿದೆ. ಅಂಧತ್ವ ಮತ್ತು ಅಂಗವೈಕಲ್ಯ ಯಾಕೆ ಹೆಚ್ಚುತ್ತಿದೆ ಎಂಬ ಪ್ರಶ್ನೆಯೂ ಎದುರಾಗದ ಸ್ಥಿತಿಯಲ್ಲಿ ಭಾರತದ ಸಭ್ಯತೆಯಿದೆ. ಈ ಅಂಕಿ ಸಂಖ್ಯೆಯನ್ನು ಎಷ್ಟು ಬೇಕಾದರೂ ಉದಾಹರಿಸಬಹುದು. ಆದರೆ, ಯಾವ ಕ್ಷೇತ್ರವನ್ನು ಸೀಳುನೋಟಕ್ಕೆ ಒಳಪಡಿಸಿದಾಗಲೂ ಅಲ್ಲಿ ಅಸಮಾನ ಭಾರತದ ದುರಂತ ವಾಸ್ತವಗಳೇ ಕಣ್ಣಿಗೆ ರಾಚುವುದು.

ವಾಸ್ತವ ಹೀಗಿರುವಾಗ, ಭಾರತದ ಬಹುಸಂಖ್ಯಾತ ಜನಸಾಮಾನ್ಯರು ಈ ಅರಿವೇ ಇಲ್ಲದಂತೆ ನಿರಂಬಳವಾಗಿರುವ ಕಾರಣವಾದರೂ ಏನು? ಸಂಕ್ಷೇಪಿಸಿ ಉಲ್ಲೇಖಿಸುವುದಾದರೆ –ಭಾರತವು ಜಾಗತೀಕರಣದ ಪರಿಣಾಮದಿಂದ ಭ್ರಮಾಧೀನ ಸ್ಥಿತಿಗೆ ತಳ್ಳಲ್ಪಟ್ಟಿದೆ. ಎರಡು ವಿಭಿನ್ನ ವೈರುಧ್ಯ ವಾಸ್ತವದಲ್ಲಿ ಸಿಲುಕಿಕೊಂಡಿದೆ. ಉದಾಹರಣೆಗೆ, ೨೦೧೮ರ ಅಂಕಿ ಅಂಶವು, "ಭಾರತವು ಸೈನ್ಯ ಶಕ್ತಿಯಲ್ಲಿ ಪ್ರಪಂಚದ ೪ನೇ ದೇಶವಾಗಿದೆ" ಎನ್ನುತ್ತದೆ. ಈ ದಾಖಲೆಯನ್ನು ಮಾಧ್ಯಮಗಳಲ್ಲಿ ಅತಿರಂಜಿತವಾಗಿ ಮರುಪ್ರಸಾರ ಮಾಡಲಾಗುತ್ತದೆ. ವ್ಯಕ್ತಿಗತ

ಸೋಲು–ಅತಂತ್ರ ಸ್ಥಿತಿಯಲ್ಲಿರುವ ಜನಸಾಮಾನ್ಯರು ಇದರಿಂದ ತೃಪ್ತರಾಗುತ್ತಾರೆ. ಅಭಿಮಾನ ಪಡುತ್ತಾರೆ. ಇದೇ ಅಂಕಿ ಅಂಶವೇ, ಜಗತ್ತಿನ ಮಾನವ ಸಂಪನ್ಮೂಲದ ನೆಮ್ಮದಿಯ ಸೂಚ್ಯಂಕದಲ್ಲಿ ಭಾರತ ೧೬೦ನೇ ಸ್ಥಾನಕ್ಕೆ ಕುಸಿದಿರುವುದನ್ನು ದಾಖಲಿಸುತ್ತದೆ. ಇದನ್ನು ಮಾಧ್ಯಮಗಳು ಜನ ಸಾಮಾನ್ಯರಿಗೆ ತಲುಪಿಸುವುದಿಲ್ಲ. ಇಂತಹ ಅಧಃಪತನದ ಕಾರಣ–ಪರಿಣಾಮಗಳ ಭೀಕರತೆಯನ್ನು ಚರ್ಚಿಸುವುದಿಲ್ಲ. ಬಹುರಾಷ್ಟ್ರೀಯ ಕಂಪನಿಗಳ ಬೃಹತ್ ಉದ್ದಿಮೆಗಳು ಬಡಜನರ ಕೌಶಲ್ಯ–ಶ್ರಮವನ್ನು ಆಧರಿಸಿದ ಸಣ್ಣ ಉದ್ದಿಮೆಗಳನ್ನು ನೆಲಸಮಗೊಳಿಸಿದ್ದನ್ನು ಪ್ರಶ್ನಿಸುವುದಿಲ್ಲ. ನಿರುದ್ಯೋಗ, ಉದ್ಯೋಗ ಅಭದ್ರತೆ, ಅಸಂಘಟಿತ ಕಾರ್ಮಿಕ ವಲಯಗಳು ಉಂಟುಮಾಡಿದ, ಮಾಡುತ್ತಿರುವ ಸಾಮಾಜಿಕ ಉತ್ಪಾತವನ್ನು ಅಳೆಯುವ ಮಾನದಂಡಗಳೇ ನಮ್ಮಲ್ಲಿಲ್ಲ. "೧೯೯೯ರಲ್ಲಿ ವಿಶ್ವಸಂಸ್ಥೆಯ ಅಂತರಾಷ್ಟ್ರೀಯ ಕಾರ್ಮಿಕ ಸಂಘಟನೆಯ ಸಮಾವೇಶದಲ್ಲಿ ಮಾತನಾಡಿದ ಫ್ರಾನ್ಸ ಅಧ್ಯಕ್ಷ ಜಾಕ್ವೆಸ್ ಚಿರಾಕ್, ಜಾಗತೀಕರಣದ ಪ್ರತಿಪಾದಕರು 'ಜನತೆಯ ಸೇವೆಗಾಗಿ ಆರ್ಥಿಕ ಚಟುವಟಿಕೆ' ಎಂದ ಮಾತು ಹುಸಿಯಾಗಿದೆ ಎಂದು ಜಗತ್ತಿನ ಗಮನ ಸೆಳೆಯುವ ಪ್ರಯತ್ನ ಮಾಡಿದ್ದರು."[೧] ಮಾಧ್ಯಮಗಳ ಮೇಲೆ ಸ್ವಾಯತ್ತ ಅಧಿಕಾರ ಹೊಂದಿದ ಬಂಡವಾಳೋದ್ಯಮ ಇಂತಹ ವಿಚಾರಗಳಿಗೆ ಪ್ರಸರಣ ಸಾಧ್ಯತೆಯನ್ನು ಕಡಿಮೆ ಮಾಡುತ್ತದೆ. ಮತ್ತೆ ಇನ್ನೊಂದು ದಶಕ ಕಳೆದಿದೆ. ಈ ದುರಂತದ ಪರಿಣಾಮ ತೀವ್ರಗೊಳ್ಳುತ್ತಲೇ ಇದೆ. ಬಡದೇಶಗಳ ಸರ್ಕಾರಗಳು ಜನರನ್ನು ದಿಕ್ಕುತಪ್ಪಿಸಲು ಭ್ರಮೆಯನ್ನು ಬಿತ್ತರಿಸುತ್ತಲೇ ಇವೆ. ಸುಳ್ಳನ್ನು ಆಕರ್ಷಕವಾಗಿ ಹೇಳುವುದೇ ಮಾತಿನ ಮೌಲ್ಯವಾಗಿರುವ ಸಂದರ್ಭದಲ್ಲಿ ಮಾಧ್ಯಮಗಳೂ, ರಾಜಕಾರಣಿಗಳೂ, ಅಧಿಕಾರಶಾಹಿಗಳೂ ಆ ವಿಷವನ್ನೇ ಹರಡುತ್ತಿರುವಾಗ, ಜನಸಾಮಾನ್ಯರ ಸ್ಥಿತಿಯನ್ನು ವಿವರಿಸುವುದೂ ಸಾಧ್ಯವಾಗುತ್ತಿಲ್ಲ.

ಭಾರತೀಯ ರೈತರನ್ನು ಬಟಾಟೆ ಮೂಟೆಗಳು –ಎಂದು ವಿಷಾದ ವ್ಯಂಗ್ಯದಿಂದ ಕರೆದ ಮಾರ್ಕ್ಸ್; ಇದೇ ಭಾರತೀಯ ರೈತರು ಸ್ವಂತಿಕೆಯ ಪ್ರತಿಫಲವನ್ನು ಮೀರಿ ದುಡಿಯಬಲ್ಲವರು. ಇದೇ ಭಾರತದ ಸಂಗೋಪನಾ ಶಕ್ತಿ –ಎಂದು ಹೇಳುತ್ತಾನೆ. ಮಾರ್ಕ್ಸ್ ಬೇರೊಂದು ಸಾಮಾಜಿಕ ವಿಶ್ಲೇಷಣೆಯಲ್ಲಿ ಈ ಮಾತು ಹೇಳಿದ್ದನಾದರೂ, ಜಾಗತೀಕರಣದ ಹೊಡೆತದ ತಾಳಿಕೆಯ ಶಕ್ತಿಯಾಗಿಯೂ ಇದನ್ನು ವಿವರಿಸಿಕೊಳ್ಳಬಹುದಾಗಿದೆ. ಭಾರತದ ಬಡವರು ಭೀಕರ ಪ್ರಾಕೃತಿಕ ವಿಕೋಪಗಳಲ್ಲಿಯೂ, ನೋಟು ಅಮಾನ್ಯೀಕರಣದಂತಹ ಆರ್ಥಿಕ ಹೊಡೆತವನ್ನು ಸಹಿಸಿಯೂ, ಬದುಕಿನ ಶಕ್ತಿಯನ್ನು ಪ್ರಕಟಿಸುತ್ತಲೇ ಇದ್ದಾರೆ. ಈ

ಶಕ್ತಿಯ ಹಿಂದಿರುವ ಬದ್ಧತೆ ಏನು? ಭಾರತದ ಸಾಮಾಜಿಕ ರಚನೆಯಲ್ಲಿ ನಿರಂತರವಾಗಿ ತುಳಿತಕ್ಕೆ ಒಳಗಾಗುತ್ತಲೇ ಬರುವ ಬಡವರು, ಸಮಾಜದ ಅಂಚಿನ ಸಮುದಾಯಗಳು ತಮ್ಮನ್ನು ತಾವು ತಡೆಗೋಡೆಯಾಗಿ ಒಡ್ಡಿಕೊಳ್ಳುತ್ತಲೇ, ಈ ಬದುಕನ್ನು ಕಾಪಾಡಿದ ಕಥನವನ್ನು ಸಾಹಿತ್ಯ ಮತ್ತು ಕಲೆಯ ಜಗತ್ತು ಅತ್ಯಂತ ಮುತುವರ್ಜಿಯಿಂದ ದಾಖಲಿಸಿವೆ. ಇಡೀ ಜಗತ್ತು ಆರ್ಥಿಕ ಕುಸಿತವನ್ನು ಅನುಭವಿಸಿದರೂ, ಭಾರತವನ್ನು ಸಂಭಾಳಿಸಿದ ಆರ್ಥಿಕ ನೀತಿ ಯಾವುದು? ನೋಟಬ್ಯಾನ್‌ನಿಂದ ತತ್ತರಿಸಿದ, ಕ್ಯಾಶಲೆಸ್ ಎಕಾನಮಿಯ ಕಾರಣಕ್ಕಾಗಿ ಈ ಜಗತ್ತಿಗೇ ಅಪರಿಚಿತರಾಗಿ ಉಳಿದ ಅಂಚಿನ ಸಮುದಾಯಗಳು ದಾಖಲಿಸಿದ ತಾಳಿಕೆಯ ಶಕ್ತಿಯನ್ನು ಯಾವ ಪ್ಯಾರಾಮೀಟರಿನಿಂದ ಅಳೆಯುವುದು? ಎಂಬ ಸಂಭ್ರಮವನ್ನು ಸೃಜನಶೀಲತೆ ಕಾಣಿಸಿದೆ.

ಪಶ್ಚಿಮದ ಕಡೆಯಿಂದ ಪಂಚರಂಗಿಯ ಗಿಡುಗ
ರವರವ ರವ್ವನೆ ಹಾರಿಬಂತು

------------------

ಬಣ್ಣದ ಬೆರಗಿಗೆ ಕಣ್ಣಿನ ಬೆಡಗಿಗೆ
ಪೂರ್ವದ ಜೀವಜಾತಗಳೆಲ್ಲ ಮಾತು ಕಳೆದವು

------------------

ಯಾರಲಾ ಯಾರಲಾ
ನೆಲದ ವಾರಸು ಯಾರಲಾ?
ಹಳೆ ಬೇಲಿಯ ಬಳ್ಳಿಸಾಲ ಬುಡದಲ್ಲಿ
ತೇವಾಂಶದ ತವ ತವ ತವರಿನಲ್ಲಿ
ತೆವ ತೆವಳುತ ಪಿಸುಗುಟ್ಟಿದೆ ಎರೆಹುಳ
ಯಕ ಯಕ ಯಾಕಲಾ! ಯಾಕಲಾ?

ಗಿಡುಗ ಮತ್ತು ಎರೆಹುಳುವನ್ನು ಮುಖಾಮುಖಿಯಾಗಿಸುವ ಎಸ್.ಜಿ.ಸಿದ್ಧರಾಮಯ್ಯನವರ ಈ ಕವಿತೆ ಜಾಗತೀಕರಣದ ಚಿತ್ರಣವಾಗಿದೆ. ಪಶ್ಚಿಮದ ಕಡೆಯಿಂದ ಆತ್ಯಾಕರ್ಷಕವಾಗಿಯೂ ಅಪಾರ ಶಕ್ತಿವಂತವಾಗಿಯೂ ಹಾರಿಬರುವ ಗಿಡುಗ, ಈ ನೆಲವ ಜೀವಜಾತಗಳನ್ನೆಲ್ಲ ಮುಗಿಸುವ ಹುನ್ನಾರದ್ದು. 'ಈ ನೆಲದ ವಾರಸು ಯಾರಲಾ?' ಎಂಬ ಧಿಮಾಕಿನ, ಅತಿಕ್ರಮದ ಪ್ರಶ್ನೆಗೆ; ಬೇಲಿ ಸಾಲಿನ ಹುದುಲಿನಲ್ಲಿ

ತೆವಳುತ್ತಿರುವ ಎರೆಹುಳ ಉತ್ತರಿಸುವುದಿಲ್ಲ. ಮರುಪ್ರಶ್ನೆ ಹಾಕುತ್ತದೆ. ಎರೆಹುಳ ಈ ನೆಲದ ವಾರಸಿನ ಪ್ರತೀಕ. ಮಣ್ಣಿಗಂಟಿದ ಸಂವೇದನೆಯ ಪ್ರತೀಕ.

ಮಾರುಕಟ್ಟೆ ನೀತಿಯು ಜನರ ಬದುಕನ್ನು ಮುರಿದು ಮುಕ್ಕುವಾಗ, ಕನ್ನಡದ ಮುಖ್ಯ ಕವಿ ಎಚ್.ಎಸ್.ಶಿವಪ್ರಕಾಶರ ಕಾವ್ಯ ಈ ಮಾರುಕಟ್ಟೆಯ ಮೌಲ್ಯವನ್ನು ವಿರೋಧಿಸಿ ಮಾತನಾಡಿತು.

ಮಾರುಕಟ್ಟೆ ಕಂಡರೇ
ವಾಕರಿಕೆ ನನಗೆ
ನೆನಪಾಗುತ್ತಾರೆ
ಹರಾಜಿಗೆ ಬಂದ
ಹೆಂಗಸರು ಮಕ್ಕಳು (ಮಾರುಕಟ್ಟೆ)

ಮಕ್ಕಳ ಮಾರವರೆ ನನ ಮಗನೆ
ಹೆತ್ತೋರೆ ಮಕ್ಕಳ ತಿಂತಾರೆ ನನ ಮಗನೆ
ಸತ್ತೋರು ಇದ್ದೋರ ತಿಂತಾರೆ ನನಮಗನೆ
ಇದು ಹದ್ದು ಕಾಗೆ ಬಾಳು ನನಮಗನೆ
ಇದು ನಾಯಿ ನರಿ ಬಾಳು ನನಮಗನೆ (ಉರಿವ ಗುಗ್ಗಳ)

ಈ ಜಗದಗಲ
ಕೊಳ್ಳೆಕಾರರ ಶಾಪಿಂಗು ಮಾಲಲ್ಲಿ
ಯಾವ ಮಾಲನ್ನೂ ಕೊಳ್ಳಲಾಗದೆ
ಬಂದಿದ್ದೀನಿ ಬರಿಗೈಯಾಗಿ ನಾನು
ಶಾಪಗ್ರಸ್ಥ ಜಂಗಮಕುಲದ ಕೊನೆಯ ಭಿಕಾರಿಯಾಗಿ
ಭಿಕ್ಷೆ ಕೊಡು ನನಗೆ
ನಿನ್ನ ಸಾವು ತಿನ್ನದ ನೆಲದೊಂದು ಹಿಡಿ ಹಸಿ ಮಣ್ಣನ್ನು

(ನಾಗಾ ಅಕ್ಕ ತೆನ್ಸುಲಾ ಆವೋಗೆ)

ಜಾಗತೀಕರಣಕ್ಕೆ ಕನ್ನಡ ಸಂವೇದನೆ ಸ್ಪಂದಿಸಿದ ಅಪಾರ ಸಾಧ್ಯತೆಯನ್ನು ಗಮನಿಸಲು ಈ ನಿದರ್ಶನಗಳನ್ನು ನೋಡಬೇಕು. ಸಾಹಿತ್ಯ ಸಂವೇದನೆ ಈ ಅನರ್ಥಕಾರಿ ವಿದ್ಯಮಾನಗಳಿಗೆ ಮಿಡಿದಿದೆ. ಮನುಷ್ಯ ಸಂವೇದನೆಯು ತುತ್ತಾಗುತ್ತಿರುವ ಅಣುವಿಕಿರಣವೇನೋ ಎಂಬ ಗಾಭರಿಯನ್ನು ದಾಖಲಿಸಿದೆ.

### ೩.೬ ಕೋಮುವಾದ, ಮತೀಯವಾದ, ರಾಷ್ಟ್ರೀಯವಾದ:

ಬದುಕಲಾರೆನು ಹೀಗೆ
ಗಲಭೆಯಲಿ ಸೋರಿದ ನೆತ್ತರಿನ ಮೇಲೆ
ನೊಣ ಕೂತ ಹಾಗೆ

ಇದು ಕನ್ನಡದ ಯುವ ಕವಿ ರಮೇಶ ಅರೋಲಿಯವರ ಕವಿತೆಯ ಸಾಲು. ಕಳೆದ ಮೂರು ದಶಕಗಳು ಭಾರತದ ಬದುಕು ವಿಧ್ವಂಸಕಾರೀ ಸಾಮಾಜಿಕ ವಿಪ್ಲವಗಳಿಂದ ನಡುಗಿಹೋಯಿತು. ಹಿಂಸೆ ಆರ್ಭಟಿಸತೊಡಗಿತು. ರಾಷ್ಟ್ರಕವಿ ಜಿ.ಎಸ್.ಎಸ್. ತಮ್ಮ ಕೊನೆಗಾಲದ ಕವಿತೆ 'ಅಗ್ನಿಪರ್ವ'ದಲ್ಲಿ ಬರೆದರು– ಬಹುದಿನಗಳಿಂದ ಕಟ್ಟಿಕೊಂಡು ಬಂದ ಗೂಡು ಛಿದ್ರವಾಯಿತು– ಎಂದು. ಒಂದು ಸಂವೇದನಾಶೀಲ ಮನಸ್ಸಿಗೆ ಅಗ್ನಿಪರ್ವದ ಅಧ್ಯಾಯ ಆರಂಭವಾಗಿಬಿಟ್ಟಿದೆ. ತಿನ್ನುವ ಅನ್ನ, ಕುಡಿವ ನೀರು ಎಲ್ಲ ಕಡೆ ಆ ಅಗ್ನಿಯ ಕಿಡಿಗಳು ರಾಚಿ ನೆಮ್ಮದಿಕೆಡಿಸುತ್ತವೆ ಎನ್ನಿಸುವ ಭೀಕರತೆಯ ದಿನಮಾನಗಳು. ಈ ಹಲ್ಲೆಯನ್ನು ಹತ್ಯಾಕಾಂಡವನ್ನು ದೇಶದ ಜನಸಾಮಾನ್ಯರು ಹಾಗೆ ಭಾವಿಸಿಕೊಳ್ಳದೆ ಅದೊಂದು ಅನಿವಾರ್ಯವಾಗಿ ನಡೆಯುವ ಪ್ರಕ್ರಿಯೆ ಎಂದು ತಿಳಿದದ್ದು ದುರಂತ ವಾಸ್ತವವನ್ನು ಉಲ್ಬಣಿಸುವಂತೆ ಮಾಡಿತು. ಸಾಮಾಜಿಕ ಜೀವನದಲ್ಲಿ ದ್ವೇಷದ ವಿಷಗಾಳಿ ಹಬ್ಬಲು ಕಾರಣವಾದದ್ದು ಜಾಗತೀಕರಣದ ಪರಿಣಾಮವಾಗಿ ಕೋಮುವಾದ, ಮತೀಯವಾದಗಳು ಬೆಳೆಯತೊಡಗಿದ್ದರಿಂದ.

ಜಾಗತೀಕರಣದ ನಂತರದಲ್ಲಿ ಊಹಾತೀತವಾದ ರೀತಿಯಲ್ಲಿ ಬಂಡವಾಳದ ಹರಿವು ಉಂಟಾಯಿತು. ಬಂಡವಾಳಶಾಹಿಯ ವಿರುದ್ಧ ಜನಸಾಮಾನ್ಯರು ಪ್ರತಿರೋಧ ತೋರದ ಹಾಗೆ ಅವರನ್ನು ನಿಯಂತ್ರಣದಲ್ಲಿಡಲು, ಆಲೋಚನೆಯ ಹರಿವನ್ನು ದಿಕ್ಕುತಪ್ಪಿಸಲು ಕೋಮುವಾದವನ್ನು ಪ್ರಬಲಗೊಳಿಸಲಾಯಿತು. ಕೋಮುವಾದವು ಅಂತರಾರ್ಥದಲ್ಲಿ ಬಹುಸಂಖ್ಯಾತವಾದವಾಗಿದೆ. ಧರ್ಮದ ಕಾರಣಕ್ಕಾಗಿ, ಜನಾಂಗೀಯತೆಯನ್ನು ಮುಂದೊಡ್ಡಿ, ಜನರು ಸಮಸ್ಯೆಯ ನಿಜವಾದ ಕಾರಣಗಳತ್ತ ಗಮನ ಹರಿಸದ ಹಾಗೆ ಮತಾಂಧರನ್ನಾಗಿಸುವ

ಯೋಜನೆಯೇ ಕೋಮು ಧ್ರುವೀಕರಣ. ಇದು ಬಂಡವಾಳಶಾಹಿಗಳನ್ನು ಮತ್ತು ಬಂಡವಾಳೋದ್ಯಮದ ಒಂದು ಭಾಗವೇ ಆಗಿ ಮಾರ್ಪಾಟಾದ ರಾಜಕೀಯ ಬಂಡವಾಳಶಾಹಿಗಳಾದ ಪ್ರಭುತ್ವವನ್ನು ರಕ್ಷಿಸುವ ತಂತ್ರವಾಗಿದೆ. ಭಾರತದ ಸರ್ಕಾರಗಳು ಒಪ್ಪಿ ಜಾರಿಗೆ ತಂದ ಆರ್ಥಿಕ ನೀತಿಯು ಈ ದೇಶದ ಜನಸಾಮಾನ್ಯರನ್ನು ಬಲಿತೆಗೆದುಕೊಳ್ಳುತ್ತಿದೆ. ನ್ಯಾಷನಲ್ ಕ್ರೈಂ ರೆಕಾರ್ಡ್ ಬ್ಯೂರೋ ನಮ್ಮೆದುರಿಡುವ ಅಂಕಿಅಂಶಗಳು ದಿಗಿಲುಬೀಳಿಸುತ್ತಿವೆ. ೧೯೯೫ರ ನಂತರ ಈ ದೇಶದಲ್ಲಿ ೪ ಲಕ್ಷಕ್ಕೂ ಅಧಿಕ ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ. ರೈತರ ಆತ್ಮಹತ್ಯೆಯ ಸರಾಸರಿ ಪ್ರತಿ ಅರ್ಧಗಂಟೆಗೊಂದರಂತೆ ಇದೆ. ಇದರಲ್ಲಿ ೧೨% ಕುಟುಂಬಗಳಿಗೆ ಮಾತ್ರ ಪರಿಹಾರ ನೀಡಲಾಗಿದೆ. ರೈತರ ಸಾವನ್ನೂ ಹಗುರವಾಗಿ ಲೇವಡಿ ಮಾಡುವ ರಾಜಕೀಯ ಮುಖಂಡರುಗಳು, ಶ್ರೀಮಂತರೂ ಇದ್ದಾರೆ. ಆರ್ಥಿಕ ಅಸಹಜತೆಯನ್ನು ಪ್ರಶ್ನಿಸಲಾಗದಂತೆ ಜನರ ಎದುರು ಕಾಲ್ಪನಿಕ ವೈರತ್ವವನ್ನು ಬೆಳೆಸಲಾಗುತ್ತದೆ. “ನನಗೆ ಅನ್ನಿಸುವಂತೆ ಸಮಾಜೋಧಾರ್ಮಿಕ ಮೂಲಭೂತವಾದಿಗಳು ಮತ್ತು ಮಾರುಕಟ್ಟೆ ಆರ್ಥಿಕತೆಯ ಮೂಲಭೂತವಾದಿಗಳ ಮೈತ್ರಿಕೂಟ ಇಂದು ಇಂಡಿಯಾವನ್ನು ಆಳುತ್ತಿದೆ. ಆ ಎರಡು ಶಕ್ತಿಗಳು ಪರಸ್ಪರ ಹೊಂದಾಣಿಕೆಯಿಂದ ಸಾಗಬೇಕಾದ ಅನಿವಾರ್ಯತೆಯನ್ನು ಹೊಂದಿವೆ. ಇಲ್ಲಿ ಮಾರುಕಟ್ಟೆ ಮೂಲಭೂತವಾದಿಗಳು ಸಮಾಜೋಧಾರ್ಮಿಕ ಮೂಲಭೂತವಾದಿಗಳೂ ಆಗಿರುವುದನ್ನು ನಾವು ನೋಡುತ್ತೇವೆ. ಮಾರುಕಟ್ಟೆ ಮೂಲಭೂತವಾದಿಗಳು ಯಾವ ಧಾರ್ಮಿಕ ಮೂಲಭೂತವಾದಿಗಳಿಗಿಂತಲೂ ಕಡಿಮೆ ಇರುವುದಿಲ್ಲ. ಈ ಎರಡೂ ಶಕ್ತಿಗಳು ತಮ್ಮದೇ ಆದ ಪವಿತ್ರ ಗ್ರಂಥಗಳು, ಪುರಾಣಗಳು ದೈವವಾಣಿಗಳು ಮತ್ತು ಪಂಡಿತರನ್ನು ಹೊಂದಿವೆ...”[೨] ಎನ್ನುತ್ತಾರೆ. ಪಿ. ಸಾಯಿನಾಥ. ಈ ಮಾತುಗಳು ಭಾರತದಲ್ಲಿ ಜಾಗತೀಕರಣ ಮತ್ತು ಕೋಮುವಾದಗಳ ಅಪವಿತ್ರ ಮೈತ್ರಿಯ ಪರಿಣಾಮವಾಗಿ ಉಂಟಾಗುತ್ತಿರುವ ಸಂಕೀರ್ಣ ಭೀಕರತೆಯ ಚಿತ್ರಣವನ್ನು ಕಾಣಿಸುತ್ತಿವೆ. ಬಹುಧಾರ್ಮಿಕವೂ ಬಹು ಸಾಂಸ್ಕೃತಿಕವೂ ಆಗಿರುವ ಭಾರತದ ಮನಸ್ಥಿತಿಯನ್ನು ಧಾರ್ಮಿಕ ಏಕರೂಪೀ ಸಂಹಿತೆಯ ವೈಭವೀಕರಣಕ್ಕೆ ತೊಡಗಿಸುವುದೇ ರಾಜಕೀಯ ಅಧಿಕಾರವನ್ನು ಪಡೆಯುವ ಹುನ್ನಾರವಾಗಿರುತ್ತದೆ. ಇದರಿಂದ ಮತೀಯ ಸೌಹಾರ್ದತೆಯನ್ನು ಉದ್ದೇಶಪೂರ್ವಕವಾಗಿ ಕದಡಲಾಗುತ್ತದೆ. ಇದೊಂದು ಸರಳ ವಾಸ್ತವವಾಗಿದೆ. ಯಾಕೆಂದರೆ ಭಾರತೀಯ ಸಮಾಜವು ಶ್ರೇಣೀಕೃತ ಜಾತಿವ್ಯವಸ್ಥೆಯನ್ನು ಮತ್ತು ಜಮೀನ್ದಾರೀ ಬಂಡವಾಳಶಾಹಿಯನ್ನು ಒಪ್ಪಿಕೊಂಡು ಬಂದಿದ್ದು. ಯಾಜಮಾನ್ಯದ

ಹಿಂಸೆಯನ್ನು ಸಹಿಸಿಕೊಂಡು ಬಂದಿದ್ದು. ಈಗ ಆ ಅನುಶ್ರೇಣಿ ಮತ್ತು ಬಂಡವಾಳಶಾಹಿಯ ಗತಿಸ್ಥಿತಿಯಲ್ಲಿ ಏರುಪೇರು ಹಾಗೂ ವಿಸ್ತರಣೆಗಳಾಗಿವೆ. ಎಂಬ ನಿಲವನ್ನು ಬಿಂಬಿಸಲಾಗಿದೆ.

ಭಾರತದ ಸಂದರ್ಭದಲ್ಲಿ ಕೋಮುವಾದವು ದೇಶದ ಸ್ವಾತಂತ್ರ್ಯ ಚಳುವಳಿಯ ಭಾಗವಾಗಿಯೇ ಹುಟ್ಟಿತು. ಬ್ರಿಟೀಷ ವಸಾಹತಿನೊಂದಿಗೆ ಮುಸ್ಲಿಂಲೀಗ್ ಮಂಡಿಸಿದ್ದ ಬೇಡಿಕೆಗಳನ್ನು ವಿರೋಧಿಸಿ 1915ರಲ್ಲಿ ಉದಾರವಾದಿ ಕಾಂಗ್ರೆಸ್ಸಿಗರಾಗಿದ್ದ ಮದನಮೋಹನ ಮಾಳವಿಯ ಅವರು ಅಖಿಲ ಭಾರತ ಹಿಂದೂ ಮಹಾಸಭಾ – ಸ್ಥಾಪಿಸಿದರು. ಹಿಂದೂತ್ವ ರಾಜಕಾರಣವು ಆಗಲೇ ಪ್ರಾರಂಭವಾಗಿತ್ತು. ಆರ್ಯ ಸಮಾಜದ ನಾಯಕ ಪಂಡಿತ ಲೇಖರಾಮ್ ಅವರು ಮುಸ್ಲಿಮರು ಭಾರತಬಿಟ್ಟು ತೊಲಗಬೇಕು ಇಲ್ಲವೆ ಆರ್ಯ ಧರ್ಮಕ್ಕೆ ಮತಾಂತರಗೊಳ್ಳಬೇಕು ಎಂದರು. "ಹಿಂದೂ ಮೊದಲು ಹಿಂದೂ, ನಂತರ ಭಾರತೀಯ" ಎಂಬ ಅವರ ಹೇಳಿಕೆಯನ್ನು ಪ್ರಾತಿನಿಧಿಕವಾಗಿಟ್ಟುಕೊಂಡರೆ.... ಭಾರತವನ್ನು ಕೋಮುವಾದಿಗೊಳಿಸಿದ ಪರಂಪರೆಯು ಕಾಣುತ್ತದೆ. ಆದರೆ ಗಾಂಧೀಜಿಯ ಆಗಮನದಿಂದಾಗಿ, ಭಾರತವನ್ನು ಜಾತ್ಯಾತೀತವಾಗಿ ಧರ್ಮಾತೀತವಾಗಿ ನೋಡುವ ಹೊಸ ಪರಿಕಲ್ಪನೆ ಪ್ರಾರಂಭವಾಯಿತು. ಗಾಂಧೀಜಿ ತಮ್ಮ ನಿಲುವನ್ನು ಈ ನೆಲದ ಜನಸಾಮಾನ್ಯರ ವಿವೇಕದಿಂದ, ಅದರ ಫಲಿತವಾದ ಸಂತರ–ದಾಸರ–ಶರಣರ–ಕಬೀರರ ನಿಲುವಿನಿಂದ ದತ್ತವಾಗಿಸಿಕೊಂಡಿದ್ದರು. "ಭಾರತವನ್ನು ಗಾಂಧೀಜಿ ಎರಡು ರೂಪಕಗಳ ಮೂಲಕ ಪ್ರತಿನಿಧಿಸಿದ್ದರು. ಒಂದು ಉಪ್ಪು ಇನ್ನೊಂದು ಚರಕಾ. ಎರಡೂ ಧರ್ಮಾತೀತವಾದವು" ಎನ್ನುತ್ತಾರೆ ಡಿ.ಆರ್. ನಾಗರಾಜ "ಗಾಂಧೀ ಜಾತೀಯತೆ, ವರ್ಣಾಶ್ರಮ ಧರ್ಮಗಳಿಗೆ ಒಳಗಾಗಿಯೇ ಅವನ್ನೆಲ್ಲ ಸ್ಫೋಟಿಸಿ ಹೊರಬಂದರು. ಅವರು ಗಂಗಾಜಲ, ಭಾರತಮಾತೆಯನ್ನು ಹೊತ್ತುಕೊಂಡು ಓಡಾಡಿ ಹಿಂದೂತ್ವವನ್ನೋ ಭಾರತೀಯತ್ವವನ್ನೋ ಪ್ರದರ್ಶಿಸಲು ಬಯಸದೇ ಇದ್ದವರು" –ಎಂದಿದ್ದಾರೆ. ಪಿ. ಲಂಕೇಶ. ಗಾಂಧೀಜಿಯ ಶಕೆಯನ್ನು ಮುಕ್ತಾಯಗೊಳಿಸುವವರೆಗೂ ಹಿಂದೂತ್ವವು ತನ್ನ ಕೋಮುವಾದಿ ಕಾರ್ಯಾಚರಣೆಯನ್ನು ಪ್ರಬಲಗೊಳಿಸಿಕೊಳ್ಳುವುದು ಸಾಧ್ಯವಾಗುವುದಿಲ್ಲ. ಗಾಂಧೀ ಹತ್ಯೆಯ ಮುಖ್ಯ ಕಾರಣವೇ ಈ ತಡೆಗೋಡೆಯನ್ನು ನಿರ್ನಾಮಗೊಳಿಸಿಕೊಳ್ಳುವುದಾಗಿತ್ತು. ಗಾಂಧೀ ಹತ್ಯೆ ವ್ಯಕ್ತಿಯ ಹತ್ಯೆಯಾಗಿರಲಿಲ್ಲ. ಅದು ಬಹುತ್ವದಲ್ಲಿ ಏಕತೆಯನ್ನು ಕನಸಿದ ಕಾಣಲು ಯತ್ನಿಸಿದ ಭಾರತದ ಸಮಾಜವಾದಿ ಧರ್ಮ ನಿರಪೇಕ್ಷ ತತ್ವದ ಹತ್ಯೆಯಾಗಿತ್ತು. ಭಾರತ ಒಂದು ಸ್ವತಂತ್ರವಾದ ಸಾರ್ವಭೌಮ ರಾಷ್ಟ್ರ. ಅದೊಂದು ಸಮಾಜವಾದಿ, ಜಾತ್ಯಾತೀತ

ಮತ್ತು ಪ್ರಜಾಸತ್ತಾತ್ಮಕ ಗಣರಾಜ್ಯ." ಎಂಬ ಸಂವಿಧಾನದ ಆತ್ಮಘನತೆಗೆ ಎಸಗಿದ ದ್ರೋಹವಾಗಿತ್ತು. ಹೀಗಾಗಿ, ಗಾಂಧೀಜಿ ಹತ್ಯೆಗೆ ಭಾರತೀಯ ಸಂವೇದನಾಶೀಲತೆ ಅಪಾರವಾಗಿ ಸ್ಪಂದಿಸಿತ್ತು.

ಬಂಡವಾಳವಾದದೊಂದಿಗೆ ವಿಲೀನಗೊಂಡು ತನ್ನ ಉಗ್ರ ಚಹರೆಯನ್ನು ಮರೆಮಾಚಿ, ನಿರಂತರವಾಗಿ ದಶಾವತಾರಗಳಲ್ಲಿ ಕಾಣಿಸಿಕೊಳ್ಳತೊಡಗಿದ ಕೋಮುವಾದ ನಡೆಸಿದ ಜನಾಂಗೀಯ ಹತ್ಯೆ-ಹಲ್ಲೆಗಳಿಗೊಂದು ಚರಿತ್ರೆಯೇ ಭರ್ತಿಯಾಗಿ ಹೋಯಿತು. ಕೋಮುವಾದವು ತನ್ನನ್ನು ರಾಷ್ಟ್ರೀಯವಾದಿ ಅಜೆಂಡಾದೊಳಗೆ ಪ್ರತಿಪಾದಿಸಿಕೊಳ್ಳಲು ತೊಡಗಿತು. ಹಾಗಾಗಿ ರಾಷ್ಟ್ರೀಯತೆ ಎನ್ನುವುದೊಂದು ರಾಜಕೀಯ ಅಜೆಂಡಾ ಆಗಿ ಚಲಾವಣೆಗೊಳ್ಳತೊಡಗಿತು. ಆದರೆ ಮೂಲತಃ ರಾಷ್ಟ್ರೀಯತೆ ಎನ್ನುವುದು ಆಧುನಿಕ ಜಗತ್ತಿನ ಪರಿಕಲ್ಪನೆ. ಇದು ಕುಲ, ಜನಾಂಗ ಎಂಬ ಚೌಕಟ್ಟುಗಳಿಗಿಂತ ಬೇರೆಯಾದದ್ದು. ಒಂದು ನಿರ್ದಿಷ್ಟ ಭೂಪ್ರದೇಶದಲ್ಲಿ ವಾಸಿಸುವ ಸಮುದಾಯಗಳ ಭಾವನೆಯಾಗಿ, ಪಾರಂಪರಿಕ ಸ್ಮೃತಿಯಾಗಿ, ನಿರಂತರವಾಗಿ ಮುನ್ನಡೆಸಬೇಕಾದ ಜವಾಬ್ದಾರಿಯಾಗಿ ವಿವರಿಸಿಕೊಳ್ಳುವಂಥದ್ದು. ಹಾಗಾಗಿ ಇದೊಂದು ಭಾವಿಸದ, ಕಲ್ಪಿಸಿದ ರಾಜಕೀಯ ಸಮುದಾಯ. ಈ ಸಮುದಾಯವು ಸಾಂಸ್ಕೃತಿಕ, ಭಾಷಿಕ, ಐತಿಹಾಸಿಕ ಪ್ರಜ್ಞೆಯನ್ನು ಸಮಾನವಾಗಿ ಹಂಚಿಕೊಳ್ಳುತ್ತದೆ. ರಾಷ್ಟ್ರೀಯತೆಯ ಭಾವನೆಯು ಪರಕೀಯ ಆಕ್ರಮಣಕ್ಕೆ ಒಳಗಾದ ದೇಶಗಳಲ್ಲಿ ಹೆಚ್ಚು ವಿಶಿಷ್ಟವಾಗಿ ಕಾರ್ಯರೂಪಕ್ಕಿಳಿದಿರುತ್ತದೆ. ವೈರಿಯ ವಿರುದ್ಧವಾಗಿ ಮತ್ತು ಶತಮಾನಗಳಿಂದ ಬೇರೂರಿದ್ದ ಜಾಡ್ಯವನ್ನು ಹೊರದೂಡುವ ಪರಿಕರವಾಗಿ ಏಕಕಾಲದಲ್ಲಿ ಕಾರ್ಯತತ್ಪರವಾಗಿರುತ್ತದೆ. ಭಾರತದಲ್ಲಿ ಸ್ವಾತಂತ್ರ್ಯ ಹೋರಾಟದ ಕಾಲದಲ್ಲದರ ಇರುವಿಕೆ ಹೀಗೇ ಇತ್ತು.

'ನೂರು ದೇವರನ್ನೆಲ್ಲ ನೂಕಾಚೆ ದೂರ
ಭಾರತಾಂಬೆಯೆ ದೇವಿ ನಮಗಿಂದು ಪೂಜಿಸುವ ಬಾರ'

ಎಂದು ಕವಿ ಕುವೆಂಪು ಕರೆಕೊಡುವುದು ಈ ಹಂತದಲ್ಲಿ. ಕನ್ನಡ ನವೋದಯ ಸಾಹಿತ್ಯದ ಬಹುತೇಕ ಪುಟಗಳು ಇಂತಹ ತಾಯ್ನಾಡಿನ ಪ್ರೀತಿಯಿಂದ ಭಕ್ತಿಯಿಂದ ತುಂಬಿವೆ. ಅಲ್ಲಿಯ ರಾಷ್ಟ್ರೀಯತೆಯೊಂದಿಗೆ ಜೀವಪರ ನಿಲುವುಗಳು ಸೇರಿಕೊಂಡಿದ್ದೂ ಇದೆ. ಭಾರತದಲ್ಲಿ ಗಾಂಧೀಹತ್ಯೆಯ ನಂತರವೂ ತನ್ನ ಪ್ರಾಬಲ್ಯವನ್ನು ಮೆರೆಯಲು ಸಾಧ್ಯವಾಗದ ಹಿಂದೂತ್ವದ ಅಜೆಂಡಾಕ್ಕೆ, ಅಧಿಕಾರ ರಾಜಕಾರಣದ ಆಸೆಯನ್ನು ಬೆಳೆಸಿದ್ದು ರಾಷ್ಟ್ರೀಯವಾದದ ಅಪಕಲ್ಪನೆ. ಈ ಅಪಕಲ್ಪನೆಯನ್ನು ಹರಡಲು ಭಾಷೆ, ಆಹಾರ, ಉಡುಗೆ-

ತೊಡುಗೆ, ಧಾರ್ಮಿಕ ಸಂಪ್ರದಾಯ, ಕಾನೂನು ಯಾವುದೂ ಹಾದಿಗಳಾಗಬಹುದಾಯಿತು. ರಾಷ್ಟ್ರೀಯತೆ ಮತ್ತು ಧರ್ಮವನ್ನು ಒಂದಾಗಿ ನೋಡುವುದು ಎಂದರೇ, ರಾಷ್ಟ್ರಕ್ಕೂ ಧರ್ಮಕ್ಕೂ ಅಪಚಾರ ಎಸಗುವುದಾಗಿದೆ. ಧರ್ಮವೆನ್ನುವುದು ಮೂಲತಃ ವ್ಯಕ್ತಿಯನ್ನು ಸರ್ವಸಮಾನತೆಯ ದೃಷ್ಟಿಕೋನವನ್ನು ರೂಪಿಸಿಕೊಳ್ಳುವ ಎತ್ತರಕ್ಕೆ ಏರಿಸುವುದಾಗಿದೆ. ಆಗ ಅದು ಎಲ್ಲ ಮೂಲಭೂತ ಗಡಿಗಳನ್ನು ಉಲ್ಲಂಘಿಸಿಕೊಳ್ಳುತ್ತ, ಅನ್ಯಧರ್ಮ ಹಾಗೂ ಸಂಸ್ಕೃತಿಯೊಂದಿಗೆ ಸಂಕರರೂಪೀ ಗುಣವನ್ನು ಪ್ರಕಟಗೊಳಿಸುತ್ತದೆ. ಆದರೆ ಧರ್ಮವನ್ನು ರಾಜಕೀಯ ಅಧಿಕಾರ ಏರಲು ಬಳಸುವ ಮೆಟ್ಟಿಲಾಗಿಸಿಕೋಂಡಾಗ, ಅದು 'ಅನ್ಯ ದ್ವೇಷದ' ಪ್ರಚೋದನಕಾರಿ ಆಯುಧವಾಗುತ್ತದೆ. ಭಾರತದಲ್ಲಿ ಹಿಂದೂತ್ವ, ಈ ಎರಡನೆಯ ಆಯ್ಕೆಯನ್ನು ಎದುರಿಟ್ಟುಕೊಂಡಿದ್ದರಿಂದ ರಾಷ್ಟ್ರೀಯತೆಯನ್ನು ಹರಿತ ಅಸ್ತ್ರವಾಗಿಸಿಕೊಳ್ಳಲಾಯಿತು.

ಈ ಹುಸಿ ರಾಷ್ಟ್ರೀಯತೆಯು ಮತೀಯ ಧ್ರುವೀಕರಣಕ್ಕಾಗಿ ಚರಿತ್ರೆಯನ್ನು ವಿಕೃತಗೊಳಿಸುತ್ತದೆ. ಭಾರತದ ಸ್ವಾತಂತ್ರ್ಯ ಸಂಗ್ರಾಮವು ಹಿಂದೂ ಮತ್ತು ಮುಸ್ಲಿಂರಿಬ್ಬರ ಹೋರಾಟದ ಫಲವಾಗಿತ್ತು –ಎಂಬ ಸರಳ ಸತ್ಯವನ್ನು ಮುಚ್ಚಿಡುತ್ತದೆ. ಸ್ಥಳೀಯ ಚರಿತ್ರೆಗಳನ್ನು ಅವಜ್ಞೆಗೆ ತಳ್ಳಲಾಗುತ್ತದೆ. ರಾಷ್ಟ್ರೀಯ ಚರಿತ್ರೆಯನ್ನು ಏಕರೂಪೀ ವಿತಂಡವಾದಕ್ಕೆ ಸಿಲುಕಿಸಲಾಗುತ್ತದೆ. ಟಿಪೂ ಸುಲ್ತಾನನನ್ನು 'ಅಪ್ರತಿಮ ದೇಶಭಕ್ತ' ಎಂದು ಸಾಧಾರವಾಗಿ ಬರೆದಿದ್ದ ಡಾ.ಎಂ.ಚಿದಾನಂದಮೂರ್ತಿಯವರು ಬದಲಾದ ಕಾಲಘಟ್ಟದ ಬದಲಾದ ಅವಶ್ಯಕತೆಗಳಿಗೆ ಸೋತು ಟಿಪೂವನ್ನು ದೇಶದ್ರೋಹಿ ಎಂದು ಬರೆಯುತ್ತಾರೆ. ಸಾಮ್ರಾಜ್ಯಶಾಹಿಯನ್ನು ರಾಜಪ್ರಭುತ್ವವನ್ನು ಆ ಕಾಲದ ಆ ಸಮಾಜದ ಬಿಕ್ಕಟ್ಟುಗಳನ್ನು ಇಂದಿನ ಧರ್ಮದ ಕನ್ನಡಕದಿಂದ ಅದೂ ಅರೆಬರೆಯಾಗಿ ದಾಖಲಿಸುವುದನ್ನೇ ರಾಷ್ಟ್ರಪ್ರೇಮ ರಾಷ್ಟ್ರೀಯತೆ ಎಂದು ಬಿಂಬಿಸಿದರೆ ಮುಂದಿನ ಜನಾಂಗಕ್ಕೆ ಪರಂಪರೆಯಿಂದ ಪ್ರಾಪ್ತವಾಗುವುದು ಹಿಂಸೆಯ ದಾಖಲೆ ಮಾತ್ರ. ಚರಿತ್ರೆಯನ್ನು ಛಿದ್ರಗೊಳಿಸುವ ನಡೆಯನ್ನು ಸೃಜನಶೀಲತೆಯು ಸದಾ ಪ್ರಶ್ನಿಸುತ್ತ ಬಂದಿದೆ. ಜನಪದರು ಟಿಪೂವಿನ ಕುರಿತು ಕಟ್ಟಿದ ಲಾವಣಿಗಳು, ಕನ್ನಡದ ಕಾವ್ಯದಲ್ಲಿ ಟಿಪೂ ಪಡೆವ ಪ್ರವೇಶಗಳು, ಗಿರೀಶ ಕಾರ್ನಾಡರ 'ಟಿಪೂ ಕಂಡ ಕನಸು ಎಂಬ ನಾಟಕ ಹೀಗೆ ನಿದರ್ಶನಗಳನ್ನು ಬೆಳೆಸಬಹುದು. ಭಾರತದಲ್ಲಿ ಈ ಸ್ವಾತಂತ್ರ್ಯ ಹೋರಾಟದ ನಿಜದ ನೆಲೆಗಳನ್ನು ಶೋಧಿಸುವ ಕೆಲಸ ನಡೆದಿದೆ. ಚರಿತ್ರೆಯಲ್ಲಿ ದಾಖಲಾಗದಿರುವ ಜನಚರಿತ್ರೆಯ ಹೋರಾಟದಲ್ಲಿ ರಾಷ್ಟ್ರೀಯವಾದಿ ಭ್ರಮೆಯನ್ನು ನಾಶಮಾಡುವ ಸತ್ಯಗಳಿವೆ ಎಂಬ ಅರಿವು ವಿಸ್ತಾರಗೊಳ್ಳುತ್ತಿದೆ. ಕೋಮುವಾದವು,

ಜನಬದುಕಿನ ಸೌಹಾರ್ದತೆಯನ್ನು ನಾಶಮಾಡುತ್ತಿರುವಾಗ ಅದನ್ನು ಕಾಪಿಡುವ ತಡೆಗೋಡೆಗಳ ಹಾಗೆ ವಿಮರ್ಶೆ, ಸಂಶೋಧನೆ, ಕಾವ್ಯ, ಕಥನ, ಆತ್ಮಚರಿತ್ರೆ, ಜೀವನಚರಿತ್ರೆಗಳು ತಮ್ಮ ದಿಕ್ಕು ಬದಲಿಸಿಕೊಂಡವು. ಕನ್ನಡದ ಮಾತ್ರವಲ್ಲಿ ಭಾರತದ ಕಲೆ-ಸಾಹಿತ್ಯಗಳಲ್ಲಿಯೇ ಇಂತಹದ್ದೊಂದು ಪಲ್ಲಟ ಪ್ರಕ್ರಿಯೆ ಗಾಢವಾಗಿ ಕಾಣುತ್ತಿದೆ. ಇದೊಂದು ಅನಿವಾರ್ಯತೆಯೂ ಜೀವಸಾವಿನ ಪ್ರಶ್ನೆಯೂ ಆಗಿತ್ತು. ಯಾಕೆಂದರೆ, ಕೋಮುವಾದ ತನ್ನ ಏಕರೂಪೀ ಸಂಹಿತೆಯನ್ನು ಅಮಾನವೀಯವಾಗಿ ಹೇರುತ್ತಿತ್ತು ಮತ್ತು ಸಮಾಜದ ದಮನಿತರನ್ನು ಅಂಚಿನ ಸಮುದಾಯಗಳನ್ನು ತನ್ನ ಕಾಲಾಳುಗಳಂತೆ ಬಳಸಿಕೊಳ್ಳುತ್ತಿತ್ತು. ಹಿಂದೂತ್ವ ಎಂಬ ಸಿದ್ಧಾಂತವು ಮುಸ್ಲಿಂರನ್ನು ಮಾತ್ರ ದ್ವೇಷಿಸುವ ಅಥವಾ ಅನ್ಯ ಧರ್ಮೀಯರನ್ನು ಮಾತ್ರ ದ್ವೇಷಿಸುವ ಸಿದ್ಧಾಂತವಲ್ಲ. ಅದು ನಿಜವಾಗಿಯೂ ದಲಿತರನ್ನು ದ್ವೇಷಿಸುವ ಹಾಗೂ ಅವರನ್ನು ವಿದ್ರೋಹಿಗಳನ್ನಾಗಿ ಸಿದ್ಧಪಡಿಸುವ ಸಿದ್ಧಾಂತ ಎಂದು ಆನಂದ ತೇಲ್ತುಂಬ್ಡೆ 'ಕೋಮುವಾದಿ ಕಾರ್ಯಾಚರಣೆ ಮತ್ತು ದಲಿತ ಪ್ರತಿಸ್ಪಂದನೆ' ಎಂಬ ಕೃತಿಯಲ್ಲಿ ನಿರೂಪಿಸುತ್ತಾರೆ. ಜನಸಂಘದ ಸ್ಥಾಪಕ ದೀನದಯಾಳ ಉಪಾಧ್ಯಾಯ-"ಇಸ್ಲಾಂ ಧರ್ಮಕ್ಕೆ ಮತಾಂತರಗೊಂಡಿರುವ ಕೆಳಜಾತಿಯ ಹಿಂದೂಗಳನ್ನು ಓಲೈಸುವ ಸಲುವಾಗಿ ಸನಾತನ ಹಿಂದೂ ಸಂಸ್ಕೃತಿಯನ್ನು ಬಲಿಕೊಡಲಾಯ್ತು."[೩] ಎಂದಿರುವುದನ್ನು ದಾಖಲಿಸುತ್ತಾರೆ. ಈ ಹಿತಾಸಕ್ತಿಯ ಐಡೆಂಟಿಟಿಯು ಈ ಕಾಲದಲ್ಲಿ ಬಹುವಿನ್ಯಾಸಗಳಲ್ಲಿ ಕಾಣುತ್ತಲೇ ಇದೆ. ಹಿಂದೂತ್ವ ಮತ್ತು ದಲಿತರ ನಡುವಿನ ವೈರುಧ್ಯವು ಹಿಂದೂತ್ವ ಮತ್ತು ಮುಸ್ಲಿಮರ ನಡುವಿನ ವೈರುಧ್ಯಕ್ಕಿಂತಲೂ ತೀಕ್ಷ್ಣವಾದದ್ದು ಎಂದು ಅಭಿಪ್ರಾಯ ಪಡುತ್ತಾರೆ. ಹಿಂದೂತ್ವದ ಅಂಗಸಂಸ್ಥೆಗಳು ಕೊಳಚೆ ಗೇರಿಗಳಲ್ಲಿ, ಬುಡಕಟ್ಟು ಜನರಲ್ಲಿ, ಗ್ರಾಮಗಳ ಬಡವರಲ್ಲಿ ಪ್ರವೇಶಿಸಿ ಅಲ್ಲಿಯ ಮಕ್ಕಳಿಗೆ ಮತ್ತು ಯುವಕರಿಗೆ ಕೆಲವು ಸಹಾಯವನ್ನೂ, ಪುಕ್ಕಟೆ ಶಿಕ್ಷಣವನ್ನೂ ಕೊಡುತ್ತದೆ. ಆ ಪಠ್ಯಗಳಲ್ಲಿ ಉದ್ದೇಶಪೂರ್ವಕವಾಗಿ ಚರಿತ್ರೆಗೆ ಅಪಚಾರವೆಸಗಲಾಗಿರುತ್ತದೆ. ಆರೆಸ್ಸೆಸ್‌ನಲ್ಲಿ ಅಸ್ಪ್ರಶ್ಯತೆಯಿಲ್ಲವೆಂದು ಅಂಬೇಡ್ಕರ್ ಹೇಳಿದ್ದಾಗಿಯೂ, ಭಾರತ ವಿಭಜನೆಗೆ ಮುಸ್ಲಿಮರು ಕಾರಣರೆಂದೂ ದಾಖಲಿಸಲಾಗಿದೆ. - ಇಂತಹ ಅಭಿಪ್ರಾಯಗಳು ದೀರ್ಘಕಾಲೀನ ದುರಂತಗಳಿಗೆ ಪ್ರೇರಕವಾಗಿರುತ್ತವೆ.

ಸೆಕ್ಯುಲರ್ ಪ್ರಜಾಪ್ರಭುತ್ವ ದೇಶವಾದ ಭಾರತದಲ್ಲಿ ಬೆಳೆದ ಹಿಂದೂತ್ವ ಮುಸ್ಲಿಂ ಮೂಲಭೂತವಾದದ ಬೆಳವಣಿಗೆಗೂ ಕಾರಣವಾಯಿತು. ರಾಷ್ಟ್ರಭಕ್ತಿಯನ್ನು ಒತ್ತಾಯವಾಗಿ, ಅಪಮಾನಿತವಾಗಿ ಹೇರುವುದು; ಅಲ್ಪಸಂಖ್ಯಾತ ಧರ್ಮಿಗಳ ಕುರಿತು ಅಪಕಲ್ಪಿತಗಳನ್ನು ಹರಡುವುದು, ರಾಕ್ಷಸೀಕರಣಗೊಳಿಸುವುದು, ಜನಾಂಗೀಯವಾದ ವಾದವನ್ನು...... ದಿನನಿತ್ಯದ

ಬದುಕಿನಲ್ಲಿ ಬೆರೆಸುವುದು, ಸ್ವಾತಂತ್ರ್ಯ-ಹಕ್ಕುಗಳನ್ನು ದಮನ ಮಾಡುವುದು ಇಂತಹ ಪ್ರಭುತ್ವ ಪ್ರೇರಿತವೂ ಪ್ರಭುತ್ವ ಕೃಪಾಪೋಷಿತವೂ ಆದ ಚಟುವಟಿಕೆಗಳು ಅಲ್ಪಸಂಖ್ಯಾತರಲ್ಲಿ ಮತೀಯವಾದದ ಹೆಚ್ಚಳಕ್ಕೆ ಕಾರಣವಾಗಿದೆ. ಧರ್ಮ ರಕ್ಷಣೆಯ ಭಯ, ಸಾಂಸ್ಕೃತಿಕತೆಯ ರಕ್ಷಣೆಯ ಭಯ, ರಾಜಕೀಯ ಅಸ್ಥಿತ್ವದ ಪ್ರಶ್ನೆಗಳೆಲ್ಲ ಸೇರಿ ಅಸಹಾಯಕತೆ ಮತ್ತು ಆಕ್ರೋಶದ ಫಲವಾದ ಭಯೋತ್ಪಾದನೆಯಂತಹ ಹೇಯಕೃತ್ಯಗಳಿಗೆ ಪ್ರಾರಂಭವಾಗುತ್ತದೆ. ಇದಕ್ಕೆ ಜಾಗತಿಕ ರಾಜಕಾರಣದಲ್ಲಿ ನಡೆವ ದ್ವೇಷ-ಒಪ್ಪಿಗೆಗಳು ಕೂಡ ಪ್ರಚೋದನೆಯನ್ನು ಒದಗಿಸುತ್ತದೆ. ಇದರ ಇಡಿಯಾದ ಪರಿಣಾಮವೆಂದರೆ, ಇಂಡಿಯಾದ ಸಾಮಾನ್ಯ ಜನರು ಕಟ್ಟಿ ಬೆಳೆಸಿದ ಸಂಸ್ಕೃತಿ, ಸೌಹಾರ್ದತೆ, ಸುವಿಶಾಲ ಮಾದರಿಗಳು ಧ್ವಂಸವಾಗುತ್ತವೆ. ಹಿಂಸೆಯ ಬೀಜಬಿತ್ತಿ ಪ್ರಗತಿಯ ಫಲವನ್ನು ಪಡೆಯುವುದು ಸಾಧ್ಯವಿಲ್ಲ.

ಜನಾಂಗೀಯವಾದಿ ಮತೀಯವಾದ ಸಿದ್ಧಾಂತಗಳು ಕಾಲ್ಪನಿಕ ಶತೃವನ್ನು ಜನರ ಎದುರಿಡುತ್ತವೆ. ಹುಸಿ ದೇಶಪ್ರೇಮವನ್ನು ಚಲಾವಣೆಗೆ ತರುತ್ತವೆ. ಜನಾಂಗ ಶ್ರೇಷ್ಠತೆಯ ಭ್ರಮೆಯನ್ನು ಬಿತ್ತುತ್ತವೆ. ಸರ್ವಪ್ರಯತ್ನದಿಂದ 'ಸರ್ವ ಜನಾಂಗದ ಶಾಂತಿಯ ತೋಟ'ಕ್ಕೆ ಕೊಳ್ಳಿಯಿಡುತ್ತವೆ. ಪ್ರಬಲ ವೈರಿಯನ್ನು ಎದುರಿಸುವ ತಂತ್ರವಾಗಿ ದುರ್ಬಲ ವೈರಿಗಳನ್ನು ತಮ್ಮ ಪಕ್ಷವೇ ಎಂದು ಸಾರುತ್ತವೆ. ತರ್ಕಬದ್ಧವಾದ ಸುಳ್ಳುಗಳನ್ನು ಹರಡುತ್ತವೆ. ಮಾಧ್ಯಮಗಳನ್ನು ಕೊಂಡುಕೊಂಡು ಮಾಧ್ಯಮಗಳ ಮೂಲಕ ಜನರ ವಿಚಾರಶಕ್ತಿಯ ಮೇಲೆ ಹಲ್ಲೆಮಾಡುತ್ತವೆ. ಈ ಎಲ್ಲ ಭಯೋತ್ಪಾದಕ ಚಟುವಟಿಕೆಗಳಿಂದ ಮತಾಂಧತೆಯು ಪಡೆಯುವ ಲಾಭ ರಾಜಕೀಯ ಅಧಿಕಾರಗಳಿಕೆ ಮತ್ತು ಆರ್ಥಿಕ ಬಲಿಷ್ಠತೆ. ಜನಸಾಮಾನ್ಯರ ನೆಮ್ಮದಿಯನ್ನು ಕಸಿದುಕೊಂಡು, ನೆಲವನ್ನು ನೆತ್ತರ ಕೆಸರಾಗಿಸಿಕೊಂಡು ಅಮೃತ ಮಹಲಿನ ವಿಜೃಂಭಣೆಯ ಕನಸು ಕಾಣುವುದು ಮತ್ತು ಒಂದೊಂದೇ ಗೆಲುವಿನ ಮೂಲಕ ಮತಾಂಧತೆಯಲ್ಲಿ ಬೀಗುವುದು. ಜಾಗತೀಕರಣದ ಈ ದಶಕಗಳು ಉಂಟುಮಾಡಿದ ಆತ್ಮಘಾತಕ ಸಂಗತಿಗಳಿಗೆ ಸಾಕ್ಷೀಪ್ರಜ್ಞೆಯಾಗಿ ಇರಬೇಕಾದ ಸಂವೇದನಾಶೀಲ ಮನಸ್ಸುಗಳಿಗಿದು ಭೀಕರ ಕಾಲ. ಎಂತಹ ಬೆಲೆ ತೆತ್ತಾದರೂ ಈ ಅನ್ಯಾಯವನ್ನು ವಿರೋಧಿಸುವುದು ಅನಿವಾರ್ಯವಾಗುತ್ತದೆ. ಜಗತ್ತಿನಲ್ಲಿ ಫ್ಯಾಸಿಸ್ಟ್ ಪ್ರಭುತ್ವ ವಿಜೃಂಭಿಸಿದಾಗೆಲ್ಲ ಕಲಾವಿದರ, ಬರಹಗಾರರ, ವಿದ್ವಾಂಸರ, ವಿಜ್ಞಾನಿಗಳ ನರಕಯಾತನೆಯ ಬಗ್ಗೆ ಚರಿತ್ರೆಯ ಗರ್ಭದಲ್ಲಿ ದಾಖಲೆಗಳಿವೆ. ಭಾರತದ ವರ್ತಮಾನ ಅದಕ್ಕಿಂತ ಬಹಳ ಬೇರೆಯಾಗೇನೂ ಉಳಿದಿಲ್ಲ. ಮಹಾರಾಷ್ಟ್ರದಲ್ಲಿ ಚಿಂತಕರಾದ ನರೇಂದ್ರ ದಾಬೋಲ್ಕರ್ ಮತ್ತು ಪಾನ್ಸರೆಯವರ ಹತ್ಯೆಯಾಗಿದ್ದನ್ನು; ಕರ್ನಾಟಕದಲ್ಲಿ ಡಾ.ಎಂ.ಎಂ. ಕಲಬುರ್ಗಿ ಮತ್ತು ಗೌರಿ ಲಂಕೇಶರ

ಹತ್ಯೆಯಾಗಿದ್ದನ್ನು ಇದೇ ಸಾಂದರ್ಭಿಕತೆಯ ಭೀಕರ ಅಧ್ಯಾಯವಾಗಿಯೇ ನೋಡಬೇಕಾಗುತ್ತದೆ. ಈ ಯಾವುದೂ ನಮ್ಮ ಕಾಲದಲ್ಲಿ ಸಾಹಿತ್ಯದ ಅಧ್ಯಯನಕ್ಕೆ ಹೊರತಾದ ಸಂಗತಿಗಳಲ್ಲ. ಕನ್ನಡದ ಚಿಂತಕ ಪುರುಷೋತ್ತಮ ಬಿಳಿಮಲೆಯವರ ಪದ್ಯವೊಂದು ಈ ಸಂಕೀರ್ಣ ಸ್ಥಿತಿಯನ್ನು ವಿಷಾದ ವ್ಯಂಗ್ಯದಿಂದ ನಿರೂಪಿಸುತ್ತದೆ. ಪದ್ಯ ಹೀಗಿದೆ–



ಗಾಂಧಿಗೆ ಗುಂಡಿಕ್ಕಿ
ಗೋಡ್ಸೆಗೆ ಗುಡಿಕಟ್ಟಿ
ರಾಮ ಮಂತ್ರವ ಜಪಿಸುವಾಗ
ಅವರು ದೇಶವನು ಒಡೆಯುತ್ತಿರಲಿಲ್ಲ.

ತಿನ್ನುವ ಆಹಾರ ಕಸಿದು
ಅತ್ತಾಗ ಮರುಗಿ
ಮತ್ತೆ ವಿಷಬೆರೆಸಿ ಕೊಟ್ಟು
ನಿನ್ನನ್ನು ಸಾಯಿಸಿದಾಗ
ಅವರು ದೇಶವನು ಒಡೆಯುತ್ತಿರಲಿಲ್ಲ.

ತಲೆಯಲ್ಲಿ ಹೇಲು ಹೊರಸಿ
ಮುಟ್ಟಬಾರದೆಂದು ಊರ ಹೊರಗಿರಿಸಿ
ಮತ್ತೆ ಮಲಗಿದ್ದ ದಲಿತರನು
ಕೇರಿ ಸಹಿತ ಸುಟ್ಟಾಗ
ಅವರು ದೇಶವನು ಒಡೆಯುತ್ತಿರಲಿಲ್ಲ.

ಅಮಾಯಕರ ಮನೆಯೊಳಗೆ ನುಗ್ಗಿ
ತೋಳ ಬಲದಿಂದ ಹೊರಗೆಳೆದು
ತಿವಿ ತಿವಿದು ಕೊಂದು
ಅನ್ನವನು ಕಸಿವಾಗ
ಅವರು ದೇಶವನು ಒಡೆಯುತ್ತಿರಲಿಲ್ಲ

ತುಂಬು ಗರ್ಭಿಣಿಯರ ಹೊಟ್ಟೆ ಬಗಿದು
ಬೀದಿಯಲ್ಲಿ ರಕ್ತ ಚೆಲ್ಲಿ
ಬೆಂಕಿಯನ್ನಿಕ್ಕಿದಾಗ

ಅವರು ದೇಶವನು ಒಡೆಯುತ್ತಿರಲಿಲ್ಲ.

ನನ್ನ ಪ್ರೀಯ ದೇಶವೇ

ನಿನ್ನ ಸಂಪತ್ತನ್ನು ನನ್ನೆದುರೇ ಹರಾಜಿಗಿಟ್ಟು

ಮೋಜು ಮಾಡುತ್ತ

ದೇಶಭಕ್ತಿಯ ಬಗೆಗೆ ನನಗೆ ತಿಳಿ ಹೇಳುತ್ತಿದ್ದಾಗ

ಅವರು ದೇಶವನು ಒಡೆಯುತ್ತಿರಲಿಲ್ಲ.

ಸುತ್ತಲ ವಿದ್ಯಮಾನಗಳು ಬೆಂಕಿಯಂತೆ ಧಗ ಧಗಿಸುವಾಗ, ಆ ಉರಿಯನ್ನು ಆರಿಸುವ ನೀರ ಹನಿಗಳ ಹಾಗೆ ಸ್ಪಂದಿಸುವುದು ಸೃಜನಶೀಲತೆಯ ಎದುರು ಇರುವ ಏಕೈಕ ದಾರಿಯಾಗಿತ್ತು. ಕನ್ನಡ ಕಥಾ ಸಾಹಿತ್ಯದ ಪ್ರತಿಸ್ಪಂದನವನ್ನು ವಿಶ್ಲೇಷಿಸಿ, ಅಧ್ಯಯನ ಮಾಡುವ ಹಿನ್ನಲೆಯಲ್ಲಿ ಈ ಪರಿಕಲ್ಪನೆಗಳನ್ನು ಸ್ಪಷ್ಟಪಡಿಸಿಕೊಳ್ಳಲಾಗಿದೆ.

**ಕೊನೆಟಿಪ್ಪಣಿ:**

೧. ಜೊಸೆಫ್ ಸ್ಟಿಗ್ಲಿಟ್ಜ:– ಗ್ಲೊಬಲೈಸೇಶನ್ ಆ್ಯಂಡ್ ಡಿಸ್‌ಕಂಟೆಂಟ್. Page 6. ಪೆಂಗ್ವಿನ್ ಇಂಡಿಯಾ ಪ್ರಕಾಶನ ದೆಹಲಿ

೨. ಪಿ.ಸಾಯಿನಾಥ, ನೀಲಿಬಾನಿನಲ್ಲಿ ಕೆಂಪು ಸೂರ್ಯಲಡಾಯಿ ಪ್ರಕಾಶನ, ಪುಟ ೧೧೪.

೩. ಆನಂದ ತೇಲ್ತುಂಬ್ಡೆ 'ಕೋಮುವಾದಿ ಕಾರ್ಯಾಚರಣೆ ಮತ್ತು ದಲಿತ ಪ್ರತಿಸ್ಪಂದನೆ'(ಪು. 03)

ಅಧ್ಯಾಯ-೪

## ಸಣ್ಣ ಕಥೆ : ಈ ತನಕದ ನಡಿಗೆ

ಈ ಅಧ್ಯಯನವು ಕನ್ನಡದ ಸಣ್ಣಕಥೆ ಎಂಬ ಪ್ರಕಾರವನ್ನು ಕೇಂದ್ರವಾಗಿಟ್ಟುಕೊಂಡು, ಜಾಗತೀಕರಣದ ಸಂದರ್ಭದ ಬದಲಾದ ವಿದ್ಯಮಾನಗಳಿಗೆ ಕನ್ನಡದ ಸೃಜನಶೀಲತೆಯು ಸ್ಪಂದಿಸಿದ ವೈಧಾನಿಕತೆಯನ್ನು ಶೋಧಿಸುವುದಾಗಿದೆ. ಈ ಹಿನ್ನಲೆಯಲ್ಲಿ ಸಣ್ಣಕಥೆ ಎಂಬ ಸಾಹಿತ್ಯ ಪ್ರಕಾರವು ಕನ್ನಡದಲ್ಲಿ ಬೇರೂರಿ ಬೆಳೆದು ಬಂದ ಬಗೆಯನ್ನು ಗಮನಿಸಿಕೊಳ್ಳುವುದು ಅಗತ್ಯವಾಗಿದೆ.

ಮಾನವ ಚರಿತ್ರೆಯ ಆರಂಭಿಕ ಕಾಲದಿಂದಲೇ ಕಥಾ ಜಗತ್ತಿನ ಆರಂಭವೂ ಇದೆ. ಮನುಷ್ಯರು ಬೆಂಕಿ ಮತ್ತು ಕೃಷಿಯನ್ನು ಶೋಧಿಸಿಕೊಳ್ಳದ ಆದಿಮ ಹಂತದಲ್ಲಿ ಬೇಟೆಯ ಗುಂಪುಗಳಾಗಿ ಕಾಡುಮೇಡುಗಳಲ್ಲಿ ಸಂಚಾರಿಗಳಾಗಿ ಬದುಕುತ್ತಿದ್ದಾಗ, ತಮ್ಮ ಭಾವನೆಗಳ ಅಭಿವ್ಯಕ್ತಿಗೆ ಭಾಷೆಯನ್ನು ಕಂಡುಕೊಂಡರು. ಜಗತ್ತಿನ ಎಲ್ಲ ಭಾಷೆಗಳ ಉದ್ಗಾರವಾಚಕಗಳು ಒಂದೇ ಧ್ವನಿ ಮತ್ತು ಒಂದೇ ಅರ್ಥವನ್ನು ಹೊಂದಿರುವುದರ ರಹಸ್ಯ ಇದೆಂದು ಭಾಷಾಶಾಸ್ತ್ರಜ್ಞರ ಅಭಿಮತ. ಭಾಷೆಯು ಭಾವನೆಯನ್ನು ಭರಿಸುವುದು ಸಾಲದಾದ ಕಾಲಘಟ್ಟದಲ್ಲಿ, ವಿಶಿಷ್ಟವಾದುದನ್ನು ಅಭಿವ್ಯಕ್ತಿಸಲು ರೂಪು ತಾಳಿದ್ದೇ ಗೆರೆ-ಗೀಟುಗಳ ಚಿತ್ರಕಲೆ ಎಂದು ಹೇಳಲಾಗುತ್ತದೆ. ಭಾಷೆಯು ತನ್ನ ತಾಳಿಕೆಯನ್ನು ವಿಸ್ತರಿಸಿಕೊಳ್ಳತೊಡಗಿದಂತೆ, ಮನುಷ್ಯ ಭಾವನೆಯನ್ನು ಧಾರಣೆ ಮಾಡುವ ಮತ್ತು ಸಂವಹನ ಮಾಡುವ ಶಕ್ತಿಯು ಮಾತಿಗೆ ಒದಗಿತು. ಮಾತಿನ ಸಂವಹನ ಸಾಧ್ಯತೆಯನ್ನು ಮಾತ್ರ ದುಡಿಸಿಕೊಳ್ಳಬಲ್ಲವರು ಹಾಗೂ ಮಾತಿನ ಸಂವೇದನಾ ಸಾಧ್ಯತೆಯನ್ನು ದುಡಿಸಿಕೊಳ್ಳಬಲ್ಲವರು ಎಂಬ ವರ್ಗೀಕರಣವು ತಂತಾನೇ ನಿರ್ಮಿತವಾಗತೊಡಗಿತು. ಇದನ್ನೇ ಕವಿರಾಜಮಾರ್ಗಕಾರ-

ಮಾತಜಿವರ್ ಕೆಲಬರ್ ಜಗ
ತೀತಳಗತ ಮನುಜರೊಳಗೆ ಮಾತಜಿವವರೊಳ್
ನೀತಿವಿದರಮಳ ಕವಿತಾ
ನೀತಿಯುತರ್ ಕೆಲರೆ ಪರಮ ಕವಿ ವೃಷಭರ್ಕಳ್

ಎನ್ನುತ್ತಾನೆ. ಮಾತನ್ನು ಅರಿತವರು ಕೆಲವರು ಎನ್ನುವುದೇ ಮಾತು ಅರಿಯದವರಿರುವ ಸಾಧ್ಯತೆಯನ್ನು ಹೇಳುತ್ತದೆ. ಮಾತು ಅರಿತವರಲ್ಲಿಯೂ ನೀತಿಯನ್ನೂ,

ಕವಿತಾ ನೀತಿಯನ್ನೂ ಬೆರೆತು ತಿಳಿದವರು ಮಾತ್ರ ಕವಿಶ್ರೇಷ್ಠರು ಎನ್ನುತ್ತಾನೆ. ಈ ಮಾತಿನಿಂದ ಕಾವ್ಯ ಸಂಜನಿಸುವ ಮನುಷ್ಯ ಚರಿತ್ರೆಯ ಸಂಕ್ರಮಣಾವಸ್ಥೆಯಲ್ಲಿ ಕಥೆ ಎಂಬ ಪ್ರಕಾರದ ಹುಟ್ಟೂ ಆಯಿತು. (ಪ್ರಾಚೀನರಲ್ಲಿ ಕಾವ್ಯ ಎನ್ನುವುದು ಸಾಹಿತ್ಯ ಎಂಬ ಅರ್ಥದಲ್ಲಿ ಬಳಕೆಯಾಗುವುದನ್ನು ಮರೆಯುವಂತಿಲ್ಲ.)

ವಸ್ತುತಃ ಕಥೆ ಎನ್ನುವುದು ಕಲೆಯ ಒಂದು ಪ್ರಕಾರ. ಹಾಗಾದರೆ ಕಲೆ ಎಂದರೇನು? ಈ ಪ್ರಶ್ನೆಯು ಭಾರತೀಯ ಮತ್ತು ಪಾಶ್ಚಾತ್ಯ ಕಾವ್ಯ ಮೀಮಾಂಸೆಯುದ್ದಕ್ಕೂ ಚರ್ಚಿತಗೊಂಡು; ಉತ್ತರದ ಬಹುಸಾಧ್ಯತೆಗಳನ್ನು ಒದಗಿಸಿದೆ. ಕಲೆ ಎಂದರೆ ಏನು? ಎಂಬ ವಿವರಣೆಗಿಂತಲೂ, ಕಲೆ ಎಂದರೆ ಏನಲ್ಲ? ಎಂಬ ವಿವರಣೆಯೇ ಸುಲಭಗ್ರಾಹ್ಯ ಎಂಬ ಅಭಿಪ್ರಾಯ ವಿದ್ವಾಂಸರದು. ಕಲೆಯೆಂದರೆ ಬದುಕಲ್ಲ, ಕಲೆಯೆಂದರೆ ಕಸುಬಲ್ಲ, ಕಲೆಯೆಂದರೆ ಪ್ರಚಾರವಲ್ಲ, ಕಲೆಯೆಂದರೆ ಮನರಂಜನೆಯಲ್ಲ.... ಹೀಗೆ. ಆದರೆ ಯಾವುದು ಅಲ್ಲ ಎನ್ನಲಾಗುತ್ತದೋ ಆ ಎಲ್ಲದರ ಒಟ್ಟೂ ಮೊತ್ತವಾಗಿ ಮತ್ತು ಅದನ್ನು ಮೀರಿದ ಆತ್ಯಂತಿಕ ಎತ್ತರವಾಗಿ ಕಲೆಯ ಅಸ್ತಿತ್ವ ಇದೆ. ಕಲೆಯ ಬಗೆಗಿನ ಈ ಎಲ್ಲ ಅಭಿಪ್ರಾಯಗಳು ಕಲೆಯ ಒಂದು ಪ್ರಕಾರವಾದ ಕಥೆಗೂ ಅನ್ವಯವಾಗುತ್ತದೆ.

ಕಥ ಎಂದರೆ ಹೇಳು ಎಂದರ್ಥ. ಕಥನ ಎಂದರೆ ಹೇಳುವುದು. ಹೇಳುವುದು ಎಂದರೆ ಕಾಣಿಸುವುದು, ನಿರೂಪಿಸುವುದು. ತನ್ನ ಅನುಭವಕ್ಕೆ ಒದಗಿದ ವಿಶಿಷ್ಟತೆಯನ್ನು, ವಿಸ್ಮಯವನ್ನು, ಅನೂಹ್ಯವನ್ನು ಇನ್ನೊಬ್ಬರಿಗೆ ಹೇಳುವುದು ಮಾತ್ರವಲ್ಲ; ಹಾಗೆ ಹೇಳುವಿಕೆಯಲ್ಲಿಯೇ ಏನಾಯಿತು, ಏನಾಬೇಕಿತ್ತು, ಏನಾಗಿರಬಹುದಾಗಿತ್ತು ಎಂಬೆಲ್ಲ ಸಾಧ್ಯತೆಗಳನ್ನು ವಿಸ್ತರಿಸುವುದು ಕಥನದ ಗುಣವಾಗಿದೆ. ಮನುಷ್ಯ ಸಮಾಜದಲ್ಲಿ ಕಲೆಯು ವಿಸ್ತೃತ ಆಯಾಮವನ್ನು ಪಡೆದುಕೊಳ್ಳುವ ಪೂರ್ವದಲ್ಲಿ –ಎಲ್ಲ ಕಲೆಯೂ ಕಥನವೇ ಆಗಿತ್ತು. ಕಾವ್ಯದಲ್ಲಿ 'ಪದ್ಯಂ ಗದ್ಯಂ ಚ ದ್ವಿಧಾ' ಎಂಬ ಸ್ಪಷ್ಟ ವಿಂಗಡನೆ ಕಾಣುವವರೆಗೆ ಕಾವ್ಯ ಚರಿತ್ರೆಯ ಒಂದು ಅಧ್ಯಾಯವೇ ಸಂದುಹೋಗಿದೆ. ಈ ವಿಂಗಡನೆಯ ನಂತರದಲ್ಲೂ ಪದ್ಯವು ಗದ್ಯದ ಕಥನ ಗುಣವನ್ನು, ಗದ್ಯವು ಪದ್ಯದ ಬಹು ಬಾಗು–ಬಳಕುಗಳನ್ನು ಪರಸ್ಪರ ಅಂತರ್ಗತಗೊಳಿಸಿಕೊಂಡೇ ಬೆಳೆದಿವೆ. ಈ ಸಂಕರ ನಡೆದಾಗಲೇ ಅವು ತಮ್ಮ ಅಭಿವ್ಯಕ್ತಿಯ ಸಾರ್ಥಕತೆಯನ್ನೂ ಪಡೆದಿವೆ. ಪ್ರಾಚೀನ ಕಾಲದಲ್ಲಿ ಜಗತ್ತಿನ ಎಲ್ಲ ಭಾಷಿಕ ಅಭಿವ್ಯಕ್ತಿಗಳಲ್ಲಿಯೂ ಕಥನವೇ ಜೀವದ್ರವ್ಯವಾಗಿತ್ತು. ಪ್ರಪಂಚದ ಎಲ್ಲ ಭಾಷೆಗಳ ಮಹಾಕಾವ್ಯಗಳೂ ಕಥನಗಳೇ. ಅವು ಮನುಕುಲದ ನೋವು–ನಲಿವುಗಳನ್ನು, ಸರಿ–

ತಪ್ಪುಗಳನ್ನು ಕಥನವಾಗಿಯೇ ಪ್ರಮೇಯಗೊಳಿಸುತ್ತವೆ. ರಾಮಾಯಣ–ಮಹಾಭಾರತಗಳು ಮಾತ್ರವಲ್ಲ, ಕನ್ನಡದ ಮಹಾಕಾವ್ಯಗಳ ಸೊಗಸಿರುವುದೇ ಈ ಕಥನಗಾರಿಕೆಯಲ್ಲಿ. ಪಂಪನಿಂದ ಮುದ್ದಣನವರೆಗೂ ಈ ಕ್ರಮ ಹರಿಗಡಿಯುವುದಿಲ್ಲ. ಮತ್ತು ಆಧುನಿಕ ಕಾಲದಲ್ಲಿಯೂ ಕವಿಗಳು ಅಭಿವ್ಯಕ್ತಿಯ ವಿಸ್ತರಣೆಯ ಮಹಾಕಾವ್ಯದೆಡೆಗೆ ಸಾಗಿದಂತೆಲ್ಲ ಇದೇ ಕ್ರಮ ಮುನ್ನಡೆದಿದೆ. ಹಾಗಾಗಿ ಕಥನ ಎನ್ನುವುದನ್ನು ಕೇವಲ ನಿರೂಪಣಾ ವಿಧಾನವಾಗಿ ಅರ್ಥೈಸಿಕೊಳ್ಳುವುದು ಸಾಧ್ಯವಿಲ್ಲ. ಅದು ಹೊರ ಮೈಯಷ್ಟೇ ಅಲ್ಲ. ಅಥವಾ ಅಂತಸ್ಥ ಗುಣಧರ್ಮಗಳಿಲ್ಲದ ಹೊರಮೈ ಎನ್ನುವುದು ಇರುವುದೂ ಇಲ್ಲ.

ಕಥೆ ಯಾಕೆ? ಎಂಬ ಪ್ರಶ್ನೆಯನ್ನು ಮನುಷ್ಯ ಸಂಸ್ಕೃತಿಯಲ್ಲಿ ಕಥನ ಕಲೆಯು ಹುಟ್ಟಿ ಬೆಳೆದು ಬಂದ ತಾತ್ವಿಕ ಕಾರಣವಾಗಿ ನೋಡಬೇಕಿದೆ. ಜಗತ್ತಿನಲ್ಲಿ ಹುಟ್ಟಿ ಬೆಳೆದು ಬಂದ ಎಲ್ಲ ಧರ್ಮಗಳೂ ತಮ್ಮ ಸೈದ್ಧಾಂತಿಕತೆಯ ಪ್ರಸಾರಕ್ಕಾಗಿ, ಜನಮಾಸವನ್ನು ತಲುಪಲಿಕ್ಕಾಗಿ ಕಥನ ಮಾಧ್ಯಮವನ್ನು ಬಳಸಿಕೊಂಡಿವೆ. ಧರ್ಮಕಾರಣವಾಗಿ ಹುಟ್ಟಿದ ಕಥೆಗಳು, ಆ ಗಡಿಯನ್ನು ದಾಟಿ ಕಥನ ಮಾದರಿಯ ಅದ್ವಿತೀಯ ನಿದರ್ಶನಗಳೂ ಆಗಿವೆ. ರಾಮಾಯಣ, ಮಹಾಭಾರತ, ಭಗವದ್ಗೀತೆ, ಪಂಚತಂತ್ರ, ಬುದ್ಧನ ಜಾತಕ ಕಥೆಗಳು, ವಡ್ಡಾರಾಧನೆ, ಕಥಾ ಸರಿತ್ಸಾಗರ, ಬೈಬಲ್ಲಿನ ಹೊಸ ಒಡಂಬಡಿಕೆ ಇಂತಹ ಅಸಂಖ್ಯ ದಾಖಲೆಗಳಿವೆ. ಜನಪದ ಸಾಹಿತ್ಯದಲ್ಲಿ ಮೌಖಿಕವಾಗಿ ಪ್ರಸರಣಗೊಳ್ಳುತ್ತಿದ್ದ ಸ್ಥಳೀಯ ದೈವ ಪುರಾಣಗಳು, ಬದುಕಿನ ಮೌಲ್ಯ ಪ್ರತಿಪಾದನೆ ಮಾಡುವ ನೀತಿಕಥೆಗಳು ಹೀಗೆ ಈ ಎಲ್ಲವೂ –ಆದಿಕಾಲದಿಂದಲೂ ಮನುಷ್ಯ ಸಮಾಜವು ಕಥನವನ್ನು ಸಶಕ್ತ ಪ್ರಕಾರವಾಗಿ ನಂಬಿಕೊಂಡು ಬಂದಿರುವುದರ ಪುರಾವೆಗಳಾಗಿವೆ. ಇವುಗಳಲ್ಲಿ ಇಂದಿಗೂ ಪ್ರಧಾನ ಧಾರೆಯ ವಿಮರ್ಶೆಯ ಓದಿಗೆ ನಿಲುಕದ ಸಾಹಿತ್ಯ ಕಥನಗಳಿವೆ. ಜಿ.ಎನ್.ದೇವಿಯವರು –ಭಾರತೀಯ ಸಾಹಿತ್ಯ ಕಳೆದೆರಡು ಶತಮಾನಗಳಲ್ಲಿ ಪಾಶ್ಚಾತ್ಯ ಮೂಲದ Perspective ಕಲ್ಪನೆಯ ಭಾರದಲ್ಲಿ ನರಳಿದೆ. ಪಾಶ್ಚಾತ್ಯ ಜ್ಞಾನಮಾರ್ಗಗಳು ನಮ್ಮ ಜ್ಞಾನಮಾರ್ಗಗಳ ಸ್ಥಾನವನ್ನು ಆಕ್ರಮಿಸಿಕೊಂಡಿರುವುದರಿಂದ ಆದಿವಾಸೀ ಕಲ್ಪನೆಯೊಂದೇ ವಸಾಹತು ಚಿಂತನಾಕ್ರಮದಿಂದ ಮುಕ್ತವಾಗಿ ಉಳಿದಿದೆ.”[೧] ಎನ್ನುತ್ತಾರೆ. ಜನಪದ ಬದುಕಿನಲ್ಲಿ ರೇಣುಕಾದೇವಿಯ ಕಥೆ –ಅದೆಷ್ಟು ಪರ್ಯಾಯಗಳಲ್ಲಿ ಜನಮಾನಸದಲ್ಲಿ ಬೇರೂರಿದೆ ಎನ್ನುವುದು ಕಥೆಯ ನಿರ್ಮಿತಿ ಮತ್ತು ಪ್ರಸರಣದ ಉದ್ದೇಶವನ್ನು ಸಾಬೀತುಪಡಿಸುತ್ತದೆ. ಕಥೆ ಎನ್ನುವುದು

ಮನರಂಜನೆಯಉದ್ದೇಶದಿಂದ ಮಾತ್ರ ರಚಿತಗೊಂಡಿರಲಿಲ್ಲ ಎನ್ನುವುದಕ್ಕೆ ಜನಪದ ಸಾಹಿತ್ಯದಲ್ಲಿಯೂ ಸಾಕಷ್ಟು ನಿದರ್ಶನಗಳಿವೆ.

"ಕನ್ನಡದಲ್ಲಿ ಸಣ್ಣಕಥೆ ಎಂಬ ಪರಿಭಾಷೆ ಹುಟ್ಟಿಕೊಂಡಿದ್ದು ಇಂಗ್ಲೀಷ ಸಾಹಿತ್ಯ ವಿಮರ್ಶೆಯ ಪರಿಚಯದಿಂದ"[೨]–ಎಂದಿದ್ದಾರೆ ಓ.ಎಲ್.ನಾಗಭೂಷಣಸ್ವಾಮಿ. ಇಂಗ್ಲೀಷಿನಲ್ಲಿ ಕೂಡ ಸಾಹಿತ್ಯದ ಈ ಪ್ರಕಾರವನ್ನು Short Story ಎಂದು ಕರೆದದ್ದು ೧೯ನೆಯ ಶತಮಾನದಲ್ಲಿಯೇ. ಆದರೆ ಇದಕ್ಕೂ ಮೊದಲು ಇಂಗ್ಲೀಷ, ಕನ್ನಡವನ್ನೂ ಸೇರಿಕೊಂಡು ಜಗತ್ತಿನ ಬಹುತೇಕ ಭಾಷೆಗಳಲ್ಲಿ ಇಂತಹ ರಚನೆಗಳು ಬಿಡಿ ಬಿಡಿಯಾಗಿಯೂ, ದೀರ್ಘ ಗದ್ಯದಲ್ಲಿ ಸೇರಿಕೊಂಡೋ ಕಂಡುಬರುತ್ತಿದ್ದವು. ವಿಮರ್ಶಕರ ಪ್ರಕಾರ, ಈಗಾಗಲೇ ದೊರಕಿರುವ ದಾಖಲೆಗಳು –ಪ್ರಪಂಚದ ಅತಿ ಪ್ರಾಚೀನ ಸಣ್ಣಕಥೆ ಈಜಿಪ್ಟ ಭಾಷೆಯ The two brothers. ಇದು ಕ್ರಿಪೂ. ೩೨೦೦ರ ಸುಮಾರಿನದು ಎಂದು ಹೇಳಲಾಗುತ್ತದೆ.

ಸಣ್ಣ ಕಥೆಯ ಸ್ವರೂಪ/ಲಕ್ಷಣವನ್ನು 'ಹೀಗೆಯೇ' ಎಂದು ಖಚಿತಪಡಿಸಿ ಹೇಳುವುದು ಸಾಧ್ಯವಿಲ್ಲ. ಆದರೂ ಅಂತಹ ಪ್ರಯತ್ನಗಳು ನಡೆದಿಲ್ಲ ಎಂದಲ್ಲ. ಮಿಕ್ ಬಾಲ್‌ಳ ಪ್ರಕಾರ, "ಕಥೆಯೆಂದರೆ ಘಟನೆ. ಘಟನೆಯೆಂದರೆ, ವ್ಯಕ್ತಿಗಳ ಬದುಕಿನಲ್ಲಿ ಘಟಿಸಿದ್ದು. ಅವರು ಅನುಭವಿಸಿದ್ದು. ಅವರನ್ನು ಒಂದು ಅವಸ್ಥೆಯಿಂದ ಮತ್ತೊಂದು ಅವಸ್ಥೆಗೆ ಸ್ಥಿತ್ಯಂತರ ಮಾಡಿದ್ದು," ಕಥೆಯನ್ನು 'ಕಥಾ ಪ್ರಬಂಧ' ಎಂದು ಕರೆದ ಚಿಂತಕರಲ್ಲಿ ಬಾರ್ತ್ ಮುಖ್ಯನಾಗಿದ್ದಾನೆ. ಇವನ ಪ್ರಕಾರ– "ಕಥಾ ಪ್ರಬಂಧ ಏನನ್ನೂ ತೋರಿಸುವುದಿಲ್ಲ. ಅದು ಯಾವುದನ್ನೂ ಅನುಕರಿಸುವುದೂ ಇಲ್ಲ. ಅದರ ಕಾರ್ಯ ಒಂದು ದೃಗ್ಗೋಚರ ವಸ್ತುವಿನ ನಿರ್ಮಿತಿ." ಕಥೆಯೆನ್ನುವುದು ವಾಸ್ತವದ ಅಭಿವ್ಯಕ್ತಿ ಎನ್ನುತ್ತಾನೆ ಬಾರ್ತ್. ಸಣ್ಣಕಥೆಯ ಸ್ವರೂಪದ ಆಧಾರದ ಮೇಲೆ ವ್ಯಾಖ್ಯಾನಿಸುವ ಪ್ರಯತ್ನ ಮಾಡಿದವನು ಎಡ್ಗರ್ ಅಲೆನ್ ಪೊ. ಇವನ ಪ್ರಕಾರ ಸಣ್ಣಕಥೆಯೆಂದರೆ, "ಓದಲು ಅರ್ಧಗಂಟೆಯಿಂದ ಒಂದು ಅಥವಾ ಎರಡು ಗಂಟೆಗಳ ಕಾಲ ತೆಗೆದುಕೊಳ್ಳುವ ಸಂಕ್ಷಿಪ್ತವಾದ ಗದ್ಯ ನಿರೂಪಣೆ." ಈತನು ಸಣ್ಣಕಥೆಯು ಸಿಂಗಲ್ ಎಫೆಕ್ಟನ್ನು, ಯೂನಿಟಿ ಆಫ್ ಇಂಪ್ರೆಶನ್‌ನ್ನು ಸಾಧಿಸುವ ಅಗತ್ಯದ ಕಡೆಗೆ ಒತ್ತು ನೀಡುತ್ತಾನೆ. ವಿ.ಎಸ್.ಪ್ರಿಜಿಟ್‌ನ ಪ್ರಕಾರ "ಕಾದಂಬರಿ ಎಲ್ಲವನ್ನೂ ಹೇಳುತ್ತದೆ. ಆದರೆ ಸಣ್ಣಕಥೆಯು ಒಂದನ್ನು ಮಾತ್ರ ಹೇಳುತ್ತದೆ. ಆದರೆ ಈ ಹೇಳಿಕೆಯಲ್ಲಿ ತೀವ್ರತೆಯಿರುತ್ತದೆ." (Bailey, 2000:7) ಅಲೆನ್ ಪೊ ಮತ್ತು ಪ್ರಿಟಿಜ್ ಇವರುಗಳು,

ಸಣ್ಣಕಥೆಯ ಸಂವಿಧಾನ ಶಿಲ್ಪದಲ್ಲಿ ಆಳವಾದ ತೀವ್ರತೆಯು ಇರಬೇಕು ಎಂಬ ವಿಷಯವನ್ನು ಪ್ರತಿಪಾದಿಸಿದಂತೆ ಕಾಣುತ್ತದೆ.

ಸಣ್ಣಕಥೆಯ ಶಿಲ್ಪ, ಸ್ವರೂಪ ಇತ್ಯಾದಿಗಳನ್ನು ಪರಿಗಣಿಸಿ ಅಗಣಿತ ವ್ಯಾಖ್ಯಾನಗಳು ಬರೆಯಲ್ಪಟ್ಟಿವೆ. ಆದರೆ ಈ ಯಾವವೂ ಸಮಗ್ರವಾಗಿ ಸಣ್ಣಕಥೆಯನ್ನು ಪ್ರತಿಪಾದಿಸುವುದು ಸಾಧ್ಯವಾಗಿಲ್ಲ. ಇದು ಸಣ್ಣಕಥೆಗೆ ಮಾತ್ರವಲ್ಲ, ಯಾವುದೇ ಕಲಾ ಪ್ರಕಾರಕ್ಕೂ ಅನ್ವಯವಾಗಬಹುದಾದ ಸಂಗತಿಯಾಗಿದೆ. ಸಣ್ಣಕಥೆ ಎನ್ನುವುದು ಭಾಷೆಯಲ್ಲಿ ಮೈದಳೆಯುವ ಅಭಿವ್ಯಕ್ತಿಯ ಒಂದು ಬಗೆ. ಇದರ ಭಾಷೆ ಸರಳವಾಗಿಯೂ ಪರಿಣಾಮಕಾರಿಯಾಗಿಯೂ ಇರುತ್ತದೆ. ಈ ಸರಳತೆಯಲ್ಲಿಯೇ ಅದೊಂದು ಹೊಸಜಗತ್ತನ್ನು ಸೃಷ್ಟಿಸಬೇಕು. ಆ ಜಗತ್ತು ಸುತ್ತಲ ವಾಸ್ತವಗಳಿಂದಲೇ ಆಯ್ದು ಪೋಣಿಸಿರಬೇಕು. ಫ್ಯಾಂಟಸಿ ಕೂಡ ವಾಸ್ತವದ ಭೂಮಿಕೆಯಲ್ಲಿಯೇ ಅರಳಬೇಕು. ಸಣ್ಣಕಥೆಯ ಮುಖ್ಯ ಗುಣವೇ ಸಂಕ್ಷಿಪ್ತತೆ. ಇದು ಅದರ ನಿರ್ವಹಣಾ ಸವಾಲೂ ಹೌದು. ಹಾಗಾಗಿ ಯಶಸ್ವೀ ಸಣ್ಣಕತೆಯು ಕಥೆಯನ್ನು ಹೇಳುವುದಿಲ್ಲ. ಕಥೆಯನ್ನು ಸೂಚಿಸುತ್ತದೆ. ಈ ಸೂಚನೆಯೇ ಬದುಕಿನ ತಾತ್ವಿಕತೆಯ ಸಂಕೇತವೂ ಆಗಿರುತ್ತದೆ. ಯಾವ ಕಥೆಯು ದೇಶ–ಕಾಲಗಳ ದೂರವನ್ನು ಮೀರಿಯೂ ನೆನಪಿನಲ್ಲಿ ಉಳಿಯುತ್ತದೆಯೋ ಅದು ಇಡಿಯಾಗಿಯೇ ಒಂದು ರೂಪಕದಂತೆ ಇರುತ್ತದೆ. ಹೆನ್ರಿ ಜೆಮ್ಸ್ "ಸಣ್ಣಕಥೆ ಒಂದು ಚಿತ್ರವಾಗಿರುತ್ತದೆ. ಅದರ ಹಿಂದೆ ಒಂದು ವಿಚಾರವಿರುತ್ತದೆ. ಅದು ತನ್ನ ವಿಷಯದ ಸತ್ವವನ್ನು ನಿದರ್ಶಿಸುತ್ತದೆ" ಎಂದು ಹೇಳುವುದು ಇದೇ ವಿಷಯವನ್ನು ಕುರಿತು. ಸಣ್ಣಕಥೆಯ ಕುರಿತು ಮಹತ್ವದ ವ್ಯಾಖ್ಯಾನವನ್ನು ನೀಡಿದವನು ಬೇಟ್ಸ್. 'ಸಣ್ಣಕಥೆ ಮತ್ತು ಸಿನೆಮಾ ಇವು ಒಂದೇ ಕಲೆಯ ಭಿನ್ನ ಅಭಿವ್ಯಕ್ತಿಗಳು' ಎನ್ನುತ್ತಾನೆ. ಈ ಎರಡೂ ಸಚಿತ್ರವೂ, ಸಂಕ್ಷಿಪ್ತವೂ, ತೀವ್ರವೂ, ಒಂದು ಕೇಂದ್ರದ ಉತ್ಕರ್ಷ ಸ್ಥಿತಿಯನ್ನು ಸೂಚಿಸುವಂಥವೂ ಮತ್ತು ಈ ಎಲ್ಲ ಸಾವಯವ ಹೊಂದಾಣಿಕೆಯ ಕಾರಣಕ್ಕಾಗಿಯೇ ಸದಾ ನೆನಪಿನಲ್ಲಿ ಉಳಿಯುವಂಥವು ಎನ್ನುವುದನ್ನು ವಿಮರ್ಶೆ ಸೂಚಿಸುತ್ತದೆ.

ಕಲೆಯ–ಸಾಹಿತ್ಯದ ಯಾವುದೇ ಪ್ರಕಾರಕ್ಕೆ ಸಾರ್ವತ್ರಿಕವಾದ ಮತ್ತು ಸಾರ್ವಕಾಲಿಕವಾದ ಗುಣಲಕ್ಷಣಗಳಿರುತ್ತವೆ. ಹಾಗೆಯೇ ಅವುಗಳಿಗೆ ಸ್ಥಳೀಯವಾದ ಮತ್ತು ಕಾಲಬದ್ಧವಾದ ಗುಣಲಕ್ಷಣಗಳೂ ಇರುತ್ತವೆ. ಈ ಹಿನ್ನೆಲೆಯಲ್ಲಿ ಹೊಸಗನ್ನಡದ ಸಣ್ಣಕಥೆಯ ಸ್ವರೂಪವನ್ನು ಗಮನಿಸಬೇಕಿದೆ.

ಸಣ್ಣಕಥೆ ಎಂಬ ಪ್ರಕಾರವು ಕನ್ನಡದ ನೆಲದಲ್ಲಿ ಮೊಳಕೆಯೊಡೆಯುವ ಸಂದರ್ಭದಲ್ಲಿ, ಸಾಮಾಜಿಕ ಪರಿಸ್ಥಿತಿಯಲ್ಲಿ ಗಮನಾರ್ಹ ಬದಲಾವಣೆಗಳಾಗಿದ್ದವು. ವಸಾಹತುಶಾಹಿಯ ಧರ್ಮ ಪ್ರಸಾರ ಮಾಡುವ ಉದ್ದೇಶ ಎಷ್ಟರ ಮಟ್ಟಿಗೆ ಈಡೇರಿತೋ, ಆದರೆ ಸಂಸ್ಕೃತಿ ಪ್ರಸರಣದ ವಿಷಯ ಮಾತ್ರ ಅನೂಹ್ಯವಾಗಿ ನಡೆಯಿತು. ಶಿಕ್ಷಣ ಪ್ರಸಾರದ ಕಾರಣದಿಂದಾಗಿ ಎರಡು ವಿಭಿನ್ನ ಸಂಸ್ಕೃತಿಗಳಲ್ಲಿ ಒಂದು ಸಂಕರಶೀಲ ಅಧ್ಯಾಯವೇ ಪ್ರಾರಂಭವಾಯಿತು. ವಸಾಹತು ಶಿಕ್ಷಣ ಮತ್ತು ಆ ಮೂಲಕ ದೊರೆತ ಸಾಹಿತ್ಯ-ಕಲೆಗಳ ಸಂಪರ್ಕ, ಸಾವಿರಾರು ವರ್ಷಗಳ ರೂಢಿ ಜಡತೆಯನ್ನು ಕಳಚಿ, ಅಸಮಾನತೆಯ ಮೆಟ್ಟಿಲುಗಳನ್ನು ಉರುಳಿಸಿ, ಸಮ ಸಮಾಜದ ಚಲನೆಯ ಕಡೆಗೆ ಚಿಂತನೆಯನ್ನು ಹರಿಸಿತು. ಮುದ್ರಣ ಯಂತ್ರಗಳು ಮತ್ತು ಸಂಪರ್ಕ ಮಾಧ್ಯಮಗಳು ಪುಸ್ತಕ ಸಂಸ್ಕೃತಿಯನ್ನು ಹುಟ್ಟುಹಾಕಿದವು. ಇಂಗ್ಲೀಷ, ಬೆಂಗಾಲಿ, ಸಂಸ್ಕೃತ ಮೊದಲಾದ ಭಾಷೆಗಳಿಂದ ಅನುವಾದ ಕಾರ್ಯ ಪ್ರಾರಂಭವಾಯಿತು. ಕನ್ನಡದ ಪ್ರಾಚೀನ ಕೃತಿಗಳನ್ನು, ಜನಪದ ಸಾಹಿತ್ಯವನ್ನು ಸಂಗ್ರಹಿಸುವ -ಸಂಪಾದಿಸುವ-ಪ್ರಕಟಿಸುವ-ಚರ್ಚಿಸುವ ಸಾಂಸ್ಕೃತಿಕ ವಿದ್ಯಮಾನಗಳು ಪ್ರಾರಂಭವಾದವು. ೧೮೪೨ರಲ್ಲಿ ಮಂಗಳೂರಿನ ಬಾಸೆಲ್ ಮಿಷನ್ ಮುದ್ರಣಾಲಯವು ಸ್ಥಾಪಿಸಿ ಹೊರತಂದ 'ಮಂಗಳೂರು ಸಮಾಚಾರ್' ಕನ್ನಡದ ಮೊದಲ ಪತ್ರಿಕೆಯಾಗಿತ್ತು. ೧೮೨೧ರಲ್ಲಿ ಡೇನಿಯಲ್ ಸ್ಯಾಂಡರ್‌ಸನ್‌ನು ಪಂಚತಂತ್ರ, ಮಹಾಭಾರತ, ಶಿವಪುರಾಣ, ಮೊದಲಾದ ಗ್ರಂಥಗಳಿಂದ ಕತೆಗಳನ್ನು ಎತ್ತಿಕೊಂಡು ಒಂದು ಕಥಾಸಂಕಲನವನ್ನು ಪ್ರಕಟಿಸಿದನು. ಅದಕ್ಕೆ 'ಕ್ಯಾನರೀಸ್ ಪ್ರೋಸ್' ಎಂದು ಕರೆಯಲಾಗಿತ್ತು. ಇಲ್ಲಿಂದ ಹೊಸಗನ್ನಡದಲ್ಲಿ ಗದ್ಯದ ಬೆಳವಣಿಗೆಯು ತೀವ್ರ ಸ್ವರೂಪವನ್ನು ಪಡೆಯಿತು. ಹೊಸ ಚಿಂತನೆಯನ್ನು, ಹೊಸದನ್ನು ಬರಮಾಡಿಕೊಳ್ಳುವ ಮತ್ತು ಹೊಸದಕ್ಕೆ ಸನ್ನದ್ಧಗೊಳ್ಳುವ ಕಾಲ ಇದಾಗಿತ್ತು.

"ಯುರೋಪಿನಲ್ಲಿ ನಡೆದ ಕೈಗಾರಿಕಾ ಕ್ರಾಂತಿಯ ಬಿಸಿ ಬರೀ ಔದ್ಯೋಗಿಕ ರಂಗದಲ್ಲಷ್ಟೇ ಕಾಣಿಸಿಕೊಳ್ಳದೆ, ಪ್ರತಿಯೊಂದು ರಂಗದಲ್ಲಿಯೂ ತನ್ನ ಗಾಢವಾದ ಪರಿಣಾಮವನ್ನು ಬೀರಿತು. ಅದಕ್ಕೆ ಸಾಹಿತ್ಯಕ್ಷೇತ್ರ ಹೊರತಾಗಲಿಲ್ಲ. ಪಾಶ್ಚಾತ್ಯರ ಭಾರತದ ಆಗಮನ ಮತ್ತು ಆಳ್ವಿಕೆಯಿಂದಾಗಿ ಭಾರತದಲ್ಲಿ ಅದುವರೆಗಿದ್ದ ಸಾಂಸ್ಕೃತಿಕ, ಸಾಹಿತ್ಯಕ ಜೀವನಮೌಲ್ಯಗಳು ಘರ್ಷಣೆಗೊಳಗಾಗಿ ಬದಲಾವಣೆ ಹೊಂದಿದವು. ಪಾಶ್ಚಾತ್ಯರ ಸಂಸ್ಕೃತಿ, ಅಲ್ಲಿನ ಜೀವನ ಮೌಲ್ಯಗಳು, ವ್ಯಕ್ತಿ-ವ್ಯಕ್ತಿಗಳ ನಡುವಿನ ಸಂಬಂಧ, ಗಂಡು ಹೆಣ್ಣಿನ ಮಧ್ಯದ ಸಂಬಂಧಗಳು ನಮ್ಮವರ ಮೇಲೆ ಅಗಾಧ ಪರಿಣಾಮವನ್ನುಂಟು ಮಾಡಿದವು. ಆಂಗ್ಲ

ಸಾಹಿತ್ಯದ ಅಭ್ಯಾಸದಿಂದ ಅಲ್ಲಿನ ಒಳಹೊರಗು ನಮ್ಮ ಸಾಹಿತಿಗಳಿಗೆ ತೆರೆದಿಟ್ಟಂತಾಯಿತು. ಜೀವನದ ಮೌಲ್ಯ ಬದಲಾವಣೆಯ ಪ್ರಜ್ಞಾಶೀಲತೆ ಎಂಥದೋ ಒಂದು ಆವೇಗದ ವಿಚಾರಕ್ಕೆ ಹಾದಿಮಾಡಿಕೊಟ್ಟಿತೆಂದರೆ, ಆಂಗ್ಲರ ಆಳ್ವಿಕೆ-ದಬ್ಬಾಳಿಕೆ-ದಾಸ್ಯತ್ವ-ಗುಲಾಮಗಿರಿ ಮುಂತಾದ ಸ್ವಾತಂತ್ರ್ಯಹೀನತೆಯ ಬಗ್ಗೆ ನಮ್ಮ ಸಾಹಿತಿಗಳ ಅರಿವನ್ನು ಕೆದಕಿತು. ಈ ಕಾರಣದಿಂದ ಸ್ವಾತಂತ್ರ್ಯದ, ವಿಮೋಚನೆಯ ಹಂಬಲ ಸಾಹಿತ್ಯದ ನಾನಾ ಪ್ರಕಾರಗಳಲ್ಲಿ ಒಡಮೂಡತೊಡಗಿತು”[॥೩॥] ಎಂದೂ, ಅದು ಕಥೆಗಳಲ್ಲಿ ಓತಪ್ರೋತವಾಗಿ ಹರಿಯಲಾರಂಭಿಸಿತೆಂದು ಸಾಹಿತ್ಯ ವಿಮರ್ಶಕರು ವಿಶ್ಲೇಷಿಸಿದ್ದಾರೆ.

ಸಣ್ಣಕತೆಯ ಪ್ರಕಾರವು ಇತರ ಸಾಹಿತ್ಯ ಪ್ರಕಾರಗಳ ಜೊತೆ ಜೊತೆಗೆ ಹುಟ್ಟಿ ತನ್ನದೇ ಆದ ಸ್ವತಂತ್ರ ವ್ಯಕ್ತಿತ್ವವನ್ನು ೨೦ನೆಯ ಶತಮಾನದಷ್ಟೊತ್ತಿಗೆ ರೂಪಿಸಿಕೊಂಡಿತ್ತು. ಅಷ್ಟೇ ಅಲ್ಲದೆ, ತುಂಬ ಜನಪ್ರಿಯ ಸಾಹಿತ್ಯ ಪ್ರಕಾರವಾಗಿಯೂ ಬೆಳೆಯತೊಡಗಿ ಇಂದಿಗೂ ತನ್ನ ಅಸ್ಮಿತೆಯನ್ನು ಉಳಿಸಿಕೊಂಡಿದೆ.

**೪.೧ ಆಧುನಿಕ ಸಣ್ಣಕಥೆಗಳ ಉಗಮ-ವಿಕಾಸ:**

ಇಂಗ್ಲೀಷಿನ 'Short Story' ಎಂಬ ಪದಕ್ಕೆ ಸಂವಾದಿಯಾಗಿ ಬಳಕೆಗೊಂಡ 'ಸಣ್ಣಕತೆ' ಎಂಬ ಸಾಹಿತ್ಯ ಪ್ರಕಾರದಲ್ಲಿ ಮೊದಲು ಕಥೆ ಬರೆದವರು ಪಂಜೆ ಮಂಗೇಶರಾಯರು. ೧೯೦೦ರ ಸುಮಾರಿಗೆ 'ಸುವಾಸಿನಿ' ಎಂಬ ಪತ್ರಿಕೆಯಲ್ಲಿ 'ನನ್ನ ಚಿಕ್ಕತಾಯಿ' ಎಂಬ ಕಥೆಯು ಪ್ರಕಟಗೊಂಡು ಕನ್ನಡ ಸಾಹಿತ್ಯದಲ್ಲಿ ಸಣ್ಣಕಥೆಯ ಮೊದಲ ದಾಖಲೆ ಎನಿಸಿತು. ಇವರ ನಂತರ ಕೆರೂರು ವಾಸುದೇವಾಚಾರ್ಯರು, ಎಂ.ಎನ್. ಕಾಮತ, ಮಾಸ್ತಿ ವೆಂಕಟೇಶ ಅಯ್ಯಂಗಾರ, ಎ.ಆರ್. ಕೃಷ್ಣಶಾಸ್ತ್ರಿ, ಕುವೆಂಪು, ಗೋರೂರು ರಾಮಸ್ವಾಮಿ ಐಯ್ಯಂಗಾರ ಮೊದಲಾದವರು ಈ ಬಗೆಯ ಸಣ್ಣಕತೆಗಳನ್ನು ರಚಿಸಿದರು. ಆಧುನಿಕ ಕನ್ನಡ ಕಥಾಸಾಹಿತ್ಯ ಪ್ರಕಾರಕ್ಕೆ ಭದ್ರವಾದ ನೆಲೆಯನ್ನು ಒದಗಿಸಿದರವರು ಮಾಸ್ತಿ ವೆಂಕಟೇಶ ಅಯ್ಯಂಗಾರ್. ೧೯೨೦ರಲ್ಲಿ ಮಾಸ್ತಿಯವರು ತಮ್ಮ ಮೊದಲ ಕಥೆ 'ರಂಗನ ಮದುವೆ' ಪ್ರಕಟಿಸಿದರು. ನಂತರ ಪಶ್ಚಿಮ ಕಥಾ ಸಾಹಿತ್ಯದ ಪ್ರಭಾವಕ್ಕೆ ಒಳಗಾಗಿ ಇಂಥವು ಕನ್ನಡದಲ್ಲಿ ಇಲ್ಲವಲ್ಲ, ಇವು ನಮ್ಮಲ್ಲಿ ಬರಬೇಕೆಂದು ನೂರಾರು ಕಥೆಗಳನ್ನು ಪಾಶ್ಚಿಮಾತ್ಯ ಶೈಲಿಯಲ್ಲಿ ಬರೆದರು.

**೪.೧.೧ ನವೋದಯ ಕಥೆಗಾರರು:**

ಸಾಮಾಜಿಕ, ಐತಿಹಾಸಿಕ, ಪೌರಾಣಿಕ ಹಾಗೂ ರಾಜಕೀಯ ವಸ್ತುಗಳನ್ನಿಟ್ಟುಕೊಂಡು ಕಥೆಗಳನ್ನು ಬರೆದ ಮಾಸ್ತಿಯವರು ತಮ್ಮ 'ನಿಜಗಲ್ಲಿನ ರಾಣಿ', 'ರಂಗಪ್ಪನ ದೀಪಾವಳಿ', 'ರಂಗಪ್ಪನ ಕೋರ್ಟ್‌ಷಿಪ್', 'ವೆಂಕಟರಾಯನ ಪಿಶಾಚ', 'ಅಂಜಪ್ಪನ ಕೋಳಿ', 'ಬಾದಶಾಹನ ದಂಡನೆ', 'ಮೊಸರಿನ ಮಂಗಮ್ಮ', 'ಶಾಮಿಯ ಪ್ರಣಯ' ಮೊದಲಾದ ಕಥೆಗಳ ಮೂಲಕ ಕನ್ನಡ ಕಥಾ ಸಾಹಿತ್ಯಕ್ಕೆ ಹೊಸ ದಿಕ್ಕು ತೋರಿದರು. ಕಥೆ ಬರೆಯುವವರಿಗೆ ಮಾರ್ಗದರ್ಶಿಯಾದರು. ಈ ದಾರಿಯಲ್ಲಿ ಮುನ್ನಡೆದ ಆನಂದ, ಎ.ಆರ್. ಕೃಷ್ಣಶಾಸ್ತ್ರಿ, ನವರತ್ನರಾಮರಾಯ, ಬೆಟಗೇರಿ ಕೃಷ್ಣಶರ್ಮ, ದೇವುಡು, ರಂ.ಶ್ರೀ.ಮುಗಳಿ, ಕುವೆಂಪು, ಪು.ತಿ.ನ. ಗೋರೂರು ರಾಮಸ್ವಾಮಿ ಐಯ್ಯಂಗಾರ್, ಪಡುಕೋಣೆ ರಮಾನಂದರಾಯ, ಕೊಡಗಿನ ಗೌರಮ್ಮ, ಶ್ಯಾಮಲಾದೇವಿ ಮುಂತಾದವರು ನವೋದಯ ಸಾಹಿತ್ಯ ಸಂದರ್ಭದ ಪ್ರಮುಖ ಕಥೆಗಾರರಾಗಿ ಕನ್ನಡ ಕಥಾಸಾಹಿತ್ಯವನ್ನು ಆರಂಭದಲ್ಲಿ ಸಶಕ್ತವಾಗಿ ಬೆಳೆಸಿದರು.

**ಅಜ್ಜಂಪುರ ಸೀತಾರಾಮ (೧೯೦೨-೧೯೮೩):**

ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ ಪರಂಪರೆಯಲ್ಲಿ ಕನ್ನಡ ಸಣ್ಣ ಕಥೆಗಳನ್ನು ಬರೆದವರು 'ಆನಂದ' ಎಂಬ ಕಾವ್ಯನಾಮದ ಅಜ್ಜಂಪುರ ಸೀತಾರಾಮ ಅವರು. ಇವರ ಮೊದಲ ಕಥೆ 'ಭವತಿ ಭಿಕ್ಷಾಂದೇಹಿ'ಯಲ್ಲಿ ಒಬ್ಬ ಬಡಹುಡುಗನ ದುಃಖಮಯ ಜೀವನವನ್ನು ಚಿತ್ರಿಸಿದ್ದಾರೆ. ಇವರದೇ ಆದ 'ನಾನು ಕೊಂದ ಹುಡುಗಿ' ಜನಪ್ರಿಯತೆಯನ್ನು ತಂದುಕೊಟ್ಟ ಕಥೆಯಾಗಿದೆ. ಇವರ 'ಚಂದ್ರಗ್ರಹಣ ಮತ್ತು ಇತರ ಕಥೆಗಳು', 'ಸಂಸಾರ ಶಿಲ್ಪ', 'ಮಾಟಗಾತಿ', 'ಸ್ವಪ್ನ ಜೀವಿ', 'ಜೋಯಿಸರ ಚೌಡಿ' ಮೊದಲಾದವು ಪ್ರಮುಖ ಕಥಾ ಸಂಕಲನಗಳಾಗಿವೆ.

**ಕೆ. ಗೋಪಾಲ ಕೃಷ್ಣರಾವ್ (೧೯೦೬-೧೯೬೭):**

ಜೀವನ ದೃಷ್ಟಿಯಿಂದ ಕೂಡಿದ ಗಂಭೀರ ಕಥೆಗಳನ್ನು ಕಲಾತ್ಮಕವಾಗಿ ಬರೆದಿದ್ದು, ಅವುಗಳಲ್ಲಿ 'ಜಟಕಾ ಸಾಹೇಬ', 'ಮಾಗಡಿ ರಂಗ', 'ಸುಶೀಲಾ ಸಂಕೇತ್' ಪ್ರಮುಖವಾದ ಕಥೆಗಳಾಗಿವೆ. ಇವುಗಳಲ್ಲಿ ಮಾನವ ಸ್ವಭಾವದ ಸುಪ್ತ ಹಿರಿಮೆಯನ್ನು ಕಾಣುತ್ತೇವೆ.

**ಕೂಡವಳ್ಳಿ ಅಶ್ವತ್ಥನಾರಾಯಣರಾವ್ :**

ಬನಾರಸ್ ವಿಶ್ವವಿದ್ಯಾನಿಲಯದಲ್ಲಿ ಸಿವಿಲ್ ಎಂಜಿನಿಯರ್ ರೀಡರ್ ಆಗಿ ಸೇವೆ ಸಲ್ಲಿಸಿದ್ದಾರೆ. ಜೊತೆಗೆ ಕನ್ನಡ ಸಾಹಿತ್ಯದಲ್ಲಿ 'ಜೀವನ', 'ಜಯಂತಿ', 'ನೋವು ನಲಿವು', 'ಅಗ್ನಿಸಾಕ್ಷಿ', 'ಹುಚ್ಚನ ಹೆಂಡತಿ' ಮೊದಲಾದ ಪ್ರಮುಖ ಕಥೆಗಳನ್ನು ರಚಿಸಿದ್ದಾರೆ.

**ಎ.ಆರ್. ಕೃಷ್ಣಶಾಸ್ತ್ರಿ:**

ಇವರು ಮಾಸ್ತಿಯವರ ಪರಂಪರೆಯ ಹಿನ್ನೆಲೆಯಲ್ಲಿ ಬೆಳಗಿದ ಪ್ರಮುಖ ಕಥೆಗಾರರಾಗಿದ್ದಾರೆ. ಬದುಕಿನ ಅಪರಿಹಾರ್ಯವಾದ ನೋವು-ಯಾತನೆ, ದುಃಖ-ದುರಂತ, ವಸಾಹತುಶಾಹಿ ಅನುಭವ ಹೊಸ ವಿದ್ಯಾವಂತ ಅಲೆಮಾರಿ ಮಧ್ಯಮವರ್ಗವೊಂದನ್ನು ಕೇಂದ್ರವಾಗಿರಿಸಿಕೊಂಡು ಅನೇಕ ಕಥೆಗಳನ್ನು ಬರೆದಿದ್ದಾರೆ. ಅವುಗಳಲ್ಲಿ 'ಶ್ರೀಪತಿಯ ಕಥೆಗಳು', 'ದೇವರು ಇದ್ದಾನೆ', 'ಗೋಟಿನಲ್ಲಿ ಸಿಕ್ಕಿಕೊಂಡ ಕತ್ತರಿ' ಪ್ರಮುಖವಾದವುಗಳು. ವಿವಿಧ ಕಾವ್ಯನಾಮಗಳಲ್ಲಿ ಹಲವಾರು ಕಥೆಗಳನ್ನು ಬರೆದು ನಿಯತಕಾಲಿಕೆಗಳಲ್ಲಿ ಪ್ರಕಟಿಸಿದ್ದಾರೆ.

**ಕುವೆಂಪು:**

ಕನ್ನಡ ಸಣ್ಣಕತೆಯ ಪ್ರಕಾರದಲ್ಲಿ ಹೆಚ್ಚು ಕೃಷಿ ಮಾಡದಿದ್ದರೂ ಬರೆದ ಕಥೆಗಳೆಲ್ಲ ಸಹೃದಯರಿಂದ ಮೆಚ್ಚುಗೆಯನ್ನು ಪಡೆದಂತವುಗಳಾಗಿವೆ. 'ನನ್ನದೇವರು', 'ಸನ್ಯಾಸಿ', 'ಧ್ವನ್ವಂತರಿ ಚಿಕಿತ್ಸೆ, 'ಯಾರೂ ಅರಿಯದ ವೀರ' ಮೊದಲಾದವು ಶ್ರೇಷ್ಠ ಕಥೆಗಳಾಗಿವೆ. ನಿಸರ್ಗಪ್ರೀತಿ, ವೈಚಾರಿಕತೆ, ತೀವ್ರ ಸಾಮಾಜಿಕ ಕಾಳಜಿ, ಆಧ್ಯಾತ್ಮಿಕ, ಭಾವನಾತ್ಮಕ ವಿಷಯಗಳನ್ನು, ಬದುಕಿನ ಗಂಭೀರತೆಯನ್ನು ಸಾರುವ ಕಥೆಗಳನ್ನು ಇವರು ರಚಿಸಿದ್ದಾರೆ.

**ಬೇಂದ್ರೆ:**

ಬೇಂದ್ರೆಯವರು ಮಾಸ್ತಿಯವರ ಸಮಕಾಲೀನ ಶ್ರೇಷ್ಠ ಕವಿ ಮಾತ್ರವಲ್ಲ ಕಥೆಗಾರರಾಗಿದ್ದರು. ಮಾಸ್ತಿ ಪರಂಪರೆಯ ಕಥೆಗಳನ್ನು ಪುನರ್ ಸೃಷ್ಟಿಸದೇ ತಮ್ಮದೇ ಆದ ತಾತ್ವಿಕ ಸಂವೇದನೆಯ ಹಿನ್ನೆಲೆಯಲ್ಲಿ ಹೊಸ ಕಥೆಗಳನ್ನು ಹೆಣೆದಿದ್ದಾರೆ. ಅವುಗಳಲ್ಲಿ 'ಪಾಲೂಪೂ', 'ಹಿರಿದಕತ್ತಿ', 'ಏಕಾದಶಿ' ಮೊದಲಾದವು ನವೋದಯ ಕಾಲಘಟ್ಟದಲ್ಲಿ ಪ್ರಮುಖ ಕಥೆಗಳಾಗಿವೆ. ಸಮಾಜದಲ್ಲಾಗುವ ಶೋಷಣೆ, ರಾಜಕೀಯ, ಸಾಮಾಜಿಕ ಅಸಮಾನತೆ, ಜನಪರ ಕಾಳಜಿಯು ಇವರ ಕಥೆಗಳಲ್ಲಿ ಅಡಗಿದೆ.

**೪.೧.೨ ಪ್ರಗತಿಶೀಲ ಕಥೆಗಾರರು:**

ಪ್ರಗತಿಶೀಲ ಪಂಥದ ಹರಿಕಾರರಾದ ಅ.ನ.ಕೃಷ್ಣರಾಯರು ಕನ್ನಡ ಕಥಾ ಸಾಹಿತ್ಯಕ್ಕೆ ಇನ್ನಷ್ಟು ಹೊಸತನ ತುಂಬಿದರು. ಕನ್ನಡದಲ್ಲಿ ಪ್ರಗತಿಶೀಲತೆ ಸಣ್ಣಕತೆ ಮತ್ತು ಕಾದಂಬರಿಯಂತಹ ಕಥಾ ಸಾಹಿತ್ಯದ ಮೂಲಕವೇ ಪ್ರಕಟವಾಯಿತು. ನವೋದಯ ಸಾಹಿತ್ಯದಂತೆ ಪ್ರಗತಿಶೀಲ ಸಾಹಿತ್ಯವು ಕೂಡ ಪಶ್ಚಿಮ ಮತ್ತು ದೇಸೀಯ ತಾತ್ವಿಕ ಸಂವೇದನೆಯ ಹಿನ್ನೆಲೆಯಲ್ಲಿ ರೂಪಿತವಾದ ಒಂದು ಸಾಹಿತ್ಯ ಪಂಥವಾಗಿದೆ. ಪ್ರಗತೀಶೀಲ

ಪಂಥದ ಕಥೆಗಾರರು ಮಾರ್ಕ್ಸ್‌ವಾದ, ಗಾಂಧೀವಾದ, ವಚನಕಾರರ ಸಾಮಾಜಿಕ ಬದ್ಧತೆ, ಕೀರ್ತನಕಾರರ ಸಾಮಾಜಿಕ ಕಳಕಳಿ, ವಾಸ್ತವಪ್ರಜ್ಞೆ, ಮಾನವೀಯತೆ ನೆಲೆಯಲ್ಲಿ ಕಥೆಗಳನ್ನು ಬರೆದಿದ್ದಾರೆ. ಪ್ರಗತಿಶೀಲರ ಸಂಘಟನೆ ಹುಟ್ಟಿಕೊಂಡು ಆ ಸಂಘಟನೆಯಲ್ಲಿ ಅ.ನ.ಕೃ, ನಿರಂಜನ, ಬಸವರಾಜ ಕಟ್ಟೀಮನಿ, ತ.ರಾ.ಸು., ಎಂ.ವಿ. ಇನಾಂದಾರ್, ಕುಮಾರ ವೆಂಕಣ್ಣ, ಅರ್ಚಕ ವೆಂಕಟೇಶ್, ಕೃಷ್ಣಕುಮಾರ್ ಕಲ್ಲೂರ್, ಚದುರಂಗ ಮೊದಲಾದವರು ಪ್ರಗತಿಶೀಲ ಕಥೆಗಾರರಾಗಿದ್ದಾರೆ.

**ಅ.ನ.ಕೃಷ್ಣರಾಯ:**

ಪ್ರಗತಿಶೀಲ ಕಥೆಗಾರರಲ್ಲಿ ಅಗ್ರಗಣ್ಯರಾದ ಅನಕೃ ಅವರು ಪ್ರಮುಖವಾಗಿ ಕಾದಂಬರಿಯ ಸಾರ್ವಭೌಮರಾಗಿದ್ದಾರೆ. ಮಾರ್ಕ್ಸ್‌ವಾದ, ಉದಾರವಾದ ಸಂವೇದನೆಗಳನ್ನು ಹೊಂದಿದ ಇವರ ಕಥೆಗಳಲ್ಲಿ ಪ್ರಮುಖವಾದವುಗಳೆಂದರೆ: 'ಮಣ್ಣಿನ ಮಗ', 'ಅಗ್ನಿಕನ್ನೆ', 'ಮುಗಿಯದ ಕಥೆ'. ಇವೆಲ್ಲವುಗಳಲ್ಲಿ ಜಾತಿಯತೆ, ಹಸಿವು, ಶೋಷಣೆಗಳಂಥ ಮೌಢ್ಯಗಳನ್ನು ವಸ್ತುವನ್ನಾಗಿಸಿಕೊಂಡು ರಚಿಸಿದಂಥವು. ಇದರೊಂದಿಗೆ ಹೆಣ್ಣಿನ ನಿಸ್ವಾರ್ಥತೆ, ದೌರ್ಜನ್ಯಕ್ಕೆ, ತ್ಯಾಗಕ್ಕೆ ಸಂಬಂಧಿಸಿದಂಥವುಗಳಾಗಿವೆ.

**ನಿರಂಜನ:**

ಪ್ರತಕರ್ತರಾಗಿ, ಕಾದಂಬರಿಕಾರರಾಗಿ ಪ್ರಗತಿಶೀಲರಲ್ಲಿ ಪ್ರಮುಖವಾಗಿ ಪ್ರಾತಿನಿಧ್ಯತೆಯನ್ನು ಹೊಂದಿದ ನಿರಂಜನರು ತಮ್ಮ ಕಥೆಗಳಲ್ಲಿ ಹೆಣ್ಣಿನ ಶೋಷಣೆ, ಬಡತನ, ಪಟ್ಟಭದ್ರ ಹಿತಾಸಕ್ತಿಗಳ ಡೊಂಬರಾಟ, ಸಾಮಾಜಿಕ ಅಸಮತೋಲನಗಳ ಕುರಿತ ಸಿಟ್ಟು, ಅಸಹನೆ, ಪ್ರತಿಭಟನೆಯನ್ನು ತೋರಿಸುತ್ತಾರೆ. ಅವರ ಪ್ರಮುಖ ಕಥೆಗಳು: 'ರಕ್ತ ಸರೋವರ', 'ಸಂಧಿಕಾಲ', 'ಕೊನೆಯ ಗಿರಾಕಿ', 'ರಾಷ್ಟ್ರಬಂಧು', 'ಕೆಸರು ಕೊಚ್ಚೆಯ ಕಮಲ', 'ನೀಲೇಶ್ವರದಲ್ಲಿ' ಮೊದಲಾದವುಗಳನ್ನು ನೋಡಬಹುದು.

**ಬಸವರಾಜ ಕಟ್ಟೀಮನಿ:**

ಪ್ರಗತಿಶೀಲ ಕಥೆಗಾರರಲ್ಲಿ ಒಬ್ಬ ಶ್ರೇಷ್ಠ ಕಥೆ, ಕಾದಂಬರಿಕಾರರಾಗಿದ್ದು, ಮಾರ್ಕ್ಸ್‌ವಾದವನ್ನು ಸಮಕಾಲೀನ ಬದುಕಿನ ಹಿನ್ನೆಲೆಯಲ್ಲಿ ತೀವ್ರ ಕಲಾತ್ಮಕವಾಗಿ ನಿರೂಪಿಸುವ ಕಥೆಗಳನ್ನು ಕನ್ನಡ ಸಾಹಿತ್ಯಕ್ಕೆ ನೀಡಿದ್ದಾರೆ. 'ಗಿರಿಜಾ ಕಂಡ ಸಿನಿಮಾ', 'ಬೂಟ್ ಪಾಲಿಷ್', 'ರಕ್ತಧ್ವಜ', 'ನೀಲಗಂಗಾ', 'ನಾಗಪಂಚಮಿಗೆ ಬಂದದ್ದು', 'ಜೀವನ ಕಲೆ', 'ಜೋಳದ ಬೆಳೆಯ ನಡುವೆ', 'ಗುಲಾಬಿ ಹೂ', 'ಸೈನಿಕನ ಹೆಂಡತಿ', 'ಅಗಸ್ಟ್ ಒಂಬತ್ತು' ಮೊದಲಾದವು ಪ್ರಮುಖವಾಗಿವೆ. ಇವರ ಕಥೆಗಳು ಭಾರತ ಸ್ವಾತಂತ್ರ್ಯ ನಂತರದ ಸಾಮಾಜಿಕ

ಜೀವನದ ಅಸ್ತವ್ಯಸ್ತತೆಯನ್ನು ಸಾರುತ್ತವೆ. ಸಮಾಜದ ಅನಿಷ್ಟತೆ, ಅಂಧಕಾರ, ಆಷಾಢಭೂತಿತನ, ಕಾರ್ಮಿಕನ ಬದುಕು, ಬಡವನ ಹಸಿವು, ದಾರಿದ್ರ್ಯದ ನಡುವೆಯು ಜೀವನ ಪ್ರೀತಿಯನ್ನು ತೋರುತ್ತವೆ.

**ಚದುರಂಗ:**

ಚದುರಂಗರು ಪ್ರಗತಿಶೀಲ ಸಾಹಿತ್ಯದಲ್ಲಿ ಒಬ್ಬ ಪ್ರತಿಭಾವಂತ ಮತ್ತು ಸತ್ವಯುತ ಕಥೆಗಾರರಾಗಿದ್ದಾರೆ. 'ಸ್ವಪ್ನಸುಂದರಿ', 'ಇಣುಕು ನೋಟ', 'ಶವದ ಮನೆ', 'ಮೀನಿನ ಹೆಜ್ಜೆ', 'ಬಂಗಾರದ ಗೆಜ್ಜೆ' ಕಥೆಗಳಲ್ಲಿ ವಾಸ್ತವ ಜಗತ್ತಿನ ಭ್ರಷ್ಟತೆ, ಬಡವರ ಅಸಹಾಯಕತೆ, ಜಡತೆ, ನಮ್ಮ ಸಮಾಜಿಕ ವ್ಯವಸ್ಥೆ ಮಾನವ ಸಂಬಂಧಗಳು ಹೇಗೆ ಅಮಾನವೀಯ, ಅಸೂಕ್ಷ್ಮ, ಭ್ರಷ್ಟತೆ, ಕ್ರೂರತೆಯಿಂದ ಕೂಡಿವೆ ಎಂಬುದನ್ನು ಅಭಿವ್ಯಕ್ತಪಡಿಸುತ್ತವೆ. ಇವರ ಕಥೆಯ ಪಾತ್ರಗಳಲ್ಲಿ ಹಳ್ಳಿಯ ಮುಗ್ಧತೆ, ಪ್ರಾಮಾಣಿಕತನ, ಪರೋಪಕಾರಿ, ಉದಾತ್ತತನ, ಕುರುಡು ನಂಬಿಕೆ, ಕ್ರಾಂತಿಕಾರಿಕ ಮನೋಭಾವವು ವ್ಯಕ್ತವಾಗಿದೆ.

ಇವರಲ್ಲದೆ ಗೋವಿಂದಮೂರ್ತಿ ದೇಸಾಯಿ, ಎಂ.ವ್ಯಾಸ, ಜಯತೀರ್ಥ ರಾಜಪುರೋಹಿತ, ಅಶ್ವತ್ಥ, ತ.ರಾ.ಸುಬ್ಬರಾವ್ (ರೂಪಸಿ, ಗಿರಿಮಲ್ಲಿಗೆಯ ಸ್ಪಂದನದಲ್ಲಿ), ಕೋ.ಚೆನ್ನಬಸಪ್ಪ (ಮುಕ್ಕಣ್ಣನ ಮುಕ್ತಿ), ಶ್ರೀವರಗಿರಿ (ದ್ಯಾಮಕೆಂಚಿ), ಎಸ್. ಅನಂತನಾರಾಯಣ (ಮಾನವ ಪ್ರೇಮ), ಶ್ರೀಮತಿ ಅನುಪಮಾ ನಿರಂಜನ (ದೇವರೇ ಬರಲಿಲ್ಲ), ಮಿರ್ಜಿ ಅಣ್ಣಾರಾಯ (ನಮ್ಮೂರ ನಾಯಕರು), ಸದಾಶಿವ (ನಲ್ಲಿಯಲ್ಲಿ ನೀರು ಬಂದಿತು) ಮೊದಲಾದವರು ಈ ಕಾಲಘಟ್ಟದಲ್ಲಿ ಕಥೆಗಳನ್ನು ಬರೆದಿದ್ದಾರೆ. ಅವರ ಇಡೀ ಬರವಣಿಗೆಯ ಹಿನ್ನೆಲೆಯಲ್ಲಿ ಪ್ರಮುಖವಾಗಿ ವಾಸ್ತವವಾದ, ಆಡುಮಾತಿನ ಸರಳ ಭಾಷೆ, ಸಾಮಾನ್ಯ ಮನುಷ್ಯನ ಕಷ್ಟ-ಸುಖಗಳು, ಪ್ರತಿಭಟನೆ, ಬಡವ-ಶ್ರೀಮಂತರ ನಡುವಿನ ಅಂತರ, ಸ್ತ್ರೀಯರ ಶೋಷಣೆ, ಕಾಮ-ಪ್ರೇಮಗಳ ವೈಪರಿತ್ಯ, ರೈತನ ನೋವು-ನಲಿವು, ಕೌಟುಂಬಿಕ ಕಲಹಗಳು ಹೀಗೆ ಅನೇಕ ಸಾಮಾಜಿಕ ಚಿಂತನಗಳನ್ನು ಕಥೆಗಳಲ್ಲಿ ಹೊರಹಾಕಿದ್ದಾರೆ.

**೪.೧.೩ ನವ್ಯ ಕಥೆಗಾರರು:**

ವಿ.ಕೃ. ಗೋಕಾಕರಿಂದ ಆರಂಭಗೊಂಡ ನವ್ಯಕಾವ್ಯ ಪರಂಪರೆ ಗೋಪಾಲಕೃಷ್ಣ ಅಡಿಗರಿಂದ ಗಟ್ಟಿಗೊಂಡು ಮುಂದುವರಿಯಿತು. ಕಾವ್ಯದಲ್ಲಿ ಹೇಗೋ ಹಾಗೆಯೇ ಕಥಾಸಾಹಿತ್ಯ ಪರಂಪರೆಯಲ್ಲಿಯೂ 'ನವ್ಯತೆ' ತಲೆದೋರಿತು. ನವ್ಯ ಕಥೆಗಾರರು ಮನಃಶಾಸ್ತ್ರೀಯ ಹಿನ್ನೆಲೆಯಲ್ಲಿ ಮನುಷ್ಯ ಜೀವನದ ದ್ವಂದ್ವ ವೈರುಧ್ಯಗಳನ್ನು ಕಥೆಗಳಲ್ಲಿ

ಅಭಿವ್ಯಕ್ತಪಡಿಸುತ್ತಾರೆ. ನವ್ಯ ಕತೆಗಳು ತಮ್ಮ ಸತ್ವದಿಂದಲೇ ಹೊಸ ಓದುಗರನ್ನು, ವಿಮರ್ಶಕರನ್ನು ತಮ್ಮತ್ತ ಸೆಳೆದುಕೊಂಡವು. ಈ ಪಂಥದಲ್ಲಿ ಯು.ಆರ್. ಅನಂತಮೂರ್ತಿ, ಶಾಂತಿನಾಥ ದೇಸಾಯಿ, ಯಶವಂಥ ಚಿತ್ತಾಲ, ಕೆ.ಪಿ. ಪೂರ್ಣಚಂದ್ರ ತೇಜಸ್ವಿ, ಗಿರಡ್ಡಿ ಗೋವಿಂದರಾಜ, ಪಿ. ಲಂಕೇಶ, ಚಂದ್ರಶೇಖರ ಕಂಬಾರ, ಆಲನಹಳ್ಳಿ ಕೃಷ್ಣ, ವೈದೇಹಿ, ದೇವನೂರು ಮಹದೇವ, ಮೊದಲಾದವರನ್ನು ಹೆಸರಿಸಬಹುದು.

**ಯು.ಆರ್. ಅನಂತಮೂರ್ತಿ:**

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಯು.ಆರ್. ಅನಂತಮೂರ್ತಿ ಅವರು ಒಬ್ಬ ಮಹತ್ವದ ಕಥೆಗಾರರು. ಅವರ ಅನೇಕ ಬರಹಗಳಿಗೆ ಪಶ್ಚಿಮ ಮತ್ತು ದೇಶೀಯ ಸಂವೇದನೆಯ ಪ್ರಭಾವವನ್ನು ಕಾಣುತ್ತೇವೆ. ಗಾಂಧೀಜಿ, ಲೋಹಿಯಾ, ಪೆರಿಯಾರ್, ಮಾರ್ಕ್ಸ್, ಟಿ.ಎಸ್. ಎಲಿಯೆಟ್, ಎಫ್.ಆರ್. ಲೀವೀಸ್, ಪ್ರಾಯ್ಡ್, ಕಾಫ್ಕ, ಕಾಮು, ಬ್ರೆಕ್ಟ್, ರಿಚರ್ಡ್ಸ್, ಕೀಟ್ಸ್, ಅರ್ನಾಲ್ಡ್ ಮೊದಲಾದ ಭಾರತೀಯ ಮತ್ತು ಪಾಶ್ಚಾತ್ಯ ಬರಹಗಾರರ ಕೃತಿಗಳ ಓದನ್ನು ಭಾರತೀಯ ಪರಂಪರೆಯ ಸಂವೇದನೆಯ ಹಿನ್ನೆಲೆಯಲ್ಲಿ ಬಳಸಿಕೊಂಡಿದ್ದಾರೆ. ಅವರ ಮೊದಲ ಕಥೆ 'ಎಂದೆಂದೂ ಮುಗಿಯದ ಕಥೆ', ಆನಂತರ ಬಂದ 'ಕವಿಯ ಪೂರ್ಣಿಮೆ', 'ಕಾರ್ತಿಕ', 'ಪ್ರಸ್ತ', 'ಘಟಶ್ರಾದ್ಧ', 'ಸೂರ್ಯನ ಕುದುರೆ', 'ಮೌನಿ', 'ಕ್ಲಿಪ್ ಜಾಯಿಂಟ್', 'ಆಕಾಶ ಮತ್ತು ಬೆಕ್ಕು', 'ಆಕ್ರಮಣ', 'ನವಿಲುಗಳು' ಮೊದಲಾದ ಕಥೆಗಳು ಜನಪ್ರಿಯತೆಯನ್ನು ಪಡೆದಿವೆ.

**ಯಶವಂತ ಚಿತ್ತಾಲ:**

ಇವರು ಆಧುನಿಕ ಕನ್ನಡ ಸಾಹಿತ್ಯದ ಒಬ್ಬ ಸತ್ವಯುತ ಗದ್ಯ ಬರಹಗಾರರಾಗಿದ್ದಾರೆ. ಮಾರ್ಕ್ಸ್, ಲೋಹಿಯಾ, ಪ್ರಾಯ್ಡ್, ಎಲಿಯೆಟ್, ಕಾಮು ಮೊದಲಾದ ಪಾಶ್ಚಿಮಾತ್ಯ ಲೇಖಕರ ಸೈದ್ಧಾಂತಿಕ ನಿಲುವುಗಳನ್ನು ಇವರೂ ಕಥೆಗಳಲ್ಲಿ ತೋರಿದ್ದಾರೆ. ಭಾರತ ಸ್ವಾತಂತ್ರ್ಯ ನಂತರದ ಸಮಕಾಲೀನ ಬದುಕಿನ ಸಂವೇದನೆಯ ಹಿನ್ನೆಲೆಯಲ್ಲಿ ಅವರು ಬದುಕು-ಬರಹವು ರೂಪಿತವಾಗಿದೆ. ಅವರ ಮೊದಲ ಕಥೆ 'ಪಾರೂ' ಆನಂತರ ಬಂದ 'ಸೆರೆ', 'ಕತೆಯಾದಳು ಹುಡುಗಿ', 'ಬೀಗ ಮತ್ತು ಬೀಗದಕೈ', 'ಆಬೋಲೀನ', 'ಖಾಲಿಕೋಣೆ' ಮೊದಲಾದವು ಶ್ರೇಷ್ಠ ಕಥೆಗಳಾಗಿವೆ.

**ಪಿ. ಲಂಕೇಶ:**

ಆಧುನಿಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಪಿ.ಲಂಕೇಶ್ ಅವರು ಒಬ್ಬ ಅಪರೂಪದ ಸತ್ವಯುತ ಕವಿ, ಕಥೆ-ಕಾದಂಬರಿಕಾರರಾಗಿ, ನಾಟಕಕಾರರಾಗಿ, ವಿಮರ್ಶಕರಾಗಿ, ಪತ್ರಿಕಾ

ಸಂಪಾದಕರಾಗಿ ಅಮೂಲ್ಯವಾದ ಸೇವೆಯನ್ನು ಸಲ್ಲಿಸಿದ್ದಾರೆ. ತಾತ್ವಿಕ ಮತ್ತು ಸೃಜನೇತರ ಬರಹಗಳ ಮೂಲಕ ತಮ್ಮನ್ನು ರೂಪಿಸಿಕೊಂಡಿದ್ದರು. 'ಕೆರೆಯ ನೀರನ್ನು ಕೆರೆಗೆ ಚೆಲ್ಲಿ', 'ನಾನಲ್ಲ', 'ಉಮಾಪತಿಯ ಸ್ಕಾಲರ್‌ಶಿಪ್‌ಯಾತ್ರೆ', 'ಕಲ್ಲುಕರಗುವ ಸಮಯ', 'ಉಲ್ಲಂಘನೆ' ಮೊದಲಾದವು ಅವರ ಶ್ರೇಷ್ಠ ಕಥೆಗಳಾಗಿವೆ. ಇವುಗಳಲ್ಲಿ ಸ್ತ್ರೀಶೋಷಣೆ, ಅಸಮಾನತೆ, ಹಿಂಸೆ, ಅಸ್ಪೃಶ್ಯತೆ, ಲಿಂಗಭೇದ, ಮೋಸ-ವಂಚನೆ, ಮೂಢನಂಬಿಕೆ ಇವೇ ಮೊದಲಾದ ಸಾಮಾಜಿಕ ಪಿಡುಗುಗಳನ್ನು ಕಥೆಗಳ ಮೂಲಕ ಪ್ರತಿಭಟಿಸುತ್ತಾರೆ.

**ಪೂರ್ಣಚಂದ್ರ ತೇಜಸ್ವಿ:**

ಸ್ವಾತಂತ್ರೋತ್ತರ ಕನ್ನಡ ಸಾಹಿತ್ಯದಲ್ಲಿ ಪೂರ್ಣಚಂದ್ರ ತೇಜಸ್ವಿ ಅವರದ್ದು ಒಂದು ಮಹತ್ವದ ಹೆಸರು. ಇವರು ನವ್ಯ, ದಲಿತ-ಬಂಡಾಯ ಸಾಹಿತ್ಯ ಸಂವೇದನೆಗಳೆರಡನ್ನೂ ಮೈಗೂಡಿಸಿಕೊಂಡು ಅರಳಿದ ಒಬ್ಬ ಸತ್ವಶೀಲ ಕಥೆಗಾರರಾಗಿದ್ದಾರೆ. ವಿಚಾರ-ವಿಮರ್ಶೆ, ಪ್ರಾಕೃತಿಕ, ವೈಜ್ಞಾನಿಕ ಬರಹಗಾರರಾಗಿ ವಿಶಿಷ್ಟವಾದ ಸಾಹಿತ್ಯವನ್ನು ಕನ್ನಡ ಸಾಹಿತ್ಯಕ್ಕೆ ನೀಡಿದ್ದಾರೆ. ಪಶ್ಚಿಮದ ನವ್ಯ ಸಾಹಿತ್ಯ ಮತ್ತು ದೇಸಿಯ ಸ್ವಾತಂತ್ರ್ಯೋತ್ತರ ಬದುಕು, ಸಾಮಾಜಿಕ ನೆಲೆ ಬರವಣಿಗೆಯಲ್ಲಿ ನಿರ್ದೇಶಿತವಾಗುತ್ತದೆ. ಅವರ ಕಥೆಗಳಲ್ಲಿ 'ಹುಲಿಯೂರಿನ ಸರಹದ್ದು' 'ಲಿಂಗ ಬಂದ', 'ಪಂಜ್ರೋಳ್ಳಿ ಪಿಶಾಚಿಯ ಸವಾಲು', 'ಗುಡುಗು ಹೇಳಿದ್ದೇನು', 'ಅಬಚೂರಿನ ಪೋಸ್ಟಾಫೀಸು', 'ತ್ಯಕ್ತ', 'ಅವನತಿ', 'ತಬರನ ಕಥೆ', 'ಡೇರ್ ಡೆವಿಲ್ ಮುಸ್ತಾಫ' 'ತುಕ್ಕೋಜೀ' ಮೊದಲಾದವು ಶ್ರೇಷ್ಠ ಕಥೆಗಳಾಗಿವೆ.

ಇವರಲ್ಲದೇ ನವ್ಯ ಕಥಾ ಸಾಹಿತ್ಯದ ಉತ್ತಮ ಅಂಶಗಳನ್ನು ಇನ್ನಷ್ಟು ವಿಸ್ತರಿಸಲು ಬರೆಯತೊಡಗಿದ ಬಿ.ಸಿ. ರಾಮಚಂದ್ರಶರ್ಮ (ಮಂದಾರ ಕುಸುಮ, ಕೊಡತಿ ಹುಟ್ಟು), ಶಾಂತಿನಾಥ ದೇಸಾಯಿ (ಕ್ಷಿತಿಜ, ಮಂಜುಗಡ್ಡೆ), ಕ.ವೆಂ. ರಾಜಗೋಪಾಲ (ಅನಾಥ ಮೇಸ್ಟರ ಸ್ವರ್ಗ ಸಂಪ್ರದಾಯ), ರಾಘವೇಂದ್ರ ಖಾಸನೀಸ (ಮೋನಾಲಿಸ), ಎ.ಕೆ. ರಾಮಾನುನ್ (ಅಣ್ಣಯ್ಯನ ಮಾನವಶಾಸ್ತ್ರ), ಚಂದ್ರಶೇಖರ್ ಕಂಬಾರ (ಕುಂಬಳಕಾಯಿ, ಸಂಪಿಗೆ ರಾಣಿ, ನಾರ್ಸಿಸಸ್), ಶ್ರೀಕೃಷ್ಣ ಆಲನಹಳ್ಳಿ (ಸಂಬಂಧ), ರಾಜಶೇಖರ ನೀರಮಾನ್ವಿ (ಹಂಗಿನರಮನೆಯ ಹೊರಗೆ) ವೈದೇಹಿ (ಗುಲಾಬಿ ಮೃದು ಪಾದಗಳು), ವೀಣಾ ಶಾಂತೇಶ್ವರ (ಕೊನೆಯ ದಾರಿ), ಜಯಂತ್ ಕಾಯ್ಕಿಣಿ, ಕೇಶವ ಮಳಗಿ, ಅಬ್ದುಲ್ ರಷೀದ್, ವಿವೇಕ ಶಾನಭಾಗ ಮುಂತಾದವರನ್ನು ಹೆಸರಿಸಬಹುದು. ಇವರೆಲ್ಲ ಕಥೆಗಳಲ್ಲಿ ಅಸಮಾನತೆ, ಶೋಷಣೆ, ಹಿಂಸೆ, ಅಸ್ಪೃಶ್ಯತೆ, ಅನ್ಯಾಯ, ಮೂಢನಂಬಿಕೆ, ಮೋಸ-ವಂಚನೆ, ನಂಬಿಕೆಗಳು, ಕುಟುಂಬ ವಿಘಟನೆ, ಏಕಾಂಗಿತನ, ನಿರುದ್ಯೋಗ, ಅಹಿಂಸೆ, ರಾಜಕೀಯ ಬೂಟಾಟಿಕೆ,

ಕಾಮ–ಪ್ರೇಮ, ಪ್ರಕೃತಿ–ಸಮಾಜ, ಬಡತನ, ಶ್ರೀಮಂತಿಕೆ, ಹಸಿವು, ಸಾಂಸ್ಕೃತಿಕ–ಧಾರ್ಮಿಕ ಸಂಘರ್ಷಗಳನ್ನು ಅಭಿವ್ಯಕ್ತಪಡಿಸುತ್ತವೆ.

**೪.೧.೪ ದಲಿತ–ಬಂಡಾಯ–ಪ್ರತಿಭಟನಾ ಸಾಹಿತ್ಯದ ಕಥೆಗಾರರು:**

ಸಾಹಿತ್ಯದಲ್ಲಿ ಪ್ರತಿಭಟನೆಯು ೬–೭ ಶತಮಾನಗಳ ವರೆಗೆ ಗುಪ್ತವಾಗಿ ಹರಿದು ಕ್ರಮೇಣ ಅದೊಂದು ಪ್ರಧಾನ ದನಿಯಾಗಿ ಆವಿರ್ಭವಿಸಿದ್ದು ಸಾಹಿತ್ಯಲೋಕದ ಐತಿಹಾಸಿಕ ಘಟನೆಯಾಗಿದೆ. ಹನ್ನೊಂದನೆಯ ಶತಮಾನದಲ್ಲಿ ಶರಣರು, ವಚನಕಾರರು ಮಾಡಿದ ಬಂಡಾಯವೇ ೨೦ನೆಯ ಶತಮಾನದ ಕೊನೆಯಲ್ಲಿ ಸಿಡಿದೆದ್ದಿತು. ಸಮಾಜದಲ್ಲಿ ಧರ್ಮ, ಜಾತಿ, ಕುಲ, ಗೋತ್ರ, ಬಣ್ಣ, ವೃತ್ತಿ, ಶ್ರೀಮಂತಿಕೆ ಮೊದಲಾದವುಗಳನ್ನು ಆಧರಿಸಿ ಅಸಮಾನತೆಯಿಂದ ಕೆಲವು ಮೇಲ್ವರ್ಗದವರು ಕೆಳವರ್ಗದವರನ್ನು ಶೋಷಣೆಗೆ ಒಳಪಡಿಸುತ್ತಲೇ ಬಂದರು. ಇದರ ವಿರುದ್ಧ ಮನಸ್ಸಿನಲ್ಲಿ ಮೂಡಿದ ಎಚ್ಚರ, ಜ್ಞಾನವೇ ಸಾಹಿತ್ಯದಲ್ಲಿ ಬಂಡಾಯಕ್ಕೆ, ಪ್ರತಿಭಟನೆಗೆ ಕಾರಣವಾಯಿತು. ಮರಾಠಿ ಭಾಷೆಯಲ್ಲಿ ಮೊದಲು ಆರಂಭವಾದ ಸಾಮಾಜಿಕ ಸಮಾನತೆಯನ್ನು ಸಾರುವ ಬರಹಗಳು ಕನ್ನಡದ ಲೇಖಕರನ್ನು ಆಕರ್ಷಿಸಿದವು. ಸಾಮಾಜಿಕ ಪ್ರಜ್ಞೆ ಹಾಗೂ ದೀನದಲಿತರ ಜೀವನಕ್ಕೆ ಸ್ಪಂದಿಸುವ ಆಶಯವುಳ್ಳ ಇಂಥ ಸಾಹಿತ್ಯವನ್ನು 'ದಲಿತ–ಬಂಡಾಯ' ವೆಂದು ಗುರುತಿಸಲಾಗಿದೆ. ದಲಿತ ಬಂಡಾಯ ಕಥಾ ಸಾಹಿತ್ಯ ಪರಂಪರೆಯಲ್ಲಿ ಬಹುಮುಖ್ಯ ಲೇಖಕರೆಂದು ದೇವನೂರು ಮಹದೇವ, ಬರಗೂರು ರಾಮಚಂದ್ರಪ್ಪ, ಅರವಿಂದ ಮಾಲಗತ್ತಿ, ಬೆಸಗರಹಳ್ಳಿ ರಾಮಣ್ಣ, ಮೊಗಳ್ಳಿ ಗಣೇಶ, ಕುಂ. ವೀರಭದ್ರಪ್ಪ, ಡಾ. ಸಿದ್ಧಲಿಂಗಯ್ಯ, ಬಿ.ಟಿ. ಲಲಿತಾ ನಾಯಕ, ಗೀತಾ ನಾಗಭೂಷಣ, ಕಾಳೇಗೌಡ ನಾಗಾವಾರ, ಕರೀಗೌಡ ಬೀಚನಹಳ್ಳಿ, ಶಂಕರ ಕಟಗಿ, ಅಮರೇಶ ನುಗಡೋಣಿ, ಬೋಳುವಾರು ಮಹಮ್ಮದ್ ಕುಂಞ, ಫಕೀರ ಮಹಮ್ಮದ ಕಟ್ಪಾಡಿ ಮೊದಲಾದವರನ್ನು ಹೆಸರಿಸಬಹುದು.

**ದೇವನೂರು ಮಹಾದೇವ:**

ಆಧುನಿಕ ಕನ್ನಡ ಸಾಹಿತ್ಯದಲ್ಲಿ ದೇವನೂರು ಮಹಾದೇವರು ಒಬ್ಬ ಸತ್ವಯುತ ಕಥೆ–ಕಾದಂಬರಿಕಾರರಾಗಿದ್ದಾರೆ. ಅವರು ದಲಿತ ಕುಟುಂಬದಿಂದ ಬಂದು ದಲಿತರು ಶತಶತಮಾನಗಳಿಂದ ಅನುಭವಿಸುತ್ತ ಬಂದ ನೋವು, ಶೋಷಣೆ, ಕೊಲೆ, ಹತ್ಯೆ, ಅತ್ಯಾಚಾರ, ಹಸಿವು, ನಿರುದ್ಯೋಗ, ಮೂಢನಂಬಿಕೆ, ಅಸ್ಪೃಶ್ಯತೆ, ನಿಂದನೆ, ಪುರೋಹಿತಶಾಹಿಗಳ ದಬ್ಬಾಳಿಕೆ, ಜೀತ ಇವೇ ಮೊದಲಾದ ಮೌಢ್ಯಗಳನ್ನು ಪ್ರತಿಭಟಿಸಿ ಕಥೆಗಳಲ್ಲಿ ಅಭಿವ್ಯಕ್ತಿಸಿದ್ದಾರೆ. ಮೇಲ್ವರ್ಗದವರು ಕೆಳವರ್ಗದವರನ್ನು ನೋಡುವ ಬಗೆ, ದೌರ್ಜನ್ಯ, ರಾಜಕೀಯ ಹಿನ್ನಡೆ,

ಅಂತರ್ ಜಾತಿಯ ವಿವಾಹ ಮೊದಲಾದವುಗಳನ್ನು ಪ್ರಧಾನವಾಗಿ ಮುಖಾಮುಖಿಗೊಳಿಸುತ್ತಾರೆ. 'ಮಾರಿಕೊಂಡವರು', 'ಗ್ರಸ್ತ', 'ಡಾಂಬರು ಬಂದುದು', 'ಮೂಡಲ ಸಿಮೇಲಿ ಕೊಲೆಗಿಲೆ ಮುಂತಾಗಿ', 'ಅಮಾಸ', 'ದ್ಯಾವನೂರು', 'ಒಡಲಾಳ' ಮೊದಲಾದ ಕಥೆಗಳು ಕನ್ನಡ ಸಾಹಿತ್ಯದಲ್ಲಿ ಬಂಡಾಯದ, ಪ್ರತಿಭಟನೆಯ ರೂಪಕಗಳಾಗಿವೆ.

**ಕುಂ. ವೀರಭದ್ರಪ್ಪ:**

ದಲಿತ-ಬಂಡಾಯ ಸಂವೇದನೆಯ ಕಥೆಗಾರರಲ್ಲಿ ಪ್ರಮುಖರು. ಇವರ ಮೊದಲ ಕಥೆ 'ಕಪ್ಪು' ೧೯೮೧ರಲ್ಲಿ ಪ್ರಕಟವಾಯಿತು. ಆನಂತರ ಬರೆದ 'ಇನ್ನಾದರೂ ಸಾಯಬೇಕು'. 'ಡೋಮ ಮತ್ತಿತರ ಕಥೆಗಳು', 'ಭಗವತಿ ಕಾಡು', 'ಅಪೂರ್ವ ಚಿಂತಾಮಣಿ ಕಥೆ', 'ಬೇಲಿ ಮತ್ತು ಹೊಲ', 'ಕೊಟ್ರೇಶಿ ಕನಸು', 'ಕೊಟ್ರ ಹೈಸ್ಕೂಲಿಗೆ ಸೇರಿದ್ದು' ಅವರು ತಮ್ಮ ಸಮಗ್ರ ಕಥೆಗಳನ್ನು 'ಕುಂ. ವೀ. ಕಥೆಗಳು' ಎಂಬ ಸಂಕಲದಲ್ಲಿ ಪ್ರಕಟಿಸಿದ್ದಾರೆ. ಇವರ ಕಥೆಗಳಲ್ಲಿ ದಟ್ಟವಾದ ಬಡವನ ಶೋಷಣೆ, ಹಸಿವು, ಕ್ರೌರ್ಯ, ದೌರ್ಜನ್ಯ, ಅನ್ಯಾಯ, ಜಮೀನ್ದಾರಿಕೆಯ ದರ್ಪ, ಜೀತಪದ್ಧತಿ ಮೊದಲಾದ ಸಂಕೀರ್ಣ ಸಮಸ್ಯೆಗಳನ್ನು ಅನಾವರಣಗೊಳಿಸುತ್ತವೆ. ಹೀಗಾಗಿ ಇವರ ಕಥಾ ಸಾಹಿತ್ಯವು ಪ್ರತಿಭಟನೆ ಮತ್ತು ಕಲಾತ್ಮಕತೆಗಳೆರಡನ್ನೂ ಒಳಗೊಂಡಿವೆ.

**ಮೊಗಳ್ಳಿ ಗಣೇಶ್:**

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಮೊಗಳ್ಳಿ ಗಣೇಶ್ ಅವರು ಹೊಸ ತಲೆಮಾರಿನ ಒಬ್ಬ ಸತ್ವಯುತ ಕಥೆಗಾರರಾಗಿದ್ದಾರೆ. ತೀವ್ರ ಎಡಪಂಥೀಯ ಸಂವೇದನೆಯ ಹಿನ್ನೆಲೆಯಲ್ಲಿ ದಲಿತ ಬದುಕನ್ನು ತೆರೆದ ಮನಸ್ಸಿನಿಂದ ಅನಾವರಣ ಮಾಡುತ್ತಾರೆ. ಪರಂಪರೆಯ ನಂಬಿಕೆ, ಆಚಾರ, ವಿಚಾರ, ಹಬ್ಬ, ಮೂಢನಂಬಿಕೆ, ಸಂಪ್ರದಾಯವಾದಿಗಳ ಖಂಡನೆ, ನಿರುದ್ಯೋಗ, ಹಸಿವಿನ ಹಾಹಾಕಾರ, ಅವಿಭಕ್ತ ಕುಟುಂಬದ ಸಮಸ್ಯೆ, ದಲಿತರ ಶೋಷಣೆ, ಅಬಲೆಯರ ಮೇಲಿನ ಅತ್ಯಾಚಾರಗಳನ್ನು ಪ್ರತಿಭಟಿಸುತ್ತಾರೆ. ಇವರ 'ಒಂದು ಹಳೇ ಚಡ್ಡಿ', 'ನಾದದ ನದಿಯೊಂದು ನಡೆದಾಂಗೆ', 'ಬತ್ತ', 'ನನ್ನಜ್ಜನಿಗೊಂದು ಆಸೆಯಿತ್ತು', 'ಅಲ್ಲಿ ಅವಳು ಈಗಲೂ', 'ಪ್ರಾಣಿಗಳು', 'ಬುಗರಿ' ಅವರ ಪ್ರಮುಖ ಕಥೆಗಳಾಗಿವೆ.

ಒಟ್ಟಿನಲ್ಲಿ ಈ ಮೇಲಿನ ಪ್ರಮುಖ ಕಥೆಗಾರರು ದಲಿತ ಸಂವೇದನೆಯಿಂದ ಬರೆದವರಲ್ಲಿ ಗಮನಾರ್ಹರಾಗಿದ್ದಾರೆ. ಇವರೊಂದಿಗೆ ಬಂಡಾಯ ಸಂವೇದನೆಯಿಂದ ಮತ್ತು ಮೇಲ್ವರ್ಗದಿಂದ ಬಂದು ಕೆಳವರ್ಗದ ಬದುಕನ್ನು ನಿರ್ಮತ್ಸರ ಪ್ರೀತಿಯಿಂದ ಪುನರ್‌ಮೌಲ್ಯೀಕರಿಸುವ ಅತ್ಯಂತ ಶ್ರೇಷ್ಠ ಕತೆಗಾರರು ಇಲ್ಲಿದ್ದಾರೆ. ಅವರಲ್ಲಿ ಪೂರ್ಣಚಂದ್ರ

ತೇಜಸ್ವಿ (ಲಿಂಗ ಬಂದ, ಅಬಚೂರಿನ ಪೋಸ್ಟಾಫೀಸು), ಬರಗೂರು ರಾಮಚಂದ್ರಪ್ಪ (ಸತ್ತವನು, ಬರ), ಎಸ್. ದಿವಾಕರ (ಕಾರ್ಯ), ಬೆಸಗರಹಳ್ಳಿ ರಾಮಣ್ಣ (ನೆಲದ ಬಡಲು, ಸುಗ್ಗಿ, ನೆಲದ ಹಸಿರು), ವೈದೇಹಿ (ಅಸ್ಪೃಶ್ಯರು), ಪಿ.ಲಂಕೇಶ (ರೊಟ್ಟಿ), ಬಿ.ಟಿ. ಲಲಿತಾ ನಾಯಕ (ಗತಿ), ಬೋಳುವಾರು ಮಹಮ್ಮದ್ ಕುಂಞ (ಮಾರಾಟ, ಮುದುಕ ಹೇಳಿದ ಕತೆ), ಫಕೀರ್ ಮಹಮ್ಮದ್ ಕಟ್ಪಾಡಿ (ಕೌರ್ಯ, ದ್ವೀಪ), ಸಾರಾ ಅಬೂಬಕ್ಕರ್ (ಚಪ್ಪಲಿಗಳು), ಅಮರೇಶ ನುಗಡೋಣಿ (ಮಣ್ಣು ಸೇರಿತು ಬೀಜ), ಅಬ್ದುಲ್ ರಶೀದ್ (ಹಾಲು ಕುಡಿದ ಹುಡುಗ) ಇನ್ನು ಮುಂತಾದವರು ಇಲ್ಲಿ ಶ್ರೇಷ್ಠ ಕಥೆಗಳನ್ನು ರಚಿಸಿದ್ದಾರೆ. ಇವರು ಆಧುನಿಕ ಕನ್ನಡ ಸಣ್ಣಕಥೆಗಳಿಗೆ ಹೊಸ ದಿಕ್ಕನ್ನು ತೋರಿದರು. ಒಟ್ಟು ಕನ್ನಡ ಸಾಹಿತ್ಯದ ಹೊಸ ದಿಗಂತವನ್ನು ವಿಸ್ತರಿಸುವಲ್ಲಿ ಇವರ ಬರಹಗಳು ಮಹತ್ವದ್ದಾಗಿ ತೋರುತ್ತದೆ.

**೪.೧.೫ ಜಾಗತೀಕರಣವನ್ನು ಕೇಂದ್ರವಾಗಿಟ್ಟುಕೊಂಡು ಬರೆದ ಕಥೆಗಾರರು:**

ಆಧುನಿಕೋತ್ತರದ ವಿಚಾರಗಳನ್ನು ಪ್ರಮುಖವಾಗಿಸಿಕೊಂಡು ಕಥಾಹಂದರವನ್ನು ಹೆಣೆಯುತ್ತಿರುವ ಕತೆಗಾರರನ್ನು ಹೊಸತಲೆಮಾರಿನ ಕಥೆಗಾರರೆಂದು ಕರೆಯಬಹುದಾಗಿದೆ. ಜಿ.ಎಸ್.ಆಮೂರ ಅವರು "ಸುಮಾರು ೧೯೮೦ರ ಆಸುಪಾಸಿನಲ್ಲಿ ತಮ್ಮ ಪ್ರಥಮ ಕಥಾಸಂಗ್ರಹಗಳನ್ನು ಪ್ರಕಟಿಸಿದ ಕತೆಗಾರರನ್ನು ನಾನು ಹೊಸ ಕತೆಗಾರರೆಂದು ಪರಿಗಣಿಸಿದ್ದೇನೆ" ಎಂದು ಹೇಳುತ್ತಾರೆ. ಈ ಮಾತು ಒಂದು ಹಂತಕ್ಕೆ ನಿಜ. ಆದರೆ, ೧೯೯೨ರ ನಂತರದಲ್ಲಿ ಮೂಡಿಬಂದ ಬಹುತೇಕ ಕತೆಗಳ ವಿಭಿನ್ನ ನೆಲೆಗಳು ಹೊಸತಲೆಮಾರಿನ ಕತೆಗಾರರಿಗೆ ವಿಶೇಷತೆಯನ್ನು ತಂದುಕೊಟ್ಟಿವೆ. ನಿರ್ಧಿಷ್ಟವಾಗಿ ಹೊಸ ತಲೆಮಾರು ಎಂದು ಕರೆಯಲು ಸಾಧ್ಯ ಎನಿಸುವಂತಿದೆ. ಜಾಗತೀಕರಣದ ದಟ್ಟಪ್ರಭಾವವನ್ನು ಕತೆಯ ಜೀವಾಳವಾಗಿಸಿ, ಅದರ ಆಗು-ಹೋಗುಗಳನ್ನು ಓದುಗನೇ ಅರ್ಥೈಸಿಕೊಳ್ಳುವಂತೆ ಮಾಡುವ ಅವರ ಬರವಣಿಗೆಯ ಶೈಲಿ ಹೊಸತಲೆಮಾರಿನ ಕತೆಗಾರರೆಂದೆನಿಸಿಕೊಳ್ಳಲು ಕಾರಣವಾಗಿದೆ. ಕಡಿಮೆ ಅವಧಿಯಲ್ಲಿ ಸಮಾಜದ ವಾಸ್ತವತೆಯನ್ನು ಸ್ಥೂಲವಾಗಿ ಕಟ್ಟಿಕೊಡುವ ಇವರ ಪ್ರಯತ್ನ ಪ್ರಶ್ನಾತೀತ. ದಲಿತ-ಬಂಡಾಯದಲ್ಲಿ ಗುರುತಿಸಿಕೊಂಡ ಕತೆಗಾರರೂ ಇಲ್ಲಿ ಕಾಣಿಸಿಕೊಂಡಿದ್ದಾರೆ. ಸಮಕಾಲೀನ ಕಥೆಗಾರರ ಸಮರ್ಪಕವಾದ ಪರಿಶ್ರಮವು ಆಧುನಿಕೋತ್ತರದ ಸಣ್ಣಕಥೆಗೆ ಸಮೃದ್ಧತೆಯನ್ನು ಒದಗಿಸಿಕೊಟ್ಟಿದೆ. ರಾಘವೇಂದ್ರ ಪಾಟೀಲ, ಜಯಂತ ಕಾಯ್ಕಿಣಿ, ವಿವೇಕ ಶಾನಭಾಗ, ಕೆ.ಸತ್ಯನಾರಾಯಣ, ಮೊಗಳ್ಳಿ ಗಣೇಶ, ಅಮರೇಶ ನುಗಡೋಣಿ, ವಸುಧೇಂದ್ರ, ನಾಗರಾಜ ವಸ್ತಾರೆ, ಮಂಜುನಾಥ್‌ಲತಾ,

ಕಲಿಗಣನಾಥ ಗುಡದೂರು, ಎಚ್. ನಾಗವೇಣಿ, ವಿನಯಾ, ಸುಮಂಗಲಾ, ಸುನಂದಾ ಕಡಮೆ ಮೊದಲಾದವರು ಈ ಸಾಲಿಗೆ ಸೇರಬಹುದಾದ ಪ್ರಮುಖ ಕಥೆಗಾರರಾಗಿದ್ದಾರೆ.

**ಜಯಂತ ಕಾಯ್ಕಿಣಿ:**

ಕಾರ್ಪೋರೇಟ್ ಜಗತ್ತಿನ ನಗರೀಕರಣದಲ್ಲಾದ ವಿಸ್ಮಯಗಳನ್ನು ಕಥಾಹಂದರವಾಗಿಸಿಕೊಂಡವರಲ್ಲಿ ಜಯಂತ ಕಾಯ್ಕಿಣಿಯವರು ಪ್ರಮುಖರೆನಿಸುತ್ತಾರೆ. ಇತ್ತೀಚಿಗೆ ವಿಶ್ವವ್ಯಾಪಿ ಹೆಚ್ಚು ಚರ್ಚೆಗೆ ಗ್ರಾಸವಾಗುತ್ತಿರುವ ಜಾಗತಿಕ ಜಗತ್ತಿನ ನೈಜತೆಯನ್ನು ಪ್ರತಿನಿಧಿಸುವ ಇವರ ಬಹುತೇಕ ಕಥೆಗಳು ಅನುಭವದ ಹಿನ್ನೆಲೆಯಲ್ಲಿ ಮೂಡಿಬಂದಂತೆನಿಸುತ್ತವೆ. ಓದುಗನ ಮನದಾಳದಲ್ಲಿ ಅಡಗಿಕೊಂಡಿದ್ದ ಸಂವೇದನೆಯನ್ನು ಕ್ರೀಯಾಶೀಲಗೊಳಿಸುವ ಇವರ ಕಥಾಶೈಲಿ ಪ್ರಶಂಸನೀಯ. ಇದುವರೆಗೂ ಐದು ಕಥಾಸಂಕಲನಗಳನ್ನು ಪ್ರಕಟಿಸಿರುವ ಇವರು ಸಾಹಿತ್ಯದ ವಿವಿಧ ಕ್ಷೇತ್ರಗಳಲ್ಲಿಯೂ ಕಾರ್ಯನಿರ್ವಹಿಸಿದ್ದಾರೆ. ತೆರೆದಷ್ಟೇ ಬಾಗಿಲು(೧೯೮೨), ಗಾಳ(೧೯೮೨), ದಗಡೂಪರಬನ ಅಶ್ವಮೇಧ (೧೯೮೯), ಅಮೃತಬಳ್ಳಿ ಕಷಾಯ (೧೯೯೬) ಹಾಗೂ ಬಣ್ಣದ ಕಾಲು, ತೂಫಾನ್ ಮೇಲ್ (೧೯೯೯)ರಲ್ಲಿ ಪ್ರಕಟವಾಗಿವೆ.

**ವಿವೇಕ ಶಾನಭಾಗ:**

ವಿವೇಕ ಶಾನಭಾಗ ಅವರು ಕಥೆಗಳ ಮೂಲಕ ಹೊಸ ಪ್ರವೃತ್ತಿಗಳನ್ನು ಪರಿಚಯಿಸಿದವರು. ವಿವೇಕ ಶಾನಭಾಗ ಅವರ 'ಚಿಪ್ಪುಗಳು' ಎಂಬ ಕಥೆಯ ಕುರಿತು ಯಂಶವಂತ ಚಿತ್ತಾಲರು "ವಿವೇಕರ ಕತೆಗಳ ಕೇಂದ್ರ ವಸ್ತು ಕಾಮ. ಇದು ಕತೆಯಾಗಿ ಆಕೃತಿ ಪಡೆದದ್ದು ನವ್ಯದ ಚೌಕಟ್ಟಿನಲ್ಲಿ... ನವ್ಯದ ದಟ್ಟವಾದ ಪ್ರಭಾವವೇ ವಸ್ತುವಿನ ಆಯ್ಕೆಯನ್ನು ನಿಶ್ಚಯಿಸಿದಂತಿದೆ." ಎಂದು ಹೇಳುತ್ತಾರೆ. ಈ ಮಾತು ವಿವೇಕ ಶಾನಭಾಗರ ಸೃಜನಶೀಲತೆಯ ಮೇಲೆ ಬೆಳಕು ಚಲ್ಲುತ್ತದೆ. ಆದರೆ ನವ್ಯ ಸಾಹಿತ್ಯದ ಧೋರಣೆಯಿಂದ ಕಳಚಿಕೊಂಡು, ಜಾಗತಿಕ ವಿದ್ಯಮಾನಗಳಿಗೆ ಸ್ಪಂದಿಸುವ ಹುಲಿಸವಾರಿ ಸಂಕಲನದಿಂದ ಅವರ ಆದ್ಯತೆಗಳು ಬೇರೆಯಾಗಿವೆ. ಅಂಕುರ(೧೯೯೫), ಲಂಗುರ (೧೯೯೨) ಹುಲಿಸವಾರಿ (೧೯೯೫) ಇವು ಇವರ ಪ್ರಮುಖ ಕಥಾ ಸಂಕಲನಗಳು.

**ಕೆ. ಸತ್ಯನಾರಾಯಣ:**

ಕೆ.ಸತ್ಯನಾರಾಯಣರವರು ತಮ್ಮದೇ ಆದ ವಿಶಿಷ್ಟತೆಯಲ್ಲಿ ಸಣ್ಣಕಥೆಯ ಸ್ವರೂಪವನ್ನು ರೂಪಿಸಿಕೊಂಡವರು. "ಸಣ್ಣ ಕಥೆಯ ಸ್ವರೂಪ, ಕಥೆ-ಮನುಷ್ಯ ಚರಿತ್ರೆ ಇವುಗಳಿಗಿರುವ ಪರಸ್ಪರ ಸಂಬಂಧ ಹಾಗೂ ಒತ್ತಾಸೆಗಳ ಬಗ್ಗೆ ಅವರು ಬರೆದ ಪ್ರಬಂಧ ಇನ್ನೂ

ಪ್ರಕಟವಾಗಿಲ್ಲವಾದರೂ ಅವರು ಬರೆದ ಕತೆಗಳ ಶರೀರಗಳಲ್ಲಿಯೇ ಈ ವಿಚಾರಗಳ ಸೂಚನೆಗಳು ನಮಗೆ ದೊರಕುತ್ತವೆ.” ಎಂದು ಜಿ.ಎಸ್.ಆಮೂರ ಅವರು ಹೇಳಿದ ಮಾತುಗಳು ಸಣ್ಣಕಥೆಗಳ ಬಗೆಗೆ ಕೆ.ಸತ್ಯನಾರಾಯಣರಿಗಿದ್ದ ಆಸಕ್ತಿ, ಅಭಿಲಾಷಯವನ್ನು ವ್ಯಕ್ತಪಡಿಸುತ್ತವೆ. ಇವರ ನಿಮ್ಮ ಮೊದಲ ಪ್ರೇಮದ ಕಥೆ(೧೯೯೩), ವಿಕ್ಟೋರಿಯಾ ಮಗ ದೇವಲಿಂಗು (೧೯೯೮) ಹಾಗೂ ಹಳೆಯ ಕಾಲದ ಹೊಸ ಕತೆ (೨೦೦೨) ರಲ್ಲಿ ಪ್ರಕಟಗೊಂಡಿವೆ.

ಹೊಸ ವಿಚಾರವಂತಿಕೆಯ ಕಡೆಗೆ ಗಮನ ಸೆಳೆದ ಹೊಸತಲೆಮಾರಿನ ಕತೆಗಾರರು ಕಾಲಘಟ್ಟವೊಂದನ್ನು ಗುರುತಿಸುವಲ್ಲಿ ಪ್ರಮುಖಸ್ಥಾನ ವಹಿಸಿದ್ದಾರೆ. ಜಯಂತ ಕಾಯ್ಕಿಣಿ, ವಿವೇಕ ಶಾನಭಾಗ, ಕೆ. ಸತ್ಯನಾರಾಯಣ ಸೇರಿದಂತೆ ಅಮರೇಶ ನುಗಡೋಣಿ, ಬೊಳುವಾರು ಮಹ್ಮದ ಕುಂಞ, ಹೆಚ್. ನಾಗವೇಣಿ, ವಸುಮತಿ ಉಡುಪ, ವಿನಯಾ, ವಸುಧೇಂದ್ರ, ರಘುನಾಥ. ಚ.ಹ., ನಟರಾಜ್ ಹುಳಿಯಾರ, ನಾಗರಾಜ ವಸ್ತಾರೆ, ಮಂಜುನಾಥ್‌ಲತಾ, ವಸುಧೇಂದ್ರ, ಕಲಿಗಣನಾಥ ಗುಡದೂರು, ಚಂದ್ರಶೇಖರ್ ವಸ್ತ್ರದ, ಬಿ.ಎಂ. ಬಶೀರ್, ಬಸು ಬೇವಿನಗಿಡದ, ಮೊದಲಾದವರು.ಇವರ ಕಥೆಗಳಲ್ಲಿ ಮೂಡಿಬಂದ ಹೊಸಜಗತ್ತಿನ ವಿಚಾರಗಳು ಹಳೆಯ ಕಥಾಶೈಲಿ, ವಿಷಯವಸ್ತುಗಳನ್ನು ಬದಲಿಸಿವೆ. ಇದರಿಂದ ಸಮಾಕಾಲೀನ ವಾಸ್ತವತೆಯನ್ನು ತಿಳಿಸಲು ಸಾಧ್ಯವಾಗಿದೆ ಎನ್ನಬಹುದಾಗಿದೆ. ಈ ಹಿನ್ನಲೆಯಲ್ಲಿ ಆಧುನಿಕತೆಗಿಂತ ಹೊಸತಲೆಮಾರಿನ ಕಥೆಗಳು ಭಿನ್ನವಾಗಿ ಕಾಣಿಸಿಕೊಳ್ಳುತ್ತಿವೆ ಎಂದು ಹೇಳಲಾಗುತ್ತದೆ.

**೪.೨ ಆಧುನಿಕ ಸಣ್ಣಕಥೆಗಳ ರೂಪ-ಲಕ್ಷಣ-ವೈಶಿಷ್ಟ್ಯಗಳು:**

ಸಾಹಿತ್ಯದ ವಿವಿಧ ರೂಪಗಳಲ್ಲಿ ಒಂದು ವಿಶಿಷ್ಟ ಮಾದರಿಯೆಸಿದ ಸಣ್ಣ ಕತೆಗೆ ಕೆಲವು ರೂಪ-ಲಕ್ಷಣ-ವೈಶಿಷ್ಟ್ಯಗಳಿವೆ ಎಂದು ಗುರುತಿಸಲಾಗಿದೆ. ಆಧುನಿಕ ಕಾಲದ ಪ್ರಾರಂಭದಲ್ಲಿ ಸಣ್ಣಕಥೆಯು ದಿನಪತ್ರಿಕೆ, ವಾರಪತ್ರಿಕೆ, ಮಾಸಪತ್ರಿಕೆಗಳಲ್ಲಿ ಪ್ರಕಟವಾಗಿ ಜನಪ್ರಿಯತೆಯನ್ನು ಪಡೆಯತೊಡಗಿದವು. ಒಬ್ಬರು ಓದಿ ಎಲ್ಲರೂ ಕೇಳುವ ಸಂಸ್ಕೃತಿ ಮರೆಯಾಗಿ ಎಲ್ಲರೂ ಸಣ್ಣಕಥೆಯತ್ತ ಆಸಕ್ತರಾಗುವಂತೆ ಮಾಡುವಲ್ಲಿ ಅಂದಿನ ಕಾಲದ ನಿಯತಕಾಲಿಕೆಗಳ ಪಾತ್ರ ದೊಡ್ಡದೆನ್ನಬಹುದು. ಈ ದೃಷ್ಟಿಯಿಂದ ಅವುಗಳ ಕೊಡುಗೆ ಸ್ತುತ್ಯರ್ಹವಾಗಿದೆ. ಸಣ್ಣಕಥೆಗಳ ಸ್ವರೂಪವನ್ನು ಕುರಿತು 'ಇದು ಹೀಗೆಯೇ ಸರಿಯಾದುದು' ಎಂದು ಗೆರೆ ಕೊರೆದು ಖಚಿತವಾಗಿ ಹೇಳಲು ಬರುವುದಿಲ್ಲ.

**೪.೩ ಸಣ್ಣಕಥೆ ಕುರಿತ ಕೆಲವು ವ್ಯಾಖ್ಯಾನಗಳು:**

ಸಣ್ಣಕಥೆಯ ಲೇಖಕರು ಆ ಕುರಿತು ಕೆಲವು ಹೇಳಿಕೆಗಳನ್ನು, ವ್ಯಾಖ್ಯಾನಗಳನ್ನು ನೀಡಿದ್ದಾರೆ. ಈ ವ್ಯಾಖ್ಯಾನಗಳು ಕನ್ನಡದ ಸಣ್ಣಕಥೆಯ ಸ್ವರೂಪ ಮತ್ತು ಮಹತ್ವವನ್ನು ಆಧರಿಸಿ ಹೇಳಿದ್ದರಿಂದ ಅವು ಸಣ್ಣಕತೆಯ ಲಕ್ಷಣಗಳೇ ಆಗಿವೆ.

ಕನ್ನಡ ಸಣ್ಣಕಥೆಗಳ ಜನಕರೆನಿಸಿದ ಮಾಸ್ತಿ ವೆಂಕಟೇಶ ಅಯ್ಯಂಗಾರ ಅವರು "ಕಥೆಯೆಂದರೆ ನನ್ನ ದೃಷ್ಟಿಯಲ್ಲಿ ಒಂದು ದರ್ಶನವನ್ನು ಹೊಮ್ಮಿಸುವ ರಚನೆ. ಕಥೆಗಳನ್ನು ಬರೆಯುವಲ್ಲಿ ನನ್ನ ಉದ್ದೇಶ ಒಂದೇ ಒಂದು ಎಂದು ನಾನು ಹಲವು ಸಂದರ್ಭಗಳಲ್ಲಿ ಸೂಚಿಸಿದ್ದೇನೆ. ಈ ಉದ್ದೇಶ ಜೀವನ ನನಗೆ ನೀಡಿರುವ ದರ್ಶನವನ್ನು ವಿವರಿಸುವ ಚಿತ್ರಗಳನ್ನು ಕೊಡುವುದು. ಇವು ಸತ್ಯವನ್ನೂ ಬಿಂಬಿಸಿವೆ ಸ್ಫುಟವಾಗಿವೆ. ಇಷ್ಟೋ ಅಷ್ಟೋ ರಸಾನುಭವವನ್ನು ನೀಡುತ್ತವೆ ಎಂದು ಓದುಗರಿಗೆ ಕಂಡರೆ ನನ್ನ ಕೆಲಸ ಸಾರ್ಥಕವಾಯಿತು" ಎಂದು ಹೇಳುತ್ತಾರೆ. ಇವರು ಸಣ್ಣಕಥೆಯಿಂದ ಸಮಾಜಕ್ಕೆ ಆಗುವ ಪರಿಣಾಮವನ್ನು ಕೇಂದ್ರಿಕರಿಸಿ ಹೇಳಿದಂತಿದೆ.

ಶ್ರೇಷ್ಠ ಕಥೆಗಾರರಾದ ನಿರಂಜನರು ಸಣ್ಣಕಥೆಗಳನ್ನು ಕುರಿತು "ಸಣ್ಣ ಕಥೆಯೆನ್ನುವುದು ಮೂರೇ ಪುಟಗಳಿರಬಹುದು; ಮೂವತ್ತು ಪುಟಗಳಿರಬಹುದು, ಅದರ ಮುಖ್ಯ ಗುಣ ಸೂಕ್ಷ್ಮರೂಪ, ಆದರೆ ಅದರಲ್ಲಿ ಬ್ರಹ್ಮಾಂಡವನ್ನು ಕಾಣುವುದು ಶಕ್ಯ. ಕಾಲದ ಒಂದು ತುಣುಕನ್ನು ಅದರಲ್ಲಿ ಸೆರೆಹಿಡಿದು ಅನಂತಕ್ಕೆ ಅನ್ವಯಿಸಬಹುದು. ಕೆಲವೇ ಪಾತ್ರಗಳಿದ್ದರೂ ಇದು ಅಸಂಖ್ಯ ವೇಷಧಾರಿಗಳ ಬೃಹತ್ ನಾಟಕಶಾಲೆ ಎಂಬ ಭಾವನೆ ಮೂಡಬಹುದು. ಕಾದಂಬರಿಯ ವಿಸ್ತಾರದ ಅನುಕೂಲ ಕಥೆಗಿಲ್ಲ. ಇದು ಹೆಚ್ಚು ಕುಸುರಿನ ಕಲೆಗಾರಿಕೆಯ ಕೆಲಸ" ಎಂದು ಹೇಳುತ್ತಾರೆ.

ಓ.ಎಲ್. ನಾಗಭೂಷಣಸ್ವಾಮಿಯವರು ತಮ್ಮ 'ವಿಮರ್ಶೆಯ ಪರಿಭಾಷೆ' ಕೃತಿಯಲ್ಲಿ "ಮಿತವ್ಯಯದ ದೃಷ್ಟಿಯಿಂದ ಮತ್ತು ನಿಷ್ಠುರವಾಗಿ ಕೃತಿಯ ಅಗತ್ಯ ರಚನೆಗಳನ್ನು ಗಮನದಲ್ಲಿಟ್ಟುಕೊಂಡು ಆಯ್ದ ಘಟನೆಗಳನ್ನು ವಿಶಿಷ್ಟವಾಗಿ ನಿರೂಪಿಸುವ ಮೂಲಕ ಸಣ್ಣಕಥೆಯು single effectನ್ನು ತರಲು ಪ್ರಯತ್ನಿಸುತ್ತದೆ... ಯಾವುದಾದರೊಂದು ಪತ್ರ, ಘಟನೆ, ಅಥವಾ ಭಾವನೆಯ ಮೇಲೆ ಗಮನವನ್ನು ಕೇಂದ್ರೀಕರಿಸುವ ಮೂಲಕ unity of impression ಅನ್ನು ಪರಿಪೂರ್ಣತೆಯ ಭಾವನೆಯನ್ನು ಸ್ಥಾಪಿಸುತ್ತದೆ" ಎಂದು ಅಭಿಪ್ರಾಯ ಪಡುತ್ತಾರೆ.

ಒಟ್ಟಿನಲ್ಲಿ ಕಥೆಯ ಅಸ್ತಿತ್ವದ ಹಿನ್ನೆಲೆಯಲ್ಲಿ ಬಾಹ್ಯ ಮತ್ತು ಆಂತರಿಕ ಪ್ರಭಾವ-ಪ್ರೇರಣೆಗಳು ಸಾಕಷ್ಟು ಇದ್ದು, ಆ ಮೂಲಕ ರೂಪಿತವಾದ ಅದರ ಪ್ರಧಾನ ಲಕ್ಷಣಗಳನ್ನು ಈ ಕೆಳಗಿನಂತೆ ಪಟ್ಟಿಮಾಡಬಹುದು:

- ವಸ್ತುವಿನ ಆಯ್ಕೆ ಮತ್ತು ಸಂಕ್ಷಿಪ್ತತೆಯಿಂದ ಕೂಡಿರುತ್ತದೆ. ಅದು ಸಹೃದಯನಿಗೆ ತೀವ್ರ ಪರಿಣಾಮವನ್ನುಂಟು ಮಾಡುವ ಬದುಕನ್ನು ಒಳಗೊಂಡಿರುತ್ತದೆ.
- ವೈವಿಧ್ಯಪೂರ್ಣ ಅನುಭವಗಳಿಂದ ಸಾಣೆಸಿ ತೆಗೆದುಕೊಂಡ ವಸ್ತುವನ್ನು ಒಳಗೊಂಡಿರುತ್ತದೆ.
- ಸಣ್ಣಕಥೆ ಒಂದೇ ಒಂದು ಭಾವನೆಯನ್ನೊಳಗೊಂಡಿದ್ದು ಈ ಭಾವನೆಯನ್ನು ತರ್ಕಬದ್ಧವಾಗಿ ಮುಕ್ತಾಯಮಾಡುವಂತಿರುತ್ತದೆ.
- ಸಂಕ್ಷಿಪ್ತತೆ ಕಥೆಯ ಅತ್ಯಂತ ಸ್ಪಷ್ಟಗುಣವಾಗಿದೆ. ಕಡಿಮೆ ಸಮಯದಲ್ಲಿ ಓದಿ ಮುಗಿಸಬಹುದಾಗಿದೆ.
- ವಸ್ತು ಯಾವುದೇ ಆಗಿದ್ದರೂ ವಾಸ್ತವತೆಯನ್ನು ಹೊಂದಿರುತ್ತದೆ.
- ಭಾಷೆಯು ಅತ್ಯಂತ ಮೊನಚು ಮತ್ತು ಸೂಕ್ಷ್ಮತೆಯಿಂದ ಕೂಡಿರುತ್ತದೆ.
- ಸಣ್ಣಕಥೆಗಳಲ್ಲಿ ಮಾತಿನ ಬಳಕೆ ಅತ್ಯಂತ ಮಿತವಾಗಿರುತ್ತದೆ. ಇದು ಮಿಂಚಿ ಒಮ್ಮೆ ಹೊಳೆದು ನಮ್ಮ ಸುತ್ತ ಮುತ್ತಲಿನ ಪ್ರದೇಶವನ್ನು ಕ್ಷಣ ಕಾಣಿಸಿ ಮರೆಯಾದಂತೆ ತೋರುತ್ತದೆ.
- ಒಂದು ನೆನಪು, ಒಂದು ಅನುಭವ, ಒಂದು ಮನೋಧರ್ಮದ ಆವಿಷ್ಕಾರ, ಸಂಕ್ಷಿಪ್ತತೆಯಲ್ಲಿ ಸರ್ವಶಕ್ತಿಯ ಗುಣವನ್ನು ಸಣ್ಣಕಥೆಗಳು ಹೊಂದಿರುತ್ತವೆ.
- ಆಡಿದ ಒಂದು ಮಾತಿನಲ್ಲಿ, ನಡೆದ ಒಂದು ಘಟನೆಯಲ್ಲಿ ಅಡಗಿರುವ ಗಂಭೀರ ಅರ್ಥವಿದ್ದು ಬೃಹತ್ ಕಾದಂಬರಿಯಲ್ಲಿ ಹೇಳಲಾಗದ್ದನ್ನು ಸಂಕ್ಷಿಪ್ತವಾಗಿ ಹೇಳುವ ಯತ್ನ ಸಣ್ಣಕಥೆಯ ಲಕ್ಷಣವಾಗಿದೆ.
- ಧ್ವನಿ, ಪ್ರತಿಮೆ ಮತ್ತು ಸಂಕೇತಗಳ ಮೂಲಕ ಅನುಭವಕ್ಕೆ ಮಾತಿನ ಶರೀರ ತೊಡಿಸಿ, ತನ್ನ ಸೀಮಿತ ಬರವಣಿಗೆಯ ಚೌಕಟ್ಟಿನಲ್ಲಿ ತೀವ್ರ ಪರಿಣಾಮದಿಂದ ಸಣ್ಣಕಥೆಗಳು ಕೂಡಿರುತ್ತವೆ.

- ಸಣ್ಣಕಥೆಯಲ್ಲಿನ ಬಹುಪಾಲು ಪಾತ್ರಗಳು ಬದುಕಿನ ಬಲಿಪಶುಗಳು, ಅವಮಾನಿತರು, ನೊಂದವರು, ಹತಾಶರು ಮತ್ತು ಅನಾಥರಾಗಿದ್ದು ಆರೋಗ್ಯದ, ಜೀವನೋತ್ಸಾಹದ ಬದುಕನ್ನು ಗೆಲ್ಲುವ ಛಲದ ಪಾತ್ರಗಳನ್ನು ಪ್ರತಿಭಟನೆಗಳನ್ನು-ಬಂಡಾಯ ಕಥೆಗಾರರ ಸಣ್ಣಕಥೆಗಳಲ್ಲಿ ಕಾಣುತ್ತವೆ.
- ಒಂದು ಪುಟ್ಟ ಘಟನೆಯ ಸುತ್ತ ಹೆಣೆದ ಕಥೆಯಲ್ಲಿ ವಿಶ್ವಪ್ರಜ್ಞೆಯನ್ನು ಮೂಡಿಸುವ ಸಂವೇದನೆಯು ಅಡಗಿರುತ್ತದೆ.
- ಒಂದು ನಾಟಕೀಯ ಘಟನೆ, ಸನ್ನಿವೇಶ, ಒಂದು ಪರಿಣಾಮಕಾರಿ ದೃಶ್ಯ, ಒಂದು ಘಟನಾವಳಿ, ಪಾತ್ರದ ಒಂದು ಮುಖ, ಹಾಗು ಅನುಭವದ ಒಂದು ತುಣುಕು, ಒಂದು ಬದುಕಿನ ಪಾರ್ಶ್ವ, ಒಂದು ನೈತಿಕ ಸಮಸ್ಯೆ ಇವುಗಳಲ್ಲಿ ಯಾವುದಾದರು ಸಣ್ಣಕಥೆಗೆ ಬೀಜಾಂಕುರವಾಗಿರುತ್ತದೆ.

"ಸಣ್ಣಕಥೆಯ ಸ್ವರೂಪವನ್ನು ನಿಶ್ಚಿತವಾಗಿ ಹಿಡಿದಿರುವುದು ಇಲ್ಲಿ ಸಾಧ್ಯವಿಲ್ಲವಾದರೂ ಸಣ್ಣಕಥೆ ಭಾವಗೀತೆಯಂತೆ ಸಂಕ್ಷಿಪ್ತ, ಭಾವದೀಪ್ತ, ವಿವರಗಳ ನಿರ್ಧಿಷ್ಟತೆ, ಸಾಧನಗಳ ಮಿತವ್ಯಯ, ಪರಿಣಾಮದ ಏಕಾಗ್ರತೆ, ಹೊಳೆಯುವ ನೀರಿನ ಹನಿಯಲ್ಲಿ ಸೂರ್ಯನ ಕಲ್ಪನೆ ಮೂಡಿಸುವ ಪ್ರತಿಬಿಂಬ, ಸೂಕ್ಷ್ಮತೆ, ತೀವ್ರಾಕರ್ಷಣೆ, ವಾಸ್ತವತೆ, ಮಿದುಭಾಷೆ, ಸರಳ ಸುಂದರ ಶೈಲಿಗಳ ಹಿನ್ನೆಲೆಯಲ್ಲಿ ಮೂಡಿದ ಸಣ್ಣಕಥೆಯ ಸ್ವರೂಪವು ಒಂದು ಸತ್ವಯುತ ಮತ್ತು ಮಹತ್ವದ ಪ್ರಕಾರವಾಗಿ ಗಮನಾರ್ಹತೆ ಪಡೆದುಕೊಂಡಿದೆ."[೪] ಎಂದು ಮಲ್ಲಿಕಾ ಘಂಟಿಯವರು ಅಭಿಪ್ರಾಯಪಡುತ್ತಾರೆ. ಹೀಗಾಗಿ ಸಣ್ಣಕಥೆಗಳು ಇಲ್ಲಿಯವರೆಗೆ ನಡೆದು ಬಂದ ದಾರಿಯನ್ನು ಅವಲೋಕಿಸಿದಾಗ ಸಾಹಿತ್ಯದ ಸಂಪ್ರದಾಯದ ನಾನಾ ಮಗ್ಗಲುಗಳಲ್ಲಿ, ಮಜಲುಗಳಲ್ಲಿ ನೂರಾರು ಟಿಸಿಲೊಡೆದು ಬಹುಮುಖಿಯಾಗಿ ಬೆಳೆದುಬಂದಿದೆ. ಸಂಖ್ಯೆಯ ದೃಷ್ಟಿಯಿಂದ, ಗುಣದ, ಸತ್ವದಿಂದಲೂ ಆಳವಾದದ್ದೆಂದು ಹೇಳಬಹುದು.

ಹೀಗೆ ತನ್ನದೇ ಆದ ಸ್ವರೂಪವನ್ನೊಳಗೊಂಡ ಆಧುನಿಕ ಕನ್ನಡ ಕಥಾ ಸಾಹಿತ್ಯವು ತನ್ನದೇ ಆದ ಐತಿಹಾಸಿಕತೆಯ ಪರಂಪರೆಯನ್ನು ಹೊಂದಿದೆ. ಆಧುನಿಕ ಸಂವೇದನೆಯ ಹಿನ್ನೆಲೆಯ ನವೋದಯ, ಪ್ರಗತಿಶೀಲ, ನವ್ಯ, ದಲಿತ-ಬಂಡಾಯದ ಜೊತೆಗೆ ಇತ್ತೀಚಿನ ಉದಾರೀಕರಣ, ಜಾಗತೀಕರಣದ ನೆಲೆಯಲ್ಲಿ ಬರೆದ ಕಥೆಗಾರರನ್ನು ಇಲ್ಲಿ ಸಂಕ್ಷಿಪ್ತವಾಗಿ ಪರಿಚಯಿಸಲಾಗಿದೆ. ಈ ಮೂಲಕ ಸಣ್ಣಕಥೆಯ ವಿಸ್ತೃತ ಮನೋಭೂಮಿಕೆ, ವೈಶಿಷ್ಟ್ಯತೆ, ಸಮೃದ್ಧತೆ ತಿಳಿಯುವ ಮೂಲಕ ಆಧುನಿಕ ಸಾಹಿತ್ಯದಲ್ಲಿ ಸಣ್ಣಕಥೆಗಳು ಜಾಗತೀಕರಣದ

ಪ್ರಭಾವ-ಪ್ರೇರಣೆಗೆ ಒಳಗಾಗಿ ಅದರಿಂದ ಹೊರಹೊಮ್ಮಿದ ಫಲಿತಗಳನ್ನು ಅಭಿವ್ಯಕ್ತಿಸಲು ಸಹಾಯಕವಾಗಿದೆ. ಅಲ್ಲದೆ ಬದುಕಿನ ವಾಸ್ತವತೆಗೆ ತೀರಾ ಹತ್ತಿರವಾದುದನ್ನು ಸಣ್ಣಕಥೆಗಳು ಮೊದಲಿನಿಂದಲೇ ಅಭಿವ್ಯಕ್ತಿಸುತ್ತಲೇ ಬಂದಿರುವದನ್ನು ಗುರುತಿಸಲು ಸಹಾಯಕವಾಗುತ್ತದೆ. ಬದುಕಿನ ಒಂದು ಮುಖದ ಹಿನ್ನೆಲೆಯಲ್ಲಿ ಸಮಗ್ರ ಬದುಕಿಗೆ ಪೂರಕವಾಗಿ, ಅದರ ಒಟ್ಟು ಅರಿವನ್ನು ಸೂಕ್ಷ್ಮತೆಯಿಂದ ತಿಳಿಸುವ ಸಣ್ಣಕಥೆ ಕಲಾತ್ಮಕ ಕುಸುರಿನಿಂದ ಮಹತ್ವದ ಸಾಹಿತ್ಯಿಕ ರೂಪವಾಗಿದೆ.

**ಕೊನೆಯ ಟಿಪ್ಪಣಿ:**

೧. ಜಿ.ಎಸ್.ಆಮೂರ, ಕನ್ನಡ ಕಥನ ಸಾಹಿತ್ಯ: ಸಣ್ಣಕತೆ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು. ೨೦೦೩. ಪುಟ-೨

೨. ಓ.ಎಲ್.ನಾಗಭೂಷಣಸ್ವಾಮಿ, ವಿಮರ್ಶೆಯ ಪರಿಭಾಷೆ, ಅಭಿನವ ಪ್ರಕಾಶನ, ಬೆಂಗಳೂರು. ೨೦೧೩. ಪುಟ-೨೭೬

೩. ಮಲ್ಲಿಕಾ ಘಂಟಿ, ಆಧುನಿಕ ಕನ್ನಡ ಸಾಹಿತ್ಯ ರೂಪಗಳು, ಪ್ರಸಾರಾಂಗ, ಕರ್ನಾಟಕ ವಿ.ವಿ. ಧಾರವಾಡ, ೨೦೦೬, ಪುಟ-೭೦:

೪. ಕನ್ನಡದ ಸಣ್ಣಕಥೆಗಳು, ಕ.ರಾ.ಮು.ವಿ.ಯ ಶೈಕ್ಷಣಿಕ ಪಠ್ಯಕ್ರಮ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ, ೨೦೦೧, ಪುಟ-೭

# ಅಧ್ಯಾಯ-ಐದು
# ಪ್ರಮುಖ ಪ್ರವೃತ್ತಿಗಳು

೫:೧ ಬಂಡವಾಳದ ಆಕ್ರಮಣ

೫:೨ ಅಂಚಿನಲ್ಲಿರುವ ಅರೆಜೀವಗಳು

೫:೩ ಮಾರುಕಟ್ಟೆಯಲ್ಲಿ ತೂಗುವ ಸಂಬಂಧಗಳು

೫:೪ ಬೆಂಕಿಗೆ ಚಿಮುಕಿಸಿದ ಹನಿಗಳು

## ಅಧ್ಯಾಯ-೫

## ಪ್ರಮುಖ ಪ್ರವೃತ್ತಿಗಳು

ಪ್ರವೃತ್ತಿ ಎಂದರೇನು? ಪ್ರವೃತ್ತಿ ಎಂಬುದನ್ನು ಸಾಮಾನ್ಯವಾಗಿ ಮುಂದುವರಿಕೆ, ಮುಂದುವರಿದ ಪ್ರಯತ್ನ, ಚಲನೆ, ವರ್ತನೆ, ನಿಯೋಜನೆ ಚಟುವಟಿಕೆ, ಪ್ರಗತಿ, ಏಳ್ಗೆ, ದರ್ಶನ, ಪ್ರಾರಂಭ ಸಂಬಂಧ ಹಾಗೂ ಆಚಾರ ಎಂದು ಕರೆಯಲಾಗುತ್ತದೆ. ಈ ಪದವು ಇತ್ತೀಚಿನ ದಿನಗಳಲ್ಲಿ ಬಳಕೆಗೆ ಬಂದಿರುವಂತಹದ್ದಲ್ಲ. ಈ ಪದದ ಬಳಕೆಯನ್ನು ಭಗವದ್ಗೀತೆ ಹಾಗೂ ಭರತನ ನಾಟ್ಯಶಾಸ್ತ್ರದಲ್ಲಿಯೂ ಕಾಣುತ್ತೇವೆ. ಭಗವದ್ಗೀತೆಯಲ್ಲಿ “ವಿಜ್ಞಾತುವಿಚ್ಛಾಮಿ ಭವಂತಮಾದ್ಯಂ, ನ ಹಿ ಪ್ರಜಾನಾಮಿ ತವ ಪ್ರವೃತ್ತಿಮ್॥೩೧॥” ಎಂದು ಉಲ್ಲೇಖಿಸಲಾಗಿದೆ. ಈ ಸಾಲು “ಆದಿ ಪುರುಷನಾದ ನಿನ್ನನ್ನು ಯಥಾರ್ಥವಾಗಿ ತಿಳಿದುಕೊಳ್ಳಲು ಇಚ್ಛಿಸುತ್ತೇನೆ. ಏಕೆಂದರೆ ನಿನ್ನ ಪ್ರವೃತ್ತಿಯನ್ನು ನಾನು ತಿಳಿಯೆನು.”[೧] ಎಂಬ ಅರ್ಥವನ್ನು ಕೊಡುತ್ತದೆ. ಈ ಹಿನ್ನೆಲೆಯಲ್ಲಿ ಪ್ರವೃತ್ತಿ ಎಂಬ ಪದವನ್ನು ನಡುವಳಿಕೆ, ಸ್ವಭಾವ ಎಂದು ಅರ್ಥೈಸಿಕೊಳ್ಳಬಹುದು.

“ಭರತನು ತನ್ನ ನಾಟ್ಯಶಾಸ್ತ್ರದಲ್ಲಿ ಪಾತ್ರಗಳು ವಿವಿಧ ಪ್ರದೇಶಗಳಿಗೆ ಸೇರಿರುವುದರಿಂದ ಆ ಪಾತ್ರಗಳ ಪ್ರಾದೇಶಿಕ ಲಕ್ಷಣಗಳನ್ನು ಅಭಿನಯದಲ್ಲಿ ತೋರಿಸುವುದು ಆವಶ್ಯವೆಂದು ಹೇಳುತ್ತಾನೆ. ಈ ಪ್ರಾದೇಶಿಕ ವಿಶಿಷ್ಟತೆಗಳೇ ಪ್ರವೃತ್ತಿಗಳು. ಪ್ರವೃತ್ತಿಯು ಪಾತ್ರದ ಭಾಷೆ, ಉಡುಪು, ಮಾತಿನ ವಿಧಾನ, ದೈಹಿಕ ಚಲನವಲನಗಳು ಹೀಗೆ ಹಲವು ವಿಧಗಳಲ್ಲಿ ವ್ಯಕ್ತವಾಗಬಹುದು.”[೨]

“ನಾಟಕಗಳಅಭಿನಯ ಸಂಪ್ರದಾಯವನ್ನು ಕುರಿತ ಪಾರಿಭಾಷಿಕ. ಪಾತ್ರ ಮತ್ತು ದೇಶ ಭೇದಗಳನ್ನು ಅನುಸರಿಸಿ ನಟರು ಉಪಯೋಗಿಸುವ ಭಾಷೆ, ವೇಷ, ಭೂಷಣ ಭೇದಗಳಿಗೆ ಪ್ರವೃತ್ತಿ ಎಂದು ಹೆಸರು”[೩]

“ಮನಃಶಾಸ್ತ್ರದ ‘ಇನ್‌ಸ್ಟಿಂಕ್ಟ್’ ಎಂಬ ಪದದ ಸಂವಾದಿಯಾಗಿ ಬಳಸುವ ಪದ, ಹುಟ್ಟಿನಿಂದಲೇ ಮನುಷ್ಯನಿಗೆ ಬರುವ ಹಸಿವು, ಕಾಮ ಇಂಥವುಗಳನ್ನು ಪ್ರವೃತ್ತಿ ಎಂದು ಗುರುತಿಸಲಾಗುತ್ತದೆ. ಕೆಲವು ಬಾರಿ ಆಸಕ್ತಿ, ಸ್ವಭಾವ ಎಂಬ ಅರ್ಥದಲ್ಲೂ ಬಳಕೆಯಾಗುತ್ತದೆ. ವೃತ್ತಿಗೆ ವಿರುದ್ಧಾರ್ಥಕ ಎಂಬ ಅರ್ಥದಲ್ಲೂ ಕೆಲವರು ಬಳಸುವುದುಂಟು.”[೪]

ಈ ಎಲ್ಲ ಹೇಳಿಕೆಗಳನ್ನು ಗಮನಿಸಿದಾಗ, ಪ್ರವೃತ್ತಿ ಎಂಬುದು ಸ್ವಭಾವತಃ ಇಲ್ಲವೆ ನಿಯೋಜಿತ ಚಟುವಟಿಕೆಯಿಂದ ನಡೆದು ಹೋಗುವ ಕ್ರಿಯೆ. ಇಲ್ಲಿ ಪ್ರಸ್ತುತ ವೃತ್ತಿ (ಸ್ಥಿತಿ, ರೀತಿ, ನಡತೆ)ಯನ್ನು ಧಿಕ್ಕರಿಸಿ ಮುನ್ನಡೆಯುವ ಸಾಧ್ಯತೆಯು ಇದೆ ಎಂಬುದು ಸ್ಪಷ್ಟವಾಗುತ್ತದೆ. ಇಂದಿನ ಸಮಾಜದಲ್ಲಿ ಮತೀಯವಾದ, ಕೋಮುವಾದ, ಹಿಂಸಾರತಿ ಹಾಗೂ ಹಣವೇ ಮುಖ್ಯವಾಗಿ ಕಾಣುತ್ತಿವೆ. ಹೀಗಾಗಿ ಮನುಷ್ಯ ತಾನು ವಿನಾಶದ ಹಾದಿ ತುಳಿದಿರುವುದಲ್ಲದೇ ತನ್ನ ಸಹಜೀವಿಗಳ ಹಾಗೂ ಪರಿಸರದ ವಿನಾಶಕ್ಕೂ ಮುಂದಾಗಿದ್ದಾನೆ. ಮಾನವೀಯ ಮೌಲ್ಯಗಳನ್ನು ದಿಕ್ಕರಿಸಿ ನಡೆಯುವ ಈ ಕ್ರೀಯೆ ವೃತ್ತಿಯ ವಿರುದ್ಧದ ನೆಲೆಯೆ. ಇಂತಹ ಜಾಗತೀಕರಣದ ದಟ್ಟ ಪ್ರಭಾವಕ್ಕೆ ಪ್ರಸ್ತುತ ಸಂದರ್ಭವು ಒಳಗಾಗಿರುವುದರಿಂದ ಪ್ರವೃತ್ತಿ ಎಂಬುದನ್ನು ಇಲ್ಲಿ ವೃತ್ತಿಯ ವಿರುದ್ಧದ ನೆಲೆ ಎಂದು ಗುರುತಿಸಲಾಗುತ್ತಿದೆ.

ಜಾಗತೀಕರಣ ಎನ್ನುವುದು ಆರ್ಥಿಕ ನೀತಿ. ಈ ಆರ್ಥಿಕ ನೀತಿಯು ಹಣದ ಮುಕ್ತ ವಹಿವಾಟಿಗೆ ಸಂಬಂಧಿಸಿದ್ದು. ಸಮಾಜ ಸಂರಚನೆಯ ಮೇಲೆ ದಟ್ಟವಾದ ಪರಿಣಾಮವನ್ನು ಉಂಟುಮಾಡಿರುವಂಥದ್ದು. ಭಾರತೀಯ ಸಮಾಜ ರಚನೆಯ ಸಂಕೀರ್ಣ ಪದರುಗಳ ಮೇಲೆ ಇದು ಬೀರಿದ ಪರಿಣಾಮವೇನು? ಇರುವ ರಚನೆಗಳಿಗೇ ವಿಸ್ತೀರ್ಣ ಒದಗಿತೇ? ಅಥವಾ ಹಳೆಯ ರಚನೆಗಳನ್ನು ಮುರಿದು ಕಟ್ಟುವ ಸ್ಥಿತ್ಯಂತರ ನಡೆಯಿತೇ? ಇದರಿಂದ ಉಂಟಾದ ಪರಿಣಾಮಗಳು ದೀರ್ಘಕಾಲೀನವೇ? ಅಥವಾ ಅಲ್ಪಕಾಲೀನವೇ? ಜಾಗತೀಕರಣವು ತನ್ನ ಉಳಿವಿಗಾಗಿ ಚಾಲ್ತಿಗೆ ತಂದ ಸಾಮಾಜಿಕ ಒಪ್ಪಿತಗಳು ಯಾವವು?

ಸಾಹಿತ್ಯ–ಕಲೆಯಂತಹ ಸಂವೇದನಾಶೀಲ ಅಭಿವ್ಯಕ್ತಿಗಳು ಈ ಬದಲಾದ ಸಮಾಜವನ್ನು ಅರ್ಥೈಸಿಕೊಂಡ ವಿಧಾನ ಮತ್ತು ಪ್ರತಿಕ್ರಿಯಿಸಿದ ವಿಧಾನಗಳನ್ನು ಅಧ್ಯಯನ ಮಾಡುವುದು ಎಂದರೆ; ಜಾಗತೀಕರಣದ ಛಾಯೆಗಳನ್ನು ದಾಖಲಿಸಿಕೊಳ್ಳುವುದು ಎಂದೇ ಆಗಿರುತ್ತದೆ. ಸಣ್ಣಕಥೆ ಎಂಬ ಪ್ರಕಾರವು ಕಥನ ಚೌಕಟ್ಟಿನೊಳಗೆ ವ್ಯವಹರಿಸಬೇಕಾಗಿರುವುದರಿಂದ ಸಹಜವಾಗಿಯೇ ಅದಕ್ಕೊಂದು ಸಾಮಾಜಿಕ ಪರಿಪ್ರೇಕ್ಷ್ಯವಿರುತ್ತದೆ ಮತ್ತು ಸಮಕಾಲೀನ ವಾಸ್ತವದೊಂದಿಗೆ ಮುಖಾಮುಖಿಯಾಗದೆ ಕಥನ ಭಿತ್ತಿಯು ರೂಪುಗೊಳ್ಳುವುದಿಲ್ಲ. ಸಾಮಾನ್ಯವಾಗಿ ಕಥೆಗಳ ಹುಟ್ಟಾಗಿರುವುದೇ ಸಮಾಜಕ್ಕೆ ಸಂದೇಶವಾಹಕವಾಗಿ ದುಡಿಯಲು. ಜನಪದ ಕಥೆಗಳನ್ನು ಗಮನಿಸಿದರೆ, ಅವು ಯಾವ ಯಾವ ಕಾರಣಕ್ಕಾಗಿ, ಯಾವ ಸಂದರ್ಭದಲ್ಲಿ ಯಾವ ಆಶಯದೊಂದಿಗೆ ಜನ್ಮತಳೆದವು ಎನ್ನುವುದು ಸ್ಪಷ್ಟವಾಗುತ್ತದೆ. ಒಂದು ಕಾಲದ ಸಮಾಜ ಒಪ್ಪಿಕೊಂಡ ಮೌಲ್ಯಗಳನ್ನು

ಇನ್ನೊಂದು ಕಾಲ ಮರುಪರಿಶೀಲನೆಗೆ ಒಡ್ಡಬಹುದು ಅಥವಾ ತಿರಸ್ಕರಿಸಬಹುದು. ಆದರೆ ಕಥೆಗಳು ರೂಪುಗೊಂಡಿರುವುದು ಮಾತ್ರ ಸಾಮಾಜಿಕ ಅನುಸಂಧಾನದಲ್ಲಿ ಎನ್ನುವುದನ್ನು ಮರೆಯಲು ಸಾಧ್ಯವಿಲ್ಲ. ಮಹಾಕಾವ್ಯಗಳ ಕಾಲದಿಂದಲೂ ಈ ಅಭಿಮತವನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಕಲೆ-ಸಾಹಿತ್ಯಗಳು ಸಾಮಾಜಿಕತೆಯ ಸ್ಪರ್ಶವಿಲ್ಲದೆ ತಮ್ಮನ್ನು ತಾವು ಪ್ರತಿಪಾದಿಸಿಕೊಳ್ಳಲಾರವು ಎನ್ನುವುದು ಸತ್ಯವಾದರೂ; ಇದು ಕಥೆಯ ಆವರಣವಾದಾಗ ಇನ್ನಷ್ಟು ಪ್ರಸ್ತುತಗೊಳ್ಳುತ್ತದೆ. ಜಾಗತೀಕರಣದ ಸಮಾಜದ ಗತಿಸ್ಥಿತಿಯನ್ನು ಬಿಂಬಿಸಿದ ಕಲಾ ಮಾಧ್ಯಮದಲ್ಲಿ ಸಣ್ಣಕಥೆಗಳಿಗೆ ವಿಶೇಷ ಸ್ಥಾನವಿದೆ.

ಸಣ್ಣಕಥೆಗಳ ಅಧ್ಯಯನದ ಸೂಕ್ಷ್ಮಹಂತಕ್ಕೆ ಪ್ರವೇಶಿಸುವ ಪೂರ್ವದಲ್ಲಿ ಈ ಕಳೆದ ಮೂರು ದಶಕಗಳಲ್ಲಿ ಕನ್ನಡ ಸಾಹಿತ್ಯದಲ್ಲಿ ನಡೆದ ಪ್ರಧಾನ ಪರಿವರ್ತಿತ ಲಕ್ಷಣಗಳನ್ನು ಗಮನಿಸಬೇಕಿದೆ. ಕಾವ್ಯವು ಮನುಷ್ಯನ ಅಂತರಂಗದ ಪಿಸುಗು.ಅವನ ದೌರ್ಬಲ್ಯ ಮತ್ತು ಸಬಲತೆಗಳ ಸಾಕ್ಷೀಪ್ರಜ್ಞೆ, ಒಳಿತು-ಕೆಡಕುಗಳ ಅಂತರಾವಲೋಕನ ಎಂಬ ಸೂಕ್ಷ್ಮ ಪಲಕುಗಳನ್ನು ಕಳಚಿಕೊಂಡು, ಬರಹ ಎನ್ನುವುದೇ ಒಂದು ಬೌದ್ಧಿಕ ಜವಾಬ್ದಾರಿ ಎಂಬ ತಿಳಿವಿಗೆ ಬೆಳೆದದ್ದು ಈ ಕಾಲದಲ್ಲಿ ಗಂಡು-ಹೆಣ್ಣಿನ ಪ್ರೇಮವನ್ನು ಆದರ್ಶ ಮಾನವ ಧರ್ಮವಾಗಿ ನೋಡಿದ ಬೇಂದ್ರೆ, ಕುವೆಂಪು, ನರಸಿಂಹಸ್ವಾಮಿಯವರ ಕಾವ್ಯಕ್ಕೂ ದಲಿತ-ಬಂಡಾಯ ಕಾಲದ ಸಿದ್ಧಲಿಂಗಯ್ಯನವರ ಕಾವ್ಯಕ್ಕೂ ಇರುವ ವ್ಯತ್ಯಾಸವನ್ನು ಕಂಡಿದ್ದೇವೆ. ನವೋದಯದಲ್ಲಿ ಮನುಷ್ಯ ಬದುಕಿನಲ್ಲಿ ನೋವು ಹುಟ್ಟಲು ಇರುವ ಮುಖ್ಯ ಕಾರಣ - ವೈಯಕ್ತಿಕವಾದದ್ದು. ಆದರೆ ಬಂಡಾಯೋತ್ತರ ಕಾಲದಲ್ಲಿ ಪ್ರೇಮದ ಅಸಫಲತೆಯ ಕಾರಣ ಸಾಮಾಜಿಕವಾದದ್ದು. ಉದ್ದೇಶಪೂರ್ವಕವಾದದ್ದು.

ನಿನ್ನ ಯುಗಾದಿಯ ಬೇವು ಬೆಲ್ಲ
ನನ್ನ ರಮಜಾನಿನ ದೂದಖುರ್ಮಾ ಎಂದೂ ಒಂದಾಗುವುದಿಲ್ಲ
ಅದಕ್ಕೇ ಹುಡುಗರಿಗೆ ಮತ್ತೆ ಮತ್ತೆ
ರಕ್ತದಲ್ಲಿ ಪ್ರೇಮಪತ್ರ ಬರೆಯುವಾಸೆ (ಆರೀಫ್ ರಾಜಾ)

ಜಾಗತೀಕರಣದ ಸಂಗತಿಗಳು ಮನುಷ್ಯ ಬದುಕನ್ನು ವೈಯಕ್ತಿಕವಾಗಿಯೂ ಸಾಮಾಜಿಕವಾಗಿಯೂ ಬದಲಿಸಿದವು. ಅತಂತ್ರವಾಗಿಸಿದವು. ಸವಿತಾ ನಾಗಭೂಷಣ ಅವರ 'ಮಹಮ್ಮದನಿಗೊಂದು ಪ್ರೇಮಪತ್ರ' ಕವಿತೆಯು -ಸುಮ್ಮನೆ ಬರೆದ ಪತ್ರವೊಂದು, ಮನೆಮಂದಿಯ ಊರಮಂದಿಯ ಕೈಸೇರಿ ಪ್ರೇಮಪತ್ರ ಎಂದು ಛಾಪು ಹಾಕಿಸಿಕೊಂಡು; ಆ

ಒತ್ತಡದ ಕಾರಣಕ್ಕಾಗಿಯೇ ಪ್ರೇಮಪುಷ್ಪ ಅರಳಿ ಇಬ್ಬರ ಮಧ್ಯೆ ಮಸೀದಿಯ ಗೋಡೆ, ದೇವಾಲಯದ ಗೋಪುರಗಳೆಲ್ಲ ಅಡ್ಡಬಂದು ಕಡೆಗೂ ಪ್ರೇಮವೇ ಗಟ್ಟಿಯಾದ ಕಥನವನ್ನು ಹೇಳುತ್ತದೆ. ಈ ಕಾಲದ ಸಂವೇದನೆಯಲ್ಲಿ ವೈಯಕ್ತಿಕವಾದ ಭಾವನಾವಲಯವನ್ನೂ ಸಾಮಾಜಿಕತೆಯು ನಿಷ್ಠುರವಾಗಿ ನಿರ್ಬಂಧಿಸುತ್ತಿರುವ ಚಿತ್ರವಿದೆ. ಈ ಹಂತದಲ್ಲಿ ವೈಯಕ್ತಿಕತೆ ಮತ್ತು ಸಾಮಾಜಿಕತೆಗಳೆರಡೂ ಅಭಿನ್ನವಾಗಿ ಬೆರೆತುಹೋಗಿದೆ.

ಈ ಅವಧಿಯಲ್ಲಿ ಕನ್ನಡ ಸಂಶೋಧನೆ ಹಾಗೂ ವಿಮರ್ಶಾ ವಲಯ ಸಾಕಷ್ಟು ಮಾಗಿತ್ತು. ಬಾಬರಿ ಮಸೀದಿ ಧ್ವಂಸ, ಗುಜರಾತ್ ಹತ್ಯಾಕಾಂಡ, ಗೋದ್ರಾ ಸ್ಫೋಟಗಳಂತಹ ಘಟನೆಗಳಿಂದ ಬಹುತೇಕ ನೆಲಕಚ್ಚಿದ ಸೌಹಾರ್ದತೆಯ ಸೂಚ್ಯಂಕವನ್ನು ಮರಳಿ ಒದಗಿಸಿಕೊಳ್ಳುವ ಸವಾಲನ್ನು ಎದುರಿಸಬೇಕಾಗಿತ್ತು. ಅದುವರೆಗೂ ಸಮಾಜದ ಸೌಹಾರ್ದ ಪರಂಪರೆಯನ್ನು ಶೋಧಿಸುವುದು, ಸಂಕಲಿಸುವುದು ನಮ್ಮ ಅಧ್ಯಯನ ಮಾರ್ಗದ ಪ್ರಧಾನ ಅಂಶವಾಗಿರಲಿಲ್ಲ. ಡಾ.ರಹಮತ್ ತರೀಕೆರೆಯವರು 'ಬಾಬರಿ ಮಸೀದಿ ನಾಶದ ಘಟನೆಯು ಸಂಶೋಧನಾ ವಲಯದಲ್ಲಿ ನನ್ನ ಆದ್ಯತೆಯನ್ನು ಬದಲಿಸಿತು' ಎಂದಿರುವುದನ್ನು ಇಂತಹ ಬೆಳವಣಿಗೆಗಳ ದಿಕ್ಸೂಚಿ ಎಂದು ಪರಿಗಣಿಸಬಹುದು. ಬಂಡವಾಳಶಾಹಿ ತನ್ನ ಹಿತಾಸಕ್ತಿಗಾಗಿ ಧಾರ್ಮಿಕ ಅಸಹಿಷ್ಣುತೆಯನ್ನು ಹುಟ್ಟುಹಾಕಿ, ಒಡೆದಾಳುವ ನೀತಿಯನ್ನು ಪ್ರಚುರಗೊಳಿಸಿದ್ದರ ಕೆಟ್ಟ ಪರಿಣಾಮಗಳನ್ನು ಭಾರತ ಉಣ್ಣತೊಡಗಿತು. ಈ ಬೆಂಕಿಯನ್ನು ಆರಿಸುವ ಕೈನೀರಿನಂತೆ ಸೌಹಾರ್ದತೆಯ ಜಾಲವನ್ನು ಶೋಧಿಸುವ ಪ್ರಯತ್ನಗಳು ನಡೆದವು. ಬಹುಧಾರ್ಮಿಕ ಪರಿಸರದಲ್ಲಿ ಅರಿತು ಬೆರೆತು ಹೋದ ಪ್ರತಿಭೆಗಳ ಶೋಧನೆಗಳು ದಾಖಲಾದವು. ಅಮೀರಬಾಯಿ ಕರ್ನಾಟಕಿ ಎಂಬ ಹಾಡುಗಾರ್ತಿಯ ಬಾಳನ್ನು ಕುರಿತ ಶೋಧನೆಯನ್ನು ಈ ಹಂತದಲ್ಲಿ ನೆನೆಯಬೇಕು. ನಾಥ, ಸಿದ್ಧ, ಶಾಕ್ತಪಂಥಗಳೇ ಮುಂತಾದ ಶ್ರಮಣ ಧಾರೆಗಳ ಶೋಧನೆ; ಕರ್ನಾಟಕದ ಸೌಹಾರ್ದ ಸಂಸ್ಕೃತಿಯನ್ನು ಮರುಸ್ಮೃತಿಗೆ ತರುವ–ತತ್ವಪದಗಳ ಸಂಗ್ರಹ ಕಾರ್ಯ; ವಚನ ಮತ್ತು ದಾಸ ಪರಂಪರೆಗಳನ್ನು ಈ ಹಿನ್ನೆಲೆಯಿಂದ ಮರುಪ್ರವೇಶ ಮಾಡುವುದು, ಕೈಫಿಯತ್ತುಗಳ ಅಧ್ಯಯನ, ಮೊಹರಂ ಪದಗಳ ಸಂಪಾದನೆ, ಸೌಹಾರ್ದತಾ ತಾಣಗಳ ಅಧ್ಯಯನ ಹೀಗೆ ಕನ್ನಡದ ಅಧ್ಯಯನದ ವಿಧಾನದಲ್ಲಿಯೇ ಚಾರಿತ್ರಿಕ ಪರಿವರ್ತನೆಗಳು ಕಂಡವು. ಸಂಶೋಧನೆ ಸತ್ಯವನ್ನು ಹೇಳುವುದು ಎಂದಷ್ಟೆ ಅಲ್ಲ ಸತ್ಯವನ್ನು ಯಾವ ಕಾರಣಕ್ಕಾಗಿ ಯಾವ ಫಲಿತಕ್ಕಾಗಿ ಹೇಳಬೇಕಿದೆ ಎಂಬ ಎಚ್ಚರವೂ ಕಂಡು ಬಂದಿತು. ವಿಮರ್ಶೆ ಸಂಶೋಧನೆಯು ಕೃತಿಯನ್ನು ಅವಲಂಭಿಸಿಕೊಂಡಿರುವ ಮೌಲ್ಯಮಾಪನ ಪ್ರಕ್ರಿಯೆ

ಎಂಬ ನಿಲುವಿಗಿಂತಲೂ, ಕೃತಿ ಮೂಲಕ ಸಮಕಾಲೀನತೆಯನ್ನು ಮೌಲ್ಯಮಾಪನ ಮಾಡುವ ಬಗೆ ಎಂಬ ವಿಸ್ತರಣೆ ಉಂಟಾಯಿತು.

ಈ ಅವಧಿಯಲ್ಲಿ ಸಾಹಿತ್ಯವಲಯದಲ್ಲಿ ಸಂಭವಿಸಿದ ಬಹುಮುಖ್ಯ ಬದಲಾವಣೆ ಎಂದರೆ, ವಿಚಾರ ಸಾಹಿತ್ಯದ ಬೆಳವಣಿಗೆ, ಅಂಕಣ ಬರಹಗಳ ಬೆಳವಣಿಗೆ. ಸಾಹಿತ್ಯ-ಕಲೆಗಳು ವಿಚಾರದ ಹೊರತಲ್ಲ ಎನ್ನುವುದು ಸತ್ಯ. ಯಾವ ಕಾಲದಲ್ಲೂ ಸಾಹಿತ್ಯದ ಕಲೆಯ ಸೃಷ್ಟಿಯ ಉದ್ದೇಶ ಬರಿಯ ಮನರಂಜನೆ ಆಗಿರಲಿಲ್ಲ. ಆದರೆ, ಮಾರುಕಟ್ಟೆ ನೀತಿಯು ಮನುಷ್ಯರನ್ನು ಸರಕಾಗಿ-ಗ್ರಾಹಕರಾಗಿ ಮಾತ್ರ ಪರಿವರ್ತಿಸಿ, ಅವರ ಆಲೋಚನಾ ಸ್ವಾತಂತ್ರ್ಯದ ಮೇಲೆ ತನ್ನ ದಾಳಿಯನ್ನು ಪ್ರಾರಂಭಿಸಿತ್ತು. ಜಗತ್ತಿನ ಚಿಂತಕ, ದಕ್ಷಿಣ ಆಫ್ರಿಕಾದ ಲೇಖಕ ಗೂಗಿ ವಾ ಥಿಯಾಂಗೊ –ವಸಾಹತುಶಾಹಿ ಕಟ್ಟಕಡೆಗೆ ಆಕ್ರಮಿಸಿಕೊಳ್ಳುವ ಲೋಕವೆಂದರೆ ಸೋತವರ ಮನೋಲೋಕ. ಅದು ತನ್ನ ಕಡೆಯ ಗೆಲುವಿನ ಧ್ವಜವನ್ನು ಗುಲಾಮರ ಮನಸ್ಸುಗಳಲ್ಲಿ ನೆಡುತ್ತದೆ –ಎನ್ನುತ್ತಾನೆ. ಈ ಮಾತು, ಜಾಗತೀಕರಣದ ಕಾಲದಲ್ಲಿ ಅತ್ಯಂತ ಭಯಂಕರ ರೀತಿಯಲ್ಲಿ ಸತ್ಯವಾಗತೊಡಗಿತು. ಮನುಷ್ಯರು ಆಲೋಚನಾ ಸಾಮರ್ಥ್ಯವಿಲ್ಲದ ದುರ್ಬಲ ಜೀವಿಗಳಂತಾಗತೊಡಗಿದರು. ಸಾಮಾಜಿಕ ವಿಪ್ಲವಗಳು ಘಟಿಸತೊಡಗಿದವು. ಈ ಕಾಲದ ತುರ್ತನ್ನು ಎದುರಿಸಲು ಬರಹಗಾರರು ಸಜ್ಜಾಗಬೇಕಾಯಿತು. ವಿಚಾರ ಸಾಹಿತ್ಯ, ಅಂಕಣ ಬರಹ ಮತ್ತು ಅನ್ಯ ಕಾಲ-ದೇಶ-ಭಾಷೆಗಳಿಂದ ನಮ್ಮ ಸಂಕಟಗಳಿಗೆ ಮದ್ದರೆಯುವ ಅನುವಾದ ಬರಹಗಳ ಸೃಷ್ಟಿಯಾಯಿತು. ಇದು ಕನ್ನಡದ ಮಟ್ಟಿಗೆ ಹೊಸ ಶಕ್ತಿ ಸಂಚಯನವಾಗಿತ್ತು. ಕಳೆದ ಕಾಲು ಶತಮಾನದ ಕನ್ನಡದ ಅಂಕಣ ಬರಹಗಳನ್ನು ನೋಡಿದರೆ ಅಲ್ಲಿ ಎರಡು ವಿಚಾರಗಳ ನೇರ ಸಂಘರ್ಷ ಕಾಣುತ್ತದೆ. ಜಾಗತೀಕರಣ ಪ್ರಾಯೋಜಿತ ಅಭಿವೃದ್ಧಿಯ ಮಾದರಿಯನ್ನು ಆರಾಧಿಸುವ, ಮೂಲಭೂತವಾದಿ ಕೋಮುವಾದಿ ಮನಸ್ಥಿತಿಯನ್ನು ಆರಾಧಿಸುವ ಒಂದು ವಿಚಾರ ಲಹರಿಯಾದರೆ, ಇನ್ನೊಂದು –ಕೋಮುವಾದ ಹಾಗೂ ಮಾರುಕಟ್ಟೆ ಮೌಲ್ಯಗಳನ್ನು ತಾತ್ವಿಕವಾಗಿ ವಿರೋಧಿಸಿ, ಸೋದಾರಣವಾಗಿ ನಿರೂಪಿಸುವ ವೈಚಾರಿಕತೆಯ ಇನ್ನೊಂದು ಮಾದರಿ. ಈ ವರ್ಗೀಕರಣ ಸಾಂಸ್ಕೃತಿಕವೆನಿಸಿಕೊಂಡ ಎಲ್ಲ ಕ್ಷೇತ್ರಗಳಲ್ಲಿಯೂ ವ್ಯಕ್ತವಾಗತೊಡಗಿತ್ತು. ಜನಸಮುದಾಯವನ್ನು ತೀವ್ರವಾಗಿ ತಟ್ಟುವ ಸಿನಿಮಾದಂತಹ ವಲಯದಲ್ಲಿ- ಕೂಡ ಬದುಕಿನ ಘನತೆಯನ್ನು ಹೇಳುವ ಮಾದರಿಯ ನಿರೂಪಣೆಗಳು ಬಂದವು. ಚೆಕ್ ದೆ ಇಂಡಿಯಾ, ಭಜರಂಗಿ ಭಾಯಿಜಾನ್ ಮುಂತಾದವು. ಇಂತಹ ವಿರಳ ಮಾದರಿಗಳನ್ನು

ಹೊರತುಪಡಿಸಿದರೆ; ಇನ್ನುಳಿದವು ಬದುಕನ್ನು ಉಡಾಫೆಯಾಗಿ, ಸಿಲ್ಲಿಯಾಗಿ ನೋಡುವ ಅಥವಾ ಪ್ರಾಚೀನ ಪಳೆಯುಳಿಕೆಗಳಂತಹ ನಿರೂಪಣೆಗಳನ್ನು ಹೊಂದಿದ ಜನಪ್ರಿಯ ಮಾದರಿಗಳೇ ಆಗಿದ್ದವು. ಈ ವೈರುಧ್ಯಗಳು ಸುಮ್ಮನೆ ನಡೆದದ್ದಲ್ಲ ಎನ್ನುವುದನ್ನು ಗಮನಿಸಬೇಕು. ಸಂಸ್ಕೃತಿಯ ಹೆಸರಿನಲ್ಲಿ, ಮನರಂಜನೆಯ ಪ್ರದರ್ಶನಗಳು, ಹಾಸ್ಯಸಂಜೆಗಳು ಹೆಚ್ಚುತ್ತ; ಹಣಗಳಿಕೆಯ ದುಡಿಮೆಯಿಂದ ದಣಿದ ಮನಸ್ಸಿಗೆ ಮುದ ನೀಡುವುದೇ ಅಂತಿಮ ಆದ್ಯತೆ ಎಂಬ ವಾತಾವರಣ ಸೃಷ್ಟಿಯಾಯಿತು. ವಿಚಾರಪೂರ್ಣವಾದ ವಿಶ್ಲೇಷಣೆಗಳು, ಚಿಂತನಾ ವಲಯಗಳು ಮತ್ತೆ ಮತ್ತೆ ಹಿನ್ನೆಲೆಗೆ ಸರಿಯಲು ತೊಡಗಿದವು. ಇಂತಹ ವಾತಾವರಣವು ಗಂಭೀರ ಕಲಾ ಪ್ರಕಾರಕ್ಕೆ ಹೆಚ್ಚು ಸವಾಲಿನದಾಗಿತ್ತು. ಸಾಹಿತ್ಯಕ್ಕಂತೂ ಅಳಿವು ಉಳಿವಿನ ಪ್ರಶ್ನೆಯಾಗಿತ್ತು.

ಈ ದಶಕಗಳ ಸಾಹಿತ್ಯದ ಮಹತ್ವದ ಲಕ್ಷಣ ಅದರ ಸಂಕರಶೀಲತೆ, ಕಾವ್ಯ, ಕಥನ, ಬರಹಗಳೆಂಬ ಹೊರರೂಪ ವೈವಿಧ್ಯವನ್ನು ಮರೆಯಿಸಿ; ಒಂದರೊಳಗೊಂದು ಕಸಿಗೊಂಡ ಸಂಕೀರ್ಣ ಸೌಂದರ್ಯದ ಸ್ಥಿತಿಯಿದು. ಇದರೊಂದಿಗೆ, ಸಂವೇದನಾ ಸ್ತರದಲ್ಲಿಯೇ ಕಸಿಗಟ್ಟಿದ ನಿಲುವೊಂದು ಕಾಣುತ್ತದೆ. ದಲಿತ-ಬಂಡಾಯ ಸಾಹಿತ್ಯ ಚಳುವಳಿಯ ಕಾಲದಲ್ಲಿ –ಮುಸ್ಲಿಂ ಸಂವೇದನೆ, ದಲಿತ ಸಂವೇದನೆ, ಮಹಿಳಾ ಸಂವೇದನೆ ಎಂಬ ಪ್ರತ್ಯೇಕ ಧಾರೆಗಳು ಬಂದು ಸಾಹಿತ್ಯ ಸಂವೇದನೆಯನ್ನು ಪ್ರಬಲಗೊಳಿಸಿದ್ದನ್ನು ನೋಡುತ್ತೇವೆ. ಆದರೆ, ಬಂಡಾಯೋತ್ತರದ ಈ ಕಾಲದಲ್ಲಿ –ಈ ಎಲ್ಲವೂ ಪರಸ್ಪರ ಮಿಳಿತಗೊಂಡ ಅಭಿವ್ಯಕ್ತಿ ಇದೆ. ಕನ್ನಡದ ಪ್ರಜ್ಞಾವಂತಿಕೆಯ ಸಾಕ್ಷೀರೂಪವಾಗಿಯೂ ಇದನ್ನು ಕಾಣುತ್ತೇವೆ.

ಪ್ರಭುತ್ವವು ತನ್ನ ಹಿತಾಸಕ್ತಿಗಾಗಿ ಚಲಾವಣೆಗೆ ತಂದ ಜಾಗತೀಕರಣದ ಪರಿಣಾಮವನ್ನು ಕಾಣಿಸಲು, ಅದರಿಂದ ಪಾರಾಗುವ ಪರ್ಯಾಯವನ್ನು ಶೋಧಿಸಲು ದೃಶ್ಯ ಮಾಧ್ಯಮಗಳು, ಕಲಾ ಮಾಧ್ಯಮಗಳು ನಿರಂತರವಾಗಿ ದುಡಿದಿವೆ. ಭಾರತದ ಸಿನೆಮಾ ಕ್ಷೇತ್ರದಲ್ಲಿ ಉಂಟಾದ ಪ್ರಯೋಗಗಳನ್ನು, ದೇಸಿ ಸಿನಿಮಾ ಮತ್ತು ರಂಗಭೂಮಿಗಳ ಆದ್ಯತೆಗಳನ್ನು ಕಾಣುತ್ತೇವೆ.

ಜಾಗತೀಕರಣದ ಏಕಮಾದರಿಯ ಆರ್ಥಿಕ-ಸಾಮಾಜಿಕ ನೀತಿಯ ಹೇರಿಕೆಯ ಪರಿಣಾಮವಾಗಿ ಪ್ರಾದೇಶಿಕ ಭಾಷೆಗಳು ದಿಗ್ಬಂಧನಕ್ಕೆ ಒಳಗಾದವು. ಸಾವಿರಾರು ವರ್ಷಗಳ ಶ್ರೀಮಂತ ಪರಂಪರೆಯಿರುವ ಕನ್ನಡದಂತಹ ಭಾಷೆಯು ಅಳಿವಿನ ಅಂಚಿಗೆ ಸರಿಯುತ್ತಿರುವ ಭಾಷೆಯಾಗುತ್ತಿತ್ತು. ಜಗತ್ತಿನ ಭಾಷಾ ಭೂಪಟವು ಪ್ರಕಟಿಸಿದ ಅಂಕಿಸಂಖ್ಯೆಗಳ ಪ್ರಕಾರ ಕಳೆದ

ದಶಕದಲ್ಲಿ ಅತ್ಯಂತ ಕಡಿಮೆ ಬಳಕೆಯ ಸೂಚ್ಯಂಕವನ್ನು ತೋರಿದ ಭಾರತೀಯ ಭಾಷೆ ಕನ್ನಡವಾಗಿತ್ತು. ಮಾತೃ ಭಾಷೆಯಾಗದೆ, ಮನೆಭಾಷೆಯಾಗದೆ ಅಂಚಿಗೆ ಒತ್ತುವರಿಯಾಗತೊಡಗಿತ್ತು. ಇದಕ್ಕೆ ಕಾರಣ, ಜಾಗತೀಕರಣವು ಒಪ್ಪಿತ ಮಾದರಿಯಾಗಿಸಿದ ನಾಗರಿಕ ಕಲ್ಪಿತಗಳು ಶಿಕ್ಷಣದ ಹಂತದಲ್ಲಿಯೇ, ವೃತ್ತಿ ಶಿಕ್ಷಣದ ಆದ್ಯತೆ ಮತ್ತು ಅಲ್ಲಿ ಪ್ರಾದೇಶಿಕ ಭಾಷೆಗೆ ಸ್ಥಾನ ಇಲ್ಲದಿರುವ ತಾರತಮ್ಯ ಸೃಷ್ಟಿಯಾಯಿತು. ಯಾಜಮಾನ್ಯದ ಆರ್ಥಿಕ ನೀತಿಯನ್ನು ಒಪ್ಪಿಕೊಂಡಿದ್ದರ ಪರಿಣಾಮವಾಗಿ, ಸಾಂಸ್ಕೃತಿಕ ಅನನ್ಯತೆಯನ್ನು ಬಿಟ್ಟುಕೊಡಬೇಕಾಯಿತು. ಇಂತಹ ಭಾಷಿಕ ಪರಿಸರವು ಸಾಹಿತ್ಯಿಕವಾಗಿಯಂತೂ ಉಸಿರುಗಟ್ಟಿಸುವ ಪರಿಸ್ಥಿತಿಯಾಗಿರುತ್ತದೆ. ಬಹುದೊಡ್ಡ ಜ್ಞಾನ-ವಿವೇಕಗಳು ಸಂಚಿತವಾದ ನೆಲದಲ್ಲಿ ಅದರ ಸ್ವೀಕರಣವೇ ನಡೆಯದಿರುವ ದುರಂತವಿದು. ಸಾಹಿತ್ಯದ ಓದುಗ ವರ್ಗದ ಕೊರತೆ ಒಂದು ಪ್ರಬಲ ಸಮಸ್ಯೆಯಾಗಿ ಕಾಡಿದೆ. ಓದುವರ್ಗದಲ್ಲಿಯೂ ವಿಚಾರಾಸಕ್ತಿಯು ಬೇಕಿಲ್ಲದ, ಹೂ ಹಗುರು ರಂಜನೆಗಳನ್ನು ಬಯಸುವ ಒಂದು ಮಾದರಿಯಿದೆ. ಮಾತ್ರವಲ್ಲ; ಜಾಗತೀಕರಣ ಹಾಗೂ ಕೋಮುವಾದಗಳು ಸಮಾಜದಲ್ಲಿ ಹಿಂದೂತ್ವದ ಏಕಮಾದರಿಯನ್ನು ಬಿಂಬಿಸಿದ ಪರಿಣಾಮವಾಗಿ; ಅಂತಹ ಕಥನಗಳನ್ನೇ ಸಾಹಿತ್ಯಿಕವಾಗಿಯೂ ಕಲೆಯಾಗಿಯೂ ಬಯಸುವ ಕಾರ್ಯಕರ್ತರ ಪಡೆಯನ್ನು ಸಿದ್ಧಗೊಳಿಸಲಾಯಿತು. ಇದರ ಪರಿಣಾಮವನ್ನು ಕನ್ನಡ ಮನಸ್ಸುಗಳು ತೀವ್ರವಾಗಿ ಕಂಡಿವೆ. ಕಾದಂಬರಿಯಂತಹ ಸುದೀರ್ಘ ನಿರೂಪಣೆಗಳ ಓದಿನ ವ್ಯವಧಾನ ಕಷ್ಟವಾಗುತ್ತಿರುವ ಕಾಲದಲ್ಲಿಯೂ ಎಸ್.ಎಲ್.ಭೈರಪ್ಪನವರ ಕಾದಂಬರಿ 'ಆವರಣ' ೫೦೦೦ ಪ್ರತಿಗಳ ಮಾರಾಟದ ದಾಖಲೆ ಸೃಷ್ಟಿಸುವುದು ಮತ್ತು ಇದೊಂದು ಚಾರಿತ್ರಿಕ ಕಾದಂಬರಿ ಎಂಬ ಅಧಿಕೃತತೆಯನ್ನು ಬಿಂಬಿಸುವ ಪ್ರಯತ್ನವನ್ನು ನೋಡುತ್ತೇವೆ. ಆವರಣವೇ ಇಷ್ಟೊಂದು ಓದುಗವರ್ಗವನ್ನು ಹೇಗೆ ಪಡೆಯಿತು? ಎಂಬ ಪ್ರಶ್ನೆಯ ಬೆನ್ನುಹತ್ತಿದರೆ -ಆವರಣದ ಕಥಾ ಶಿಲ್ಪವೇನು? ಪ್ರತಿಪಾದನೆಯೇನು? ಆಶಯವೇನು? ಇದನ್ನು ಓದಿಸಿದ್ದು ಯಾರಿಗೆ? ಓದಿಸಿದವರು ಯಾರು? ಎಂಬ ಬಹು ಆಯಾಮಗಳು ತೆರೆದುಕೊಳ್ಳುತ್ತವೆ. ರಾಜಕೀಯ ನಿಲುವು ಓದಿನ ರಾಜಕಾರಣವಾಗಿ ವಿಸ್ತರಣೆಗೊಂಡ ವಿಧಾನವೂ ಕಾಣುತ್ತದೆ. ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕವಾಗಿ ರಾಜಕೀಯ ಹಿತಾಸಕ್ತಿಯ ಉದ್ದೇಶದಿಂದ ಏಕರೂಪೀ ಸಂಹಿತೆಯನ್ನು ಚಲಾವಣೆಗೆ ತರುವ ಬಗೆಯನ್ನು ವಿರೋಧಿಸುವ; ಭ್ರಮಾತ್ಮಕ ಸತ್ಯವನ್ನು ಹರಡುವ ಕ್ರೌರ್ಯವನ್ನು ತಡೆಯಲು ಬರಹ ಮುಖೇನವೇ ಉತ್ತರಿಸಬೇಕಾದ ಅನಿವಾರ್ಯತೆಯೂ ಒದಗಿತು. ಬೋಳುವಾರು ಅವರ,

'ಓದಿರಿ' 'ಉಮ್ಮಾ' 'ಸ್ವಾತಂತ್ರ್ಯದ ಓಟ' ಮೊದಲಾದ ಬೃಹತ್ ಕಾದಂಬರಿಗಳನ್ನು ನೆನಪಿಸಿಕೊಳ್ಳಬೇಕು.

ಸಾಹಿತ್ಯ-ಕಲೆಯ ವಲಯದಲ್ಲಿ ನಡೆದ ಈ ನೇರ ಸಂಘರ್ಷದ ಫಲಿತವಾಗಿ ಸೂಕ್ಷ್ಮ ಸಂವೇದನಾಶೀಲ ಅಭಿವ್ಯಕ್ತಿ ಕ್ರಮಗಳು ರೂಪುಗೊಂಡವು. 'ನನ್ನ ದನಿಗೆ ನಿನ್ನ ದನಿಯನ್ನು ಸೇರಿಸಿ ನಮ್ಮ ದನಿಯಾಗಿಸುವ ಮಿಲೇಸೂರ್‌ನ' ಹುಡುಕಾಟದಲ್ಲಿ ಅನ್ಯ ಭಾಷೆಗಳಿಂದ ಮಾನವೀಯ ಘನತೆಯನ್ನು ಎತ್ತಿ ನಿಲ್ಲಿಸುವ ಕೃತಿಗಳ ಅನುವಾದ ನಡೆಯಿತು. ಈ ಕಾಲದ ಸಂಕಟಗಳು ಒದಗಿಸಿದ ತಾತ್ವಿಕತೆಯು ಪೂರ್ವ ಪರಂಪರೆಯನ್ನು ಪ್ರಾಚೀನ ಕಾವ್ಯಗಳನ್ನು ಮರುವಿಮರ್ಶಿಸುವ ಆಯಾಮವಾಗಿ ಬೆಳೆಯಿತು. ಅಧ್ಯಯನಕ್ಕೆ ವಿಸ್ತಾರವಾದ ಲೋಕವು ತೆರೆಯತೊಡಗಿತು.

ನಾನು ಬೇಟೆಯ ಜೊತೆಗಿದ್ದೇನೆ, ಬೇಟೆಗಾರನ ಜೊತೆಗಲ್ಲ- ಎಂಬ ಜಂಬಣ್ಣ ಅಮರಚಿಂತರ ಕವಿತೆಯನ್ನು ಸಾಕ್ಷೀಕರಿಸಿ ಹೇಳುವುದಾದರೆ- ಬರಹಗಾರನು ಈ ಎರಡರಲ್ಲಿ ಒಂದನ್ನು ಆಯ್ಕೆ ಮಾಡಿಕೊಳ್ಳಬೇಕಾದ ನೈತಿಕ ಎಚ್ಚರವನ್ನು ಪ್ರಕಟಿಸುವುದು ಅನಿವಾರ್ಯವಾದ ಕಾಲಘಟ್ಟವಿದು. ಇಂತಹ ಎಚ್ಚರವನ್ನು ಮರೆಮಾಚುವುದು ಎಂದರೆ, ಉದ್ದೇಶಪೂರ್ವಕವಾದ ಮೂಲಭೂತವಾದಿ ಮನಸ್ಥಿತಿ ಎಂಬುದು ನಿಚ್ಚಳವಾಗತೊಡಗಿತು. ಬರಹಗಾರರ ಸಾಮಾಜಿಕ ಬದ್ಧತೆಯು, ಸಂವೇದನಾಶೀಲತೆಯ ಪ್ರಾಥಮಿಕ ಅರ್ಹತೆ ಎನ್ನುವಷ್ಟು ತೀವ್ರವಾಯಿತು. ಕನ್ನಡದ ಮಹತ್ವದ ಕವಿ ಎಚ್.ಎಸ್.ಶಿವಪ್ರಕಾಶ ಅವರು 'ಕಾವ್ಯದ ಕಲಾತ್ಮಕತೆಯ ಪ್ರಶ್ನೆ ನನಗೀಗ ಮುಖ್ಯವಲ್ಲ. ನನಗೀಗ ಕಾವ್ಯವೆಂದರೆ ಬದುಕಿನ ಅನ್ವೇಷಣೆ ಮಾತ್ರ' ಎಂದು ಸ್ಪಷ್ಟೀಕರಿಸಿದರು. ಈ ಆದ್ಯತೆಯು ಕಾವ್ಯ ಪ್ರಕಾರಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ಸಾಹಿತ್ಯದ ಅಷ್ಟೇಅಲ್ಲ ಕಲೆಯ ಸಮಸ್ತ ಪ್ರಕಾರಕ್ಕೂ ಅನ್ವಯವಾಗುವಂತಿತ್ತು. ಇಂತಹ ಸಂಘರ್ಷ ಮತ್ತು ಇಕ್ಕಟ್ಟಿನಲ್ಲಿ ಕನ್ನಡ ಸಂವೇದನೆಯ ಚರಿತ್ರೆಯಲ್ಲಿ ಈ ಹಿಂದೆಂದೂ ಇರಲಿಲ್ಲ ಎನ್ನುವಂತಹ ವಾತಾವರಣ ನಿರ್ಮಾಣವಾಗಿತ್ತು. ಬರಹ ಹೇಗಿದೆ ಎನ್ನುವುದು ಅದು ಏನನ್ನು ಪ್ರತಿಪಾದಿಸುತ್ತದೆ ಎಂಬ ಒರೆಗಲ್ಲಿಗೆ ಮೈಕೊಟ್ಟೇ ಎದ್ದು ಬರಬೇಕಿತ್ತು. 'ಒಳ್ಳೆಯ ಕಾವ್ಯವಲ್ಲದ್ದು ಒಳ್ಳೆಯ ರಾಜಕೀಯವೂ ಆಗದು' ಎಂದಿದ್ದ ಮಾವೋ. ಜಾಗತೀಕರಣದ ಈ ಸಂದರ್ಭ ಒಳ್ಳೆಯ ರಾಜಕೀಯವಲ್ಲದ್ದು ಒಳ್ಳೆಯ ಕಾವ್ಯವಾಗದು ಎಂಬ ಹಂತವನ್ನು ತಲುಪಿತು. ಈ ಎಲ್ಲ ಅಂಶಗಳು ಕಥಾ ಸಾಹಿತ್ಯದಲ್ಲೂ ವ್ಯಕ್ತಗೊಂಡವು.

ಆಧುನಿಕ ಕನ್ನಡ ಸಾಹಿತ್ಯದಲ್ಲಿ, ಸಣ್ಣಕಥೆಗಳಿಗೆ ವಿಶಿಷ್ಟವಾದ ಮನ್ನಣೆಯಿದೆ. ಸಮಕಾಲೀನತೆಯನ್ನು ಕಥೆಯ ಚೌಕಟ್ಟಿನಲ್ಲಿಟ್ಟು, ಮರುವಿಚಾರಕ್ಕೆ ಹಚ್ಚುವ, ವಾಸ್ತವಾಂಶವನ್ನು ಮನನಗೊಳಿಸುವ, ಗದ್ಯದ ನವಿರು ನಿರೂಪಣೆಯ ಕಾರಣದಿಂದ ಇಂದಿಗೂ ಅತಿಹೆಚ್ಚು ಜನಾದರಣೆಯನ್ನು ಪಡೆದ ಸಾಹಿತ್ಯ ಪ್ರಕಾರ ಇದು. ನವೋದಯದಲ್ಲಿ ಸಣ್ಣಕಥೆ ತನ್ನ ಹೆಜ್ಜೆಗಳನ್ನು ಊರುತ್ತ; ಸರಳವಾಗಿ ಸಹೃದಯರ ಮನೋಭಿತ್ತಿಯನ್ನು ಹೊಕ್ಕು ಹೊಸ ಲೋಕದೃಷ್ಟಿಯನ್ನು ನೀಡಿತು. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ 'ವೆಂಕಟಿಗನ ಹೆಂಡತಿ' ಎಂಬ ಕಥೆಯನ್ನು ನಿದರ್ಶನಕ್ಕೆ ಗಮನಿಸಬಹುದು. ಸಮಾಜದ ಕಟ್ಟ ಕಡೆಯ ವ್ಯಕ್ತಿ ವೆಂಕಟಿಗ. ಓದು-ಅಧ್ಯಯನ-ಶಾಸ್ತ್ರ-ಪಠಣಗಳ ಸಹವಾಸ ಇಲ್ಲದವ. ದುಡಿದು ಉಣ್ಣುವ ಬಾಳ್ವೆಯಲ್ಲಿ ಅವನು ಪ್ರತಿಪಾದಿಸಿಕೊಂಡಿರುವ ಜೀವನ ಮೀಮಾಂಸೆ ಅನನ್ಯವಾದದ್ದು. ಯಾರೊಂದಿಗೋ ಇದ್ದು ಬಂದ ಮಡದಿಯನ್ನು, ಮರು ಸ್ವೀಕರಿಸಿ ಬಾಳುವೆಯ ಹಂದರವನ್ನು ಹಬ್ಬಿಸಬಲ್ಲ ತಾಕತ್ತು ವೆಂಕಟಿಗನಿಗಿದೆ. ಆಕ್ಷೇಪಿಸಬಹುದಾದ, ಆಡಿಕೊಳ್ಳಬಹುದಾದ, ಮುಜುಗರಕ್ಕೆ ತಳ್ಳಬಹುದಾದ ಊರನ್ನು ಬಿಟ್ಟು ಬಂದು ನಗರದ ಅಂಚಿನಲ್ಲಿ ಬದುಕಿನ ಸೂರು ಮಾಡಿಕೊಂಡಿದ್ದಾನೆ. ತನ್ನ ಮಡದಿಯು ಎತ್ತಿಕೊಂಡು ತಂದ ಮಗು ತನ್ನದೇ ಹೌದೋ ಅಲ್ಲವೋ ಎಂಬ ಅನುಮಾನ ಅವನ ಬಳಿ ಸುಳಿಯದು. ಯಾಕೆಂದರೆ, 'ಮಗು ಅಂದ್ರೆ ದ್ಯಾವರದ್ದು ಕಣಪ್ಪ' ಎಂಬ ಮುಗ್ಧ ಆದರೆ ನಿರ್ಭೀತ ತಾತ್ವಿಕತೆ ಅವನದು. ಕಥೆಯ ನಿರೂಪಕರಾದ ಲೇಖಕರ ಮನಸ್ಸಿನಲ್ಲಿಯೇ ಒಂದು ಕ್ಷಣ, 'ಮಗುವಿನ ಮುಖಚಹರೆ ವೆಂಕಟಿಗನಿಗೆ ಹೋಲುತ್ತದೆಯೇ?' ಎಂಬ ಕುತೂಹಲ ಹಣಕಿಕ್ಕುತ್ತದೆಯಾದರೂ; ವೆಂಕಟಿಗನ ಔದಾರ್ಯ ಮತ್ತು ಜೀವನಪ್ರೀತಿಯ ಮುಂದೆ ತಮ್ಮ ಅನಿಸಿಕೆ ಕ್ಷುಲ್ಲಕ ಎನಿಸಿಬಿಡುತ್ತದೆ. ಈ ಕಥೆ ತನ್ನ ಇರುವಿಕೆಯಲ್ಲಿಯೇ ಪೂರ್ವ ಪರಂಪರೆಯ ಮೌಲ್ಯಗಳೊಂದಿಗೆ ನಡೆಸುವ ಮುಖಾಮುಖಿ ತೀವ್ರವಾಗಿದೆ. ವೆಂಕಟಿಗನ ಹೆಂಡತಿ ಕಥೆಯನ್ನು ಓದಿದ ಓದುಗರಿಗೆ, 'ಶಂಕೆಯ ಕಾರಣದಿಂದ ಮಡದಿಯನ್ನು ಪರಿತ್ಯಜಿಸಿದ' ರಾಮಾಯಣದ ಶ್ರೀರಾಮ ನೆನಪಾಗದೆ ಇರುವುದಿಲ್ಲ. ಕುವೆಂಪು ಅವರು ಕರಿಸಿದ್ಧ -ಕಥನ ಕವಿತೆಯಲ್ಲಿ -ಒಂದೊಂದು ಮನೆಯಲ್ಲೂ ಒಬ್ಬೊಬ್ಬ ರಾಮ -ಎಂದು ರೂಪಕವಾಗಿಸುವುದು. ವೆಂಕಟಿಗನ ಹೆಂಡತಿ ಕಥೆಯು, ರಾಮಕಥೆಯ ಪ್ರಸ್ತಾಪವನ್ನೂ ಮಾಡದೆ ರಾಮಾಯಣದ ಪಿತೃಮೌಲ್ಯವನ್ನು ಮರುಪ್ರಶ್ನಿಸಿಕೊಳ್ಳಲು ಒತ್ತಾಯಿಸುತ್ತದೆ. ಇದು ಕಥಾ ಸಾಹಿತ್ಯದ ಪ್ರಬುದ್ಧ ಲಕ್ಷಣವಾಗಿದೆ.

ಮಾಸ್ತಿಯವರ 'ಮೊಸರಿನ ಮಂಗಮ್ಮ' ಕಥೆಯು, ಹೆಣ್ಣಿನ ಕುರಿತು ಪ್ರಚಲಿತವಾಗಿಯೂ ನಂಬಿಕೆಯಾಗಿಯೂ ಇರುವ ಕಲ್ಪಿತಗಳನ್ನು ದಿಟ್ಟವಾಗಿ ನಿರಾಕರಿಸುತ್ತದೆ. ಕುಟುಂಬ ರಚನೆಯ ಸಂಗೋಪನೆಯಲ್ಲಿ ಹೆಣ್ಣು ನಿರ್ವಹಿಸುತ್ತ ಬಂದ ಸಶಕ್ತ ಪಾತ್ರಕ್ಕೆ ಮೊಸರಿನ ಮಂಗಮ್ಮ ಉದಾಹರಣೆಯಾಗುತ್ತಾಳೆ.

> ಬಾಳೆಯ ಕಡಿದರೆ ತೋಟ ಹಾಳಾಗಬಲ್ಲದೇ
> ಬಾಳಿಸಲಾರದೆ ಮಡದಿಯ ಬಿಟ್ಟರೆ
> ಬಾಳೆಹಣ್ಣೀನೇ ಕೊಳೆಯಾಕೆ॥

ಎಂಬುದು ಜನಪದ ಗರತಿಯ ಹಾಡಿನ ಒಂದು ಸೊಲ್ಲು. ಈ ಪ್ರತಿರೋಧದಲ್ಲಿ ಹೆಣ್ಣಿನ ಆತ್ಮಶಕ್ತಿಯ ಕುರಿತ ಅಪಾರ ನಂಬಿಕೆಯಿದೆ. ಈ ನಂಬಿಕೆಯು ಕುಟುಂಬದ ಕುರಿತ ಪೂರ್ವಗ್ರಹೀತವನ್ನು ಅಲ್ಲಗಳೆಯುತ್ತದೆ. ಇದೇ ನಿಲುವು ಮೊಸರಿನ ಮಂಗಮ್ಮ ಕಥೆಯಲ್ಲಿದೆ. ಬಿಟ್ಟ ಗಂಡನಿಗಾಗಿ ಕೊರಗದೆ, ಅಧೀರಳಾಗದೆ, ಇರುವ ಬದುಕನ್ನು ಹೆಚ್ಚು ಅರ್ಥಪೂರ್ಣವಾಗಿಸುವ ಹೋರಾಟ ಅವಳದು. ಗಂಡನಿಂದ ಅಕಾರಣ ವಂಚನೆಗೆ ಒಳಗಾದ ಮಂಗಮ್ಮ, ಮುಂದೆ ಮಗನಿಂದಲೂ ಅಂಥದೇ ವಿಶ್ವಾಸದ್ರೋಹವನ್ನು ಅನುಭವಿಸುತ್ತಾಳೆ. ಆದರೆ ಅದರಿಂದ ಬದುಕಿನ ನಂಬಿಕೆಯನ್ನು ಕಳೆದುಕೊಳ್ಳವುದಿಲ್ಲ. ಈ ಜೀವನ ನಿತ್ಯ ಪರಿವರ್ತನಶೀಲವಾದದ್ದು ಎಂಬ ತಾಯ್ತನದ ಮರುಸಂಕಥನವನ್ನು ಈ ಕಥೆ ಕಟ್ಟುತ್ತದೆ. ಒಂದು ಕಾಲಘಟ್ಟದ ಮಹತ್ವದ ಮಾರ್ಗದರ್ಶಕ ಕಥನಗಳನ್ನು ಆಯುವುದು ಸುಲಭವೇನಲ್ಲ. ಮೊಸರಿನ ಮಂಗಮ್ಮ ಕಥೆಯ ಒಡನೆಯೇ ಶ್ಯಾಮಲಾದೇವಿ ಬೆಳಗಾಂವಕರರ ಕಂತಿ ಮತ್ತು ದ್ಯಾಂವಕ್ಕನ ಪಾತ್ರಗಳು ನೆನಪಾಗುತ್ತವೆ.

ಪ್ರಗತಿಶೀಲ ಕಾಲಘಟ್ಟದಲ್ಲಿ ನಿರಂಜನರ 'ಕೊನೆಯ ಗಿರಾಕಿ' ಕಥೆಯು ಕನ್ನಡದಲ್ಲಿ ಸಾಕಷ್ಟು ಮರುಓದುಗಳನ್ನು ಪಡೆದುಕೊಂಡಿದೆ. ಕಾಣಿ ಎಂಬ ಮೂಕಿಯನ್ನು ಕಥೆಯ ಕೇಂದ್ರವಾಗಿಟ್ಟುಕೊಂಡು; ಹೆಣ್ಣನ್ನು ಭೋಗದ ಸರಕಿನಂತೆ ನೋಡುವ ಪಿತೃವ್ಯವಸ್ಥೆಯ ಅಮಾನುಷತೆಯನ್ನು ಎಳೆಎಳೆಯಾಗಿ ಬಿಡಿಸಿಡುತ್ತದೆ. ಕಾಣಿಯನ್ನು ನಂಬಿಸಿ ಮೋಸ ಮಾಡುವವನಿಂದ ಮೊದಲ್ಗೊಂಡು, ಪ್ರಪಂಚ ಜ್ಞಾನವಿಲ್ಲದ ಅಬೋಧಕಾಣಿ, ಗಂಡಸಿನ ಭೋಗದ ಕಾಲ್ಚೆಂಡಾಗುತ್ತಾಳೆ. ಕಟ್ಟ ಕಡೆಗೆ ಅನಾಥ ಶವವಾಗುತ್ತಾಳೆ. ಅವಳ ಶವವನ್ನು ಕುಕ್ಕಲು ಹದ್ದು ಗಿರಕಿಹೊಡೆಯುತ್ತದೆ. ಕಾಣಿಯಂತಹ ಅಸಹಾಯಕ ಹೆಣ್ಣನ್ನು ವೇಶಾವೃತ್ತಿಗೆ ದೂಡಿದ ಪುರುಷ ಯಾಜಮಾನ್ಯವು ಬೇಬಿಸಾತ್ ಆಗಿದೆ. ಆದರೆ ಕಥೆಯ ಮುಖ್ಯ

ಭಾಗವಿರುವುದು ಅದರ ಮೌನದಲ್ಲಿ. ಹೆಣ್ಣು ಬದುಕನ್ನು ಚಿತ್ರಹಿಂಸೆಗೆ ಒಳಗುಮಾಡಿದ ವ್ಯವಸ್ಥೆಯನ್ನು ಪರಾಮರ್ಶಿಸುವ ಅದರ ಅಸಹನೀಯತೆಯನ್ನು ಕಾಣಿಸುವ ಮನಸ್ಸು ಪುರುಷನದು. ಅದು ಗಂಡಸಿನ ಭೋಗಪ್ರಧಾನತೆ ಮತ್ತು ಅಹಂಕಾರವನ್ನು ಕಳಚಿಕೊಂಡ ಶುದ್ಧ ಅಂತಃಕರಣದ್ದು.

ಸಣ್ಣಕಥೆ ಎಂಬ ಸಾಹಿತ್ಯ ಪ್ರಕಾರಕ್ಕೆ ಇರುವ ಬಹುಮುಖ್ಯ ಗುಣ ಅದರ ದೃಶ್ಯನಿರೂಪಣೆಯದ್ದು. ಓದುಗನೊಂದಿಗೆ ಏಕಾಂತವಾಗಿಯೇ, ನಾಟಕದಂತೆ ಇನ್ನಿತರ ನಿರೂಪಣಾ ವಿಧಾನಗಳ ಅಗತ್ಯವೇ ಇಲ್ಲದೆ ಕಥೆಯು ಸಂವಹನವನ್ನು ಸಾಧಿಸಬಲ್ಲುದಾಗಿದೆ. ಪ್ರಗತಿಶೀಲ ಕಾಲಘಟ್ಟದಲ್ಲಿ ಬರೆದ ಎಚ್.ವಿ.ಸಾವಿತ್ರಮ್ಮನವರ 'ನಿರಾಶ್ರಿತೆ' ಕಥೆಯು; ದೇಶದ ಸ್ವಾತಂತ್ರ್ಯ ಚಳುವಳಿಯು ಧರ್ಮ ದ್ವೇಷವಾಗಿ ಬದಲಾದದ್ದರ ಪರಿಣಾಮವಾಗಿ, ಹೆಣ್ಣು ಬದುಕು ನಲುಗಿಹೋಗುವ ದುರಂತದ ವ್ಯಾಖ್ಯಾನವಾಗಿದೆ. ಗಂಡನಿದ್ದೂ, ಮಹಾತ್ಮ ಗಾಂಧೀಜಿಯವರ ಚಿಂತನೆಯ ಆಶ್ರಯವಿದ್ದೂ ಹೆಣ್ಣು ಅನಾಥಳಾಗಬೇಕಾಯಿತು ಎನ್ನುವುದು ಬಲುಮುಖ್ಯ ಸೈದ್ಧಾಂತಿಕ ಒಳನೋಟವನ್ನು ಕೊಡುತ್ತದೆ. ಹೆಣ್ಣನ್ನು ಜೊತೆಗಾತಿಯಾಗಿ ನೋಡುವುದು ಗಂಡುಮನಸ್ಸಿಗೆ ಸುಲಭವಾಗಲಿಲ್ಲ. ಸಾಮಾಜಿಕ-ರಾಷ್ಟ್ರೀಯ ದುರಂತಗಳು ನಡೆಯುವಾಗ; ಹೆಣ್ಣು ಅನುಭವಿಸುವ ಹಿಂಸೆ ಅತ್ಯಂತ ಕ್ರೂರವಾಗಿರುತ್ತದೆ ಎಂಬ ನಿರೂಪಣೆಗಳಿವು. ಕೊಡಗಿನ ಗೌರಮ್ಮ ಬರೆದ 'ಅಪರಾಧಿ ಯಾರು?' ಎಂಬ ಪುಟ್ಟ ಕಥೆಯು ಇಂದಿನ ಏಕರೂಪೀ ಧರ್ಮ ಸಂಹಿತೆಯ ಆರ್ಭಟದ ಕಾಲದಲ್ಲೂ ಸಹೃದಯರನ್ನು ಆಪ್ತವಾಗಿ ಎಚ್ಚರಿಸುವಂತಿದೆ. ಹೆಣ್ಣನ್ನು ಭೋಗದ ವಸ್ತುವಾಗಿ ಬಳಸಿ, ಬಹಿಷ್ಕಾರದ ನ್ಯಾಯ ತೀರ್ಮಾನ ಮಾಡುವ ಗೋಸುಂಬೆತನವನ್ನು ಕಾಣಿಸುತ್ತದೆ. ಒಳ್ಳೆಯತನ ಕೆಟ್ಟತನ ಎಂಬ ಮನುಷ್ಯ ಸ್ವಾಭಾವಕ್ಕೆ ಧರ್ಮದ ಹಂಗು ಇದೆಯೇ? ಎಂದು ಕೇಳುತ್ತದೆ.

ಕನ್ನಡ ಕಥನದ ಇತಿಹಾಸದಲ್ಲಿ ಕ್ಲಾಸಿಕ್ಸ ಎನ್ನಬಹುದಾದ ಸಣ್ಣಕಥೆಗಳ ಕರುಳಬಳ್ಳಿಯೇ ಇದೆ. ಅವು ಮನುಷ್ಯ ಲೋಕವನ್ನು ಬಂದಳಿಕೆಯ ಹಾಗೆ ಸುತ್ತಿ ಉಸಿರುಗಟ್ಟಿಸಿದ ಗೃಹೀತಗಳನ್ನು ಭಂಜನೆ ಮಾಡುತ್ತವೆ. ಕಾಲಿಗೆ ನಟ್ಟು ಕೀವಾಡುತ್ತಿರುವ ಮುಳ್ಳನ್ನು ಮತ್ತೊಂದು ಮುಳ್ಳಿನ ಮೊನಚಿನಿಂದಲೇ ಮೃದುವಾಗಿ ಮತ್ತು ಆಳವಾಗಿ ಚುಚ್ಚಿ ಹೊರತೆಗೆಯಬೇಕಾಗುತ್ತದೆಯಲ್ಲವೇ? ಅಷ್ಟೇ ತೀಕ್ಷ್ಣ ಹಾಗೂ ಹಿತದ ಬರಹಗಳನ್ನು ಕಾಣುತ್ತೇವೆ. 'ನಾನು ಚಪ್ಪಲಿಗೆ ಹುಟ್ಟಲಿಲ್ಲ. ನನ್ನನ್ನು ಹಡೆದವಳು 'ಹೆಣ್ಣು' ಎನ್ನುವ ಸಾರಾ ಅಬೂಬಕ್ಕರ ಅವರ ಚಪ್ಪಲಿಗಳು ಕಥೆಯ ನುಡಿಯನ್ನು; 'ಅಮಾಸ ಎನ್ನುವುದು ಅಮಾಸನ

ಹೆಸರು'- ಎನ್ನುವ ದೇವನೂರರ ಅಮಾಸನ ಪಾತ್ರವನ್ನು ಕನ್ನಡ ಪ್ರಜ್ಞೆ ಎಂದಿಗೂ ಮರೆಯಲಾರದು. ಅಂತಹ ಸಾವಿರ ಸಾವಿರ ಸಶಕ್ತ ಮಾದರಿಗಳು ಕನ್ನಡದ ಸಣ್ಣಕಥೆ ಎಂಬ ಪ್ರಕಾರದಲ್ಲಿವೆ. ಈ ಹಿನ್ನೋಟವು ಸಣ್ಣಕಥೆಗಳ ಇಂದಿನ ಪ್ರವೃತ್ತಿಗಳ ಅಧ್ಯಯನಕ್ಕೆ ಆಧಾರವಾದ 'ಹಿಂದಣ ಅನಂತವನ್ನು ಅರಿಯುವ' ಒಂದು ಸಣ್ಣ ಪ್ರಯತ್ನವಾಗಿದೆ.

ಜಾಗತೀಕರಣ ಎಂಬ ಮಾರುಕಟ್ಟೆನೀತಿಯನ್ನು ಒಂದು ಕಾಲವ್ಯಾಪ್ತಿಯ ಸೂಚಕವೆಂದು ನೋಡಿದಾಗ, ಇದು ಕಳೆದ ಕಾಲುಶತಮಾನದ ಕನ್ನಡದ ಅಭಿವ್ಯಕ್ತಿ ಪರಂಪರೆಯೊಂದಿಗೆ ಸಂಬಂಧವನ್ನು ಬೆಸೆಯುತ್ತದೆ. ಈ ಅವಧಿಯು ಸಾಮಾಜಿಕ-ಸಾಂಸ್ಕೃತಿಕ ವಿಪ್ಲವಗಳ ಕಾಲವಾದ್ದರಿಂದ; ಸಂವೇದನಾಶೀಲತೆಯನ್ನು ಗಾಢವಾಗಿ ಕಲಕಿದ ಕಾಲವೂ ಹೌದು. ಈ ಅವಧಿಯಲ್ಲಿ ಬರವಣಿಗೆ ಎನ್ನುದು ಮನರಂಜನೆಯ ಅಥವಾ ಆತ್ಮಶೋಧನೆಯ ಆಯಾಮ ಮಾತ್ರ ಆಗಿರಲಿಲ್ಲ. ಅದು ವರ್ತಮಾನದೊಂದಿಗೆ ನಡೆಯಿಸಿದ ತೀಕ್ಷ್ಣ ಮುಖಾಮುಖಿಯಾಗಿತ್ತು. ಹಾಗಾಗಿ ಈ ಅವಧಿಯಲ್ಲಿ ಬರೆಯಲ್ಪಟ್ಟ ಕಥೆಗಳು ಸಂಖ್ಯೆ ಮತ್ತು ಮೌಲ್ಯದ ದೃಷ್ಟಿಯಲ್ಲಿ ಏರಿಕೆಯನ್ನು ಹೊಂದಿವೆ.

ಈ ಕಾಲಾವಧಿಯಲ್ಲಿ ಜಗತ್ತಿನ ಬೇರೆ ಬೇರೆ ಭಾಗಗಳಲ್ಲಿಯಂತೆ ಭಾರತದಲ್ಲಿ ಮತ್ತು ಕನ್ನಡದಲ್ಲಿ; ಸಮಾಜದ ಅಂಚಿನ ದಮನಿತರು ಮೊಟ್ಟಮೊದಲು ಸಮಾಜದ ಮುಖ್ಯವಾಹಿನಿಗೆ ಬರತೊಡಗಿದರು. ಅವರ ಸಂವೇದನೆಗಳು ಕನ್ನಡ ಪ್ರಜ್ಞೆಯನ್ನು ಗಾಢವಾಗಿ ಕಲಕಿದೆ. ದಲಿತ-ಮುಸ್ಲಿಂ ಸಂವೇದನೆಯಲ್ಲಿಯೇ ಪ್ರತ್ಯೇಕವಾಗಿ ಅಧ್ಯಯನ ಮಾಡಬಹುದಾದಷ್ಟು ಹೆಣ್ಣುಧ್ವನಿ ಕಾಣುತ್ತದೆ. ಅದುವರೆಗೂ ಸಾಮಾಜಿಕ ಮುಜುಗರದಲ್ಲಿದ್ದ ತೃತೀಯ ಲಿಂಗಿಗಳ ಅಧಿಕೃತ ಅಭಿವ್ಯಕ್ತಿಯ ಕಥನಗಳು ದೊರೆಯುತ್ತವೆ.

ಹೀಗೆ, ಶೈಕ್ಷಣಿಕವಾಗಿ ಮತ್ತು ಸಾಮಾಜಿಕವಾಗಿ ಅವಕಾಶದ ದಾರಿಗಳು ತೆರೆಯತೊಡಗಿದವು. ಮಾತ್ರವಲ್ಲ ದಾರಿಗಳು ಜಗತ್ತಿನ ಭೂಪಟವನ್ನು ಹತ್ತಿರವಾಗಿಸತೊಡಗಿದವು. ಇದುವರೆಗೂ ಗ್ರಾಮೀಣ ಭಾರತದ ಮನಸ್ಸು ನಗರ ಬದುಕಿನಿಂದ ಅನುಭವಿಸಿದ ತಳಮಳವನ್ನು ಕನ್ನಡ ಕಂಡಿತ್ತು. ಗೊರೂರು ರಾಮಸ್ವಾಮಿ ಅಯ್ಯಂಗಾರ ಅವರ 'ಅಮೇರಿಕಾದಲ್ಲಿ ಗೊರೂರ' ಎಂಬ ಪ್ರವಾಸ ಕಥನವು ಈ ಗಾಭರಿಯನ್ನು ರಂಜನೀಯವಾಗಿಯೂ ತಲ್ಲಣಗಳ ದಾಖಲೆಯಾಗಿಯೂ ಕೊಟ್ಟಿತ್ತು. ವ್ಯಾಸರಾಯ ಬಲ್ಲಾಳರ 'ನಾನೊಬ್ಬ ಭಾರತೀಯ ಪ್ರವಾಸಿ' ಎಂಬ ಪ್ರವಾಸ ಕಥನವು ಈ ತಲ್ಲಣವನ್ನು

ವಿಚಾರಪೂರ್ಣ ಪ್ರಶ್ನೆಗಳನ್ನಾಗಿ ಬೆಳೆಸಿತು. ಇದಕ್ಕಿಂತ ಬೇರೆಯಾಗಿ ಜಗತ್ತಿನ ಅಂಚುಗಳನ್ನು ವಿಸ್ತರಿಸಿದ ಪ್ರಶ್ನೆಗಳನ್ನು ಕಥಾ ಬರವಣಿಗೆಯು ನೀಡಿತು.

ಈ ಅವಧಿಯಲ್ಲಿ ಗ್ರಾಮ, ನಗರ ಮತ್ತು ಅತಿನಾಗರಿಕ ಅನುಭವಗಳು ದಾಖಲಾದವು. ಈ ಅನುಭವದ ಮೂಲಕ ಜಗತ್ತನ್ನು ನೋಡುವ ನಿಲುವು ಕಾಣತೊಡಗಿದವು. ಅದೇ ವೇಳೆಗೆ ಮೂರು ತಲೆಮಾರುಗಳ ಬರಹಗಾರರು ಕಥೆಗಳ ರಚನೆಯಲ್ಲಿ ಸಕ್ರೀಯರಾಗಿದ್ದರು. ನಾ.ಡಿಸೋಜಾ, ಬೋಳುವಾರು ಮಹಮ್ಮದ ಕುಂಞಯವರಿಂದ ಮೊದಲ್ಗೊಂಡು; ವೈದೇಹಿ, ಅಮರೇಶ ನುಗಡೋಣಿ, ಮೊಗಳ್ಳಿ ಗಣೇಶ ಅವರ ತಲೆಮಾರನ್ನು ಒಳಗೊಂಡು; ಶಾಂತಿ ಕೆ. ಅಪ್ಪಣ್ಣ, ಟಿ.ಎಸ್.ಗೊರವರ, ಹನುಮಂತ ಹಾಲಗೇರಿಯವರವರೆಗಿನ ಬಲು ಸುದೀರ್ಘವೂ ಸಶಕ್ತವೂ ಆದ ಕಥಾ ಹಂದರವಿದೆ.

ಅಧ್ಯಯನವನ್ನು –ಜಾಗತೀಕರಣದ ಪರಿಣಾಮಗಳ ಹಿನ್ನಲೆಯಲ್ಲಿ ಭಾಗಗಳಾಗಿ ವರ್ಗೀಕರಿಸಿಕೊಳ್ಳಲಾಗಿದೆ. ಈ ಸೈದ್ಧಾಂತಿಕ ಸಂಘರ್ಷವನ್ನು ಪ್ರಧಾನ ಭೂಮಿಕೆಯಾಗಿಸಿಕೊಂಡ ಕಥೆಗಳ ಮುಖ್ಯ ವಿಶ್ಲೇಷಣೆಯನ್ನು ಮಾಡಿ; ಅಲ್ಲಿಯ ಫಲಿತದ ಆಧಾರದಿಂದ ವರ್ಗೀಕರಣವನ್ನು ರೂಪಿಸಿಕೊಳ್ಳಲಾಗಿದೆ. "ಮುಖ್ಯ ಕಥೆಗಾರರು" ಎಂಬ ಪೂರ್ವ ನಿರ್ಧರಿತ ಆಯ್ಕೆಯನ್ನು ಮಾಡಲಾಗಿಲ್ಲ. ಯಾಕೆಂದರೆ, ಮುಖ್ಯ ಕಥೆಗಾರರು ಎಂದು ವಿಮರ್ಶೆಯು ನಿರ್ಧರಿಸಿರುವ ಕಥೆಗಾರರ ಆಯ್ಕೆಯಲ್ಲಿ; ಜಾಗತೀಕರಣದ ಸಂವೇದನೆಯ ಅನುಸಂಧಾನ ಇದೆಯೇ ಎನ್ನುವುದು ಪ್ರಮುಖವಾಗಿರುವುದಿಲ್ಲ. ಅಲ್ಲಿಯ ಆಯ್ಕೆಗಳು ಅನ್ಯಾನ್ಯ ಸಾಹಿತ್ಯಿಕ ದೃಷ್ಟಿಯಿಂದ ನಿರ್ಧರಿತವಾಗಿರುತ್ತವೆ. ಹಾಗಾಗಿ ಅಂತಹ ಓದಿಗೆ ತಾತ್ವಿಕ ಫಲಿತವನ್ನು ತಲುಪುವುದು ಕಷ್ಟವಾಗುತ್ತದೆ. ಆದ್ದರಿಂದ ಆ ಕ್ರಮವನ್ನು ಅನುಸರಿಸಿಲ್ಲ.

ಜಾಗತೀಕರಣದ ಕಾಲಾವಧಿಯ ಸಣ್ಣ ಕಥೆಗಳ ಮುಖ್ಯ ಪ್ರವೃತ್ತಿಗಳನ್ನು ಈ ಕೆಳಗಿನಂತೆ –ಪ್ರಮೇಯಗಳಾಗಿ ಮಂಡಿಸಲಾಗಿದೆ.

**೩.೧ ಬಂಡವಾಳವಾದದ ಆಕ್ರಮಣ:**

ಜಾಗತೀಕರಣದ ಮುಕ್ತ ಮಾರುಕಟ್ಟೆ ನೀತಿಯು ಮನುಷ್ಯ ಬದುಕಿನ ರಚನೆಯನ್ನೇ ಅಲ್ಲೋಲ ಕಲ್ಲೋಲಗೊಳಿಸಿತ್ತು. ವರ್ಗ–ವರ್ಣ–ಲಿಂಗ ತಾರತಮ್ಯದಲ್ಲಿ ಬಳಲಿ ಹೋಗಿದ್ದ ಭಾರತದ ಸಮಾಜವನ್ನು ಒಂದುಗೂಡಿಸುವ, ಬಹುತ್ವವನ್ನು ಪೋಷಿಸುವ ಸಾಂವಿಧಾನಿಕ

ಆಶಯವು ಮರಳಿ ಸಂಪೂರ್ಣವಾಗಿ ನಲುಗಿಹೋದ ಕಾಲಘಟ್ಟ ಇದಾಗಿದೆ. ಕೃಷಿ ಪ್ರಧಾನವಾದ ಭಾರತೀಯ ಬದುಕಿನ ಸೊಗಸುಗಾರಿಕೆಯೇ ಅನಾದಿಯ ಜಮೀನ್ದಾರೀ ವ್ಯವಸ್ಥೆಯ ತರತಮದಿಂದ ಸಾಕಷ್ಟು ವಿಕಾರಗೊಂಡಿತ್ತು. ಆದರೀಗ ಹಣದ ಹರಿವು ಮತ್ತು ಭೋಗಸಂಸ್ಕೃತಿಯು ಹಳೆಯ ರಚನೆಗಳಲ್ಲಿ ಉಳಿದ ಅಲ್ಪಸ್ವಲ್ಪ ಒಳಿತನ್ನೂ ಹೀರಿಹಾಕಿತು– ಎನ್ನುವುದನ್ನು ಕಥೆಗಳು ಕಾಣಿಸಿವೆ. ಕಥೆ ಎನ್ನುವುದು ವೈಯಕ್ತಿಕ ಅನುಭವದಿಂದ ದತ್ತವಾದ ಸೂಕ್ಷ್ಮಸಂವೇದನಾಶೀಲತೆ ಎಂಬ ತಿಳಿವನ್ನೇ ಈ ಕಾಲದ ಕಥೆಗಳು ಬದಲಿಸಿದವು.

ಅಮರೇಶ ನುಗಡೋಣಿ ೧೯೯೯ರಲ್ಲಿ ಬರೆದ 'ಸವಾರಿ' ಎಂಬ ಕಥೆಯನ್ನು ಗಮನಿಸಬಹುದು. ಈ ಕಥೆಯು ನುಗಡೋಣಿಯವರ ಕಥೆಗಳ ತ್ರಾಣವಾದ ರಾಯಚೂರು ಗ್ರಾಮ್ಯ ಭಾಷೆ ಮತ್ತು ಗ್ರಾಮೀಣ ಬದುಕಿನ ಮೀಮಾಂಸೆ ಎಂಬ ಕಾರಣಗಳಿಗಾಗಿ ಮಾತ್ರವೇ ಮುಖ್ಯವಾಗುವುದಿಲ್ಲ. ಈ ಪರಿಪ್ರೇಕ್ಷ್ಯದಲ್ಲಿ ನುಗಡೋಣಿಯವರು ಜಾಗತೀಕರಣವು, ಗ್ರಾಮೀಣ ಸಮಾಜದಲ್ಲಿ ಅಂತರ್ಗತವಾಗತೊಡಗಿದ ವಿಧಾನ ಮತ್ತು ಜಮೀನ್ದಾರೀ ವ್ಯವಸ್ಥೆಯು ಬಂಡವಾಳಶಾಹಿ ವ್ಯವಸ್ಥೆಯಾಗಿ ಪಲ್ಲಟಗೊಳ್ಳುತ್ತ; ತನ್ನ ಕೆಳಗಿನ ಸಮುದಾಯಗಳ ಮೇಲೆ ನಡೆಸುವ ದಮನಕಾರಿ ಒತ್ತಡವನ್ನು ಸಾಕ್ಷೀಕರಿಸುತ್ತದೆ.

ಈ ಕಥೆಯಲ್ಲಿ ಸ್ಪಷ್ಟವಾಗಿ ಎರಡು ಜಗತ್ತುಗಳಿವೆ. ಹಿರೇಮಠದಪ್ಪ ಎಂದು ಕರೆಯಿಸಿಕೊಳ್ಳುವ ೭೦ ವರ್ಷದ ತಾತ, ಊರ ಗೌಡ ಶಿವಪ್ಪಗೌಡನಿಗೆ 'ಮನೆಗುರು'ವಾಗಿದ್ದು; ಅವನ ಮನೆತನದ ಸಕಲಕ್ಕೂ ಒಂದು ನೈತಿಕ ಎಚ್ಚರವಾಗಿದ್ದಾನೆ. ಶಿವಪ್ಪಗೌಡನಿಗೆ ಮತ್ತು ಅವನ ಮನೆತನಕ್ಕೆ ಊರವರ ದೃಷ್ಟಿಯಲ್ಲಿ ಮನ್ನಣೆ ಸಲ್ಲಿಸಿಕೊಡುವಲ್ಲಿ ಹಿರೇಮಠದಪ್ಪನ ಪಾತ್ರ ದೊಡ್ಡದಿದೆ. ತನ್ನ ಗಂಡನ ತರಹೇವಾರಿ ಕೆಡುಕಿನ ಕಾರ್ಯಗಳಿಂದ ಬೇಸತ್ತಿದ್ದರೂ, ಶಿವಪ್ಪಗೌಡನ ಹೆಂಡತಿ ಗೌರಮ್ಮ; ಮನೆತನದ ದೇಖರೇಕಿಯನ್ನು ನಿಭಾಯಿಸಿಕೊಂಡು ತರುವುದಕ್ಕೂ ಹಿರೇಮಠದಪ್ಪನ ಮೇಲಿದ್ದ ವಿಶ್ವಾಸ ಕಾರಣವಾಗಿದೆ. ಶಿವಪ್ಪಗೌಡನ ಅಪ್ಪ ಮಲ್ಲಪ್ಪಗೌಡ, ಒಂದು ಕಾಲದಲ್ಲಿ ಗೌಡಕಿಯ ಶ್ರೀಮಂತಿಕೆಯ ಕಾರಣದಿಂದ ಮಾಡಬಾರದ್ದನ್ನೆಲ್ಲ ಮಾಡಿ ಉರಿದಾಡಿದವನೇ. ಈಗ ಮರಣಶಯ್ಯೆಯಲ್ಲಿ ಹಾಸಿಗೆಯಲ್ಲಿ ಕೋಣೆಯಲ್ಲಿದ್ದಾನೆ. ಇದು ಕಥೆಯ ಉಪಕ್ರಮದ ಒಂದು ಎಳೆಯಾಗಿದೆ. ಇನ್ನೊಂದು ಎಳೆ ಬ್ಯಾಗಾರ ವಜ್ರಪ್ಪ ಮತ್ತು ಅವನ ಹೆಂಡತಿ ರುದ್ರವ್ವ ಮತ್ತು ಬ್ಯಾಗಾರ ವಜ್ರಪ್ಪನ ಅಧಿದೈವ ಸುಡಗಾಡು ಸಿದ್ಧನಿಗೆ ಸೇರಿದ್ದು. ಬ್ಯಾಗಾರ ವಜ್ರಪ್ಪ ಆ ಊರಲ್ಲಿ ಸತ್ತವರ ಕುಣಿ ತೋಡುವ ಕೆಳಜಾತಿ ಮನುಷ್ಯ. ಹಾಗಾಗಿಯೇ ಅವನ ದರ್ಶನವೇ ಅಪಶಕುನವೆಂಬಂತೆ ಊರು ಭಾವಿಸುತ್ತದೆ. ಕೀಳುಜಾತಿಯ ಮನುಷ್ಯ ವಜ್ರಪ್ಪ, ಜನರ ಇಂತಹ ಪ್ರತಿಕ್ರಿಯೆಗಳನ್ನೆಲ್ಲ ಕಿವಿಗೆ

ಹಾಕಿಕೊಂಡವನಲ್ಲ. ಹೊಟ್ಟೆಗೆ ಒಂದಗುಳು ಇಲ್ಲದಿದ್ದರೂ ದುಡಿಮೆಯಿಲ್ಲದೆ ಪುಕ್ಕಟೆ ಸಿಗುವ ಯಾವುದಕ್ಕೂ ಆಶಿಸಿದವನಲ್ಲ. ಬೀಡಿಯೊಂದಕ್ಕೆ ಮಾತ್ರ ಈ ಮೌಲ್ಯದ ಹಂಗಿಲ್ಲ. ಇಂತಹ ವಜ್ರಪ್ಪನಿಗೆ ಕೆಲವು ನಂಬಿಕೆಗಳಿವೆ. ಅದರಲ್ಲಿ ತುಂಬ ಪ್ರಬಲವಾಗಿದ್ದು ಅವನಿಗೆ ಬಿದ್ದ ಕನಸು ಸುಳ್ಳಾಗುವುದಿಲ್ಲ. ಆಗಿದ್ದೂ ಇಲ್ಲ. ನಿನ್ನೆ ದಿನ ಮಲ್ಲಪ್ಪಗೌಡ ಸತ್ತ ಕನಸುಕಂಡ ವಜ್ರಪ್ಪ, ಗುದ್ದಲಿ ಸಲಿಕೆಗಳೊಂದಿಗೇ ಹೋಗಿ ಉಗಿಸಿಕೊಂಡು ಬಂದಿದ್ದಾನೆ. ಇಂದು ರಾತ್ರಿ ತನ್ನ ದೇವರೇ ಆದ 'ಸಿದ್ಧಯ್ಯ' ಬರುತ್ತಾನೆಂದು ಕನಸುಕಂಡು; ಬೆಳಗುಜಾವವೆ ಎದ್ದು ಗುರುವಿನ ಸತ್ಕಾರದ ವ್ಯವಸ್ಥೆ ಮಾಡುವುದು ಹ್ಯಾಗೆಂದು ಲೆಕ್ಕ ಗುಣಿಸುತ್ತಿದ್ದಾನೆ. ಇದು ಕಥೆಯ ಪ್ರವೇಶಿಕೆ.

ಕಥೆಯ ಒಳಾವರಣದಲ್ಲಿ ನಡೆವ ಘಟನೆಗಳು, ಬಂಡವಾಳವಾದದ ಪ್ರವೇಶದ ಅಧಿಕೃತತೆಯನ್ನು ತೋರುತ್ತದೆ. ಶಿವಪ್ಪಗೌಡನಿಗೆ ಅಧಿಕಾರದ ಲಾಲಸೆ. ದೇಶ ಸ್ವತಂತ್ರವಾದಮೇಲೆ ತುಂಬ ನಿಧಾನಕ್ಕೇ ಆದರೂ ನಡೆಯತೊಡಗಿದ ವಿದ್ಯಮಾನಗಳು ಹಳೆಯ ಗೌಡಕಿಗೆ ಕಿಮ್ಮತ್ತು ಕಡಿಮೆಯಾಗುತ್ತಿರುವುದನ್ನು ಸೂಚಿಸಿದೆ. ಹೀಗಾಗಿ ಶಿವಪ್ಪಗೌಡನಿಗೆ ಇಲೆಕ್ಷನ್‌ಗೆ ನಿಂತು, ಆರಿಸಿ ಬಂದು ಎಂ.ಎಲ್.ಎ. ಆಗಬೇಕು ಎಂಬ ಕನಸಿದೆ. ಈ ಕನಸಿನ ಆರಂಭಕ್ಕಾಗಿ ಅವನಿಗೆ ಪ್ರಬಲ ಪಕ್ಷದಿಂದ ಟಿಕೇಟ್ ಬೇಕಿದೆ. ಈ ಟಿಕೇಟ್‌ಗಾಗಿ ಆ ಪಕ್ಷದ ಮಂತ್ರಿ ಒಂದು ಪರೀಕ್ಷೆಯನ್ನೇ ಮುಂದಿಟ್ಟಿದ್ದಾರೆ. ಅದು ಹೀಗಿದೆ– ಒಂದು ಪ್ರಬಲ ಬಹುರಾಷ್ಟ್ರೀಯ ಕಂಪನಿಗೆ ಈ ಪ್ರದೇಶದಲ್ಲಿ ನೆಲೆಯೂರಲು ೩೦೦ ಎಕರೆಯಷ್ಟು ಭೂಮಿ ಬೇಕಾಗಿದೆ. ಈ ಊರಿನ ಜಮೀನಿನ ವ್ಯಾಪ್ತಿ ಅಷ್ಟಿದೆ. ಈ ಸ್ಥಳ ಕಂಪನಿಗೆ ಪ್ರಶಸ್ತವಾಗಿಯೂ ಇದೆ. ಆದರೆ ಬಾಕಿ ಇರುವ ಕೆಲಸವೆಂದರೆ, ರೈತರಿಂದ ಅವರ ಭೂಮಿಯನ್ನು ಖರೀದಿಸುವುದು. ಮಳೆ–ಬೆಳೆ ಸರಿಯಿಲ್ಲ ಎಂಬುದನ್ನೇ ನೆಪವಾಗಿಟ್ಟುಕೊಳ್ಳುವುದು. ಕಂಪನಿಯಲ್ಲಿ ಊರ ಯುವಕರಿಗೆ ಉದ್ಯೋಗಾವಕಾಶ ಒದಗಿಸುವುದು– ಎಂಬ ಆಮಿಷವನ್ನು ಒಡ್ಡುವುದು. ಆದರೆ ಶಿವಪ್ಪಗೌಡನಿಗೆ ಇದೊಂದು ಆಗದ ಕೆಲಸ ಅನ್ನಿಸಿಬಿಟ್ಟಿತ್ತು. ತಾನು ಕೇಳಿದ ಕೂಡಲೇ ಜನ ಭೂಮಿ ಕೊಟ್ಟಾರು ಎನಿಸಲಿಲ್ಲ. ಕಾಲೇಜು ಕಲಿತ ಹುಡುಗರಲ್ಲಿ ತುಂಬಾ ಸಣ್ಣ ಪ್ರಮಾಣದಲ್ಲಿಯೇ ಆದರೂ; ಪರಿಸರದ ಜಾಗೃತಿ ಬಂದಿದೆ– ಎಂಬ ಭಯ ಬೇರೆ. ಹಾಗಾಗಿ ಶಿವಪ್ಪಗೌಡ, ರೈತರ ಭೂಮಿಯನ್ನು ತಾನೇ ಖರೀದಿಸಿಬಿಡುವ, ಅವರಿಗೆ ಕಂಪನಿಯ ವಿಷಯವನ್ನು ತಿಳಿಸಬಾರದು ಎಂದು ಯೋಚಿಸುತ್ತಾನೆ.

ಕಥೆಯ ಕೇಂದ್ರ ಸಮಸ್ಯೆ ಎನ್ನುವುದು, ಮಲ್ಲಪ್ಪಗೌಡನ ಮರಣವನ್ನು ಮುಚ್ಚಿಟ್ಟು, ಅದನ್ನೂ ತನ್ನ ಹಿತಾಸಕ್ತಿಗೆ ಬಳಸಿಕೊಳ್ಳುವ ಹಂತದಲ್ಲಿ. ಶಿವಪ್ಪಗೌಡನಿಗೆ ಅಪ್ಪನ ಶವ ಸಂಸ್ಕಾರಕ್ಕಿಂತಲೂ ತನ್ನ ಪಾರ್ಟಿ ಮೀಟಿಂಗ್, ಅಲ್ಲಿ ಫೈನಲ್ ಆಗಿ ಬಿಡಬಹುದಾದ ತನ್ನ ಟಿಕೆಟ್ ಸಿಗುವಿಕೆಯ ವಿಚಾರ ಮುಖ್ಯವಾಗುತ್ತದೆ. ಇದಕ್ಕಾತ ಹಿರೇಮಠದಪ್ಪನ ಮೇಲೆ ಒತ್ತಡ ಹೇರುತ್ತಾನೆ. 'ಎಂಥ ಗಂಡಾಂತರದ ಮಾತು ಆಡ್ತಿದಿ ತಮ್ಮಾ' ಎಂದು ಹಿರೇಮಠದಪ್ಪ ಕಂಗಾಲಾಗುತ್ತಾನೆ. ಆದರೆ ಶಿವಪ್ಪಗೌಡನ ಮಾತಿಗೆ ಆತ ಮಣಿಯಲೇಬೇಕಾಗುತ್ತದೆ. ಈಗ ಆತ, ವಿಷಯವನ್ನು ಮುಚ್ಚಿಡಲು ಬೇಕಾದ ವ್ಯವಸ್ಥೆಯನ್ನು ಮಾಡತೊಡಗುತ್ತಾನೆ. ಗೌಡಿಕೆಯ ಹಣ, ಅಧಿಕಾರಗಳು ಬಹಳ ಸಲೀಸಾಗಿ ಧರ್ಮ-ನ್ಯಾಯಗಳನ್ನೆಲ್ಲ ಕೊಂಡುಕೊಳ್ಳುತ್ತವೆ. ಅದರಲ್ಲೂ ಜಮೀನ್ದಾರೀ ವ್ಯವಸ್ಥೆಯೇ ಬಂಡವಾಳಶಾಹೀ ವ್ಯವಸ್ಥೆಯಾಗಿ ಬದಲಾಗುತ್ತಿರುವ ಹೊತ್ತಿನಲ್ಲಿ ಅದು ತನ್ನ ಕಾಲೂರುವ ಮೆಟ್ಟಿಲಾಗಿ ಧರ್ಮವನ್ನು ಬಳಸಿಕೊಂಡಿತು.

ಮಲ್ಲಪ್ಪಗೌಡನ ಸಾವು ಘೋಷಣೆಯಾಗುವ ಸಂದರ್ಭದ ನಾಟಕೀಯತೆಯೇ ಇತ್ತೀಚಿನ ದಶಕಗಳಲ್ಲಿ ಭಾರತದ ಪ್ರಜಾತಂತ್ರ ವ್ಯವಸ್ಥೆಯು ತನ್ನ ಅಧಿಕಾರ ರಾಜಕಾರಣದ ಲಾಭಕ್ಕಾಗಿ, ಸಾವನ್ನೂ ಬಳಸಿಕೊಳ್ಳುತ್ತಿರುವುದನ್ನು ಕಾಣಿಸುತ್ತಿದೆ. ಮಲ್ಲಪ್ಪಗೌಡನ ಸಾವು, ಶಿವಪ್ಪಗೌಡನಿಗೆ ರಾಜಕೀಯ ಮುಖಂಡರ ಸಿಂಪಥಿಯನ್ನು ಬಳಸಿಕೊಳ್ಳುವ ವೇದಿಕೆಯಾಗುತ್ತದೆ. ಜೊತೆಗೆ, ಮಣ್ಣಿಗೆ ಬಂದು ಮುಕುರಿದ ಜನರ ದಟ್ಟಣೆಯನ್ನು ತೋರಿಸಿ, ತನಗಿರುವ ಜನಬೆಂಬಲವನ್ನು ಪ್ರಕಟಿಸುವ ಅವಕಾಶವೂ ಆಗುತ್ತದೆ. ಜನರನ್ನು ಸೆಳೆಯಲು ಶಿವಪ್ಪಗೌಡನಿಗೆ ಸರಳ ದಾರಿಯಿದೆ. ಅದು ಅವರ ಬಡತನ. ರುಚಿಯಾದ ಊಟದ ವ್ಯವಸ್ಥೆಯನ್ನು ಧಾರಾಳವಾಗಿ ಮಾಡಿದ್ದೇ ಜನ ಹಾಗೆ ಮುಕುರಿ ಹೊಟ್ಟೆತುಂಬಾ ಉಂಡು, ಮಲ್ಲಪ್ಪಗೌಡನಿಗೆ 'ಸಾ ಮಾಡಿ' ಹೋಗಲು ಕಾರಣ. ಜನರ ಅಸಹಾಯಕತೆಯನ್ನು ಪಟ್ಟಾಗಿ ಬೆಳೆಸಿಕೊಳ್ಳುವ ಶ್ರೀಮಂತಿಕೆಯ ಹುನ್ನಾರ ಸಾಮಾಜಿಕ ರಾಜಕಾರಣವಾಗಿರುವುದನ್ನು ಈ ಪ್ರಸಂಗ ಸ್ಪಷ್ಟಪಡಿಸುತ್ತದೆ.

ಇಡೀ ಕಥೆಯಲ್ಲಿ ಪ್ರತಿರೋಧದ ಧ್ವನಿ ಬ್ಯಾಗರ ವಜ್ರಪ್ಪ. ಅವನಿಗೆ ತನ್ನ ಕನಸಿನ ಮೇಲೆ ನಂಬಿಕೆ. ಮಲ್ಲಪ್ಪಗೌಡ ನಿನ್ನೆಯೇ ಸತ್ತಿದ್ದಾನೆ ಅಂತ ಅವನಿಗೆ ಪ್ರಬಲವಾಗಿ ಅನ್ನಿಸುತ್ತಿದೆ. ಆದರೆ ಸಾಬೀತು ಮಾಡಲು ಸಾಧ್ಯವಾಗುತ್ತಿಲ್ಲ. ಶಿವಪ್ಪಗೌಡನು ನಮ್ಮ ಬೀಳುಭೂಮಿಯನ್ನು ಕ್ರಯಕ್ಕೆ ಕೊಳ್ಳುವುದರ ಹಿಂದೆ ಏನಾದರೂ ಲಾಭದಾಯಕ ಹುನ್ನಾರವಿದ್ದೀತು ಎನಿಸುತ್ತದೆ ಜನರಿಗೆ. ಆದರೆ ಹಾಗೆ ಅನ್ನಿಸಿದ್ದನ್ನು ಪುರಾವೆಯಾಗಿಸುವುದು ಸಲೀಸಾಗುವುದಿಲ್ಲ. ಅವರವರ ಅಸಹಾಯಕತೆಯ ವರ್ತುಲದಲ್ಲಿ ಅರಿವಿಗೆ ಬಂದಿದ್ದನ್ನೂ

ಕಾರ್ಯರೂಪಕ್ಕೆ ತರಲು ಸಾಧ್ಯವಾಗುವುದಿಲ್ಲ. ಅಲ್ಲಲ್ಲಿ ಪ್ರತಿಭಟನೆಯ ಕ್ಷೀಣಧ್ವನಿ ಮಾತ್ರ ಕೇಳುತ್ತದೆ. ಬಂಡವಾಳಶಾಹಿಗೆ ಅಂತಹ ಧ್ವನಿಯನ್ನು ಅಡಗಿಸುವ ಎಲ್ಲ ಪ್ರಾಬಲ್ಯವೂ ಇರುತ್ತದೆ. ಬ್ಯಾಗಾರ ವಜ್ರಪ್ಪನಂತಹ ಸಮಾಜದ ಕಟ್ಟಕಡೆಯ ಮೊಂಡು ಮನುಷ್ಯ ಮಾತ್ರ; ತನ್ನ ನಂಬಿಕೆಯಿಂದ ಸರಿದು, ಬಂಡವಾಳವಾದದೊಂದಿಗೆ ರಾಜಿ ಮಾಡಿಕೊಳ್ಳಲು ಸಿದ್ಧನಿರುವುದಿಲ್ಲ. 'ಆ ಬ್ಯಾಗರ ಸೂಳೆಮಗನಿಗೆ ಕೂಳು ಹಾಕಿ ಕಳ್ಸು' ಎಂದರೆ, ವಜ್ರಪ್ಪ ತನ್ನ ಪಟ್ಟು ಬಿಡುವುದಿಲ್ಲ. 'ನಾ ಕೂಳಿಗ್ ಬಂದಿಲ್ಲ ಕನವ್ವ, ಕುಸಿ ಕೇಳಾಕ ಬಂದೀನಿ ಕುಸಿ' ಎನ್ನುತ್ತಾನೆ. ಸತ್ತ ಕುಣಿ ತೋಡಿದ ಮೇಲೆ ಕೇಳುವ ಕುಸಿಯನ್ನು ಈಗಲೇ ಕೇಳುತ್ತಿದ್ದಾನೆ. ಮಾರನೆಯ ದಿನ ಮಲ್ಲಪ್ಪಗೌಡನ ಸಾವಿನ ಸುದ್ದಿ ಬಂದ ಮೇಲೆ ಕುಣಿ ತೋಡಲು ವಜ್ರಪ್ಪ ಸುತಾರಾಂ ಸಿದ್ಧನಾಗುವುದಿಲ್ಲ. ತನ್ನ ದೈವ ಗುರುಸಿದ್ಧನ ದರ್ಶನಕ್ಕೂ ಮನಸ್ಸು ಮಾಡುವುದಿಲ್ಲ. ಗೌಡನ ಆಳುಗಳು ಅವನನ್ನು ಬಲವಂತದಿಂದ ಹೊತ್ತುತಂದು ಇಳಿಸಿದ ಮೇಲೂ, 'ಹುಸಿ, ಎಲ್ಲ ಹುಸಿ! ಲೇ ಸೂಳೆಮಕ್ಳೇ ಬುಡ್ರಿ! ಗುರುಸಿದ್ಧನೇ ಹುಸಿ. ಶಿವಪ್ಪಗೌಡ ಮ್ಹಾ ಹುಸಿ!' ಅಂತ ಕೂಗಾಡುತ್ತಾನೆ. ಸಾಕ್ಷಾತ್ ಶಿವನ ರೂಪದಂತಿದ್ದ ಸಿದ್ಧಯ್ಯ ವಜ್ರಪ್ಪನ ಎದೆಮೇಲೆ ಕಾಲಿಟ್ಟು ಶಂಕ ಊದುತ್ತಾನೆ. ಮಲ್ಲಪ್ಪಗೌಡನ ಹೆಣದ ಮೆರವಣಿಗೆ ಹೊರಟಿತು. ಅಂಗಳದಲ್ಲಿ ವಜ್ರಪ್ಪನ ಹೆಣ ಬಿದ್ದಿತ್ತು. ಈ ಅನ್ಯಾಯವನ್ನು ಎದುರಿಸುವ ಏಕೈಕ ಜೀವ ರುದ್ರವ್ವ. ಗಂಡನ ಹೆಣ ತಂದು ತಾನೊಬ್ಬಳೇ ಮಣ್ಣುಮಾಡಿ, ಹರಕು ಗುಡಿಸಲಿನ ಹುಳ ತಿಂದ ಕಂಬಕ್ಕೆ ಬೆನ್ನು ಆನಿಸಿಕೊಂಡು ಕೂತಿದ್ದಳು. ಅಲ್ಲಿಗೆ ಬಂದು, ತನ್ನ ಮಗಾ ಎಲ್ಲಿ? ಎಂದು ನಾಟಕ ಮಾಡುವ ಗುರುಸಿದ್ಧನನ್ನು; ತನ್ನ ಒಡಲ ರೋಷವನ್ನೆಲ್ಲ ಹೊರಹಾಕುವಂತೆ ಹಿಗ್ಗಾಮುಗ್ಗಾ ಬಡಿಯುತ್ತಾಳೆ ರುದ್ರವ್ವ. ಆಗ ಸಿದ್ಧನಿಗೆ ತನ್ನ ತಪ್ಪಿನ ಅರಿವಾಗುತ್ತದೆ. ಮಾರನೆ ದಿನ ಗೌಡನ ಮನೆಗೆ ಹೋಗಿ ಸಿದ್ಧಜ್ಜ; ಹಿರೇಮಠದಪ್ಪ ನನ್ನ ಕರೆಸಿಕೊಂಡು ನಾನು ತಪ್ಪು ಮಾಡುವ ಹಾಗೆ ಮಾಡಿದ- ಎಂದು ವಿಷಾದಪಡುತ್ತಾನೆ. 'ಈ ವ್ಯಾಳ್ಯಾದಾಗ ನಾನು ಅಗಸೆ ಮ್ಯಾಲ ನಿಂತು, ಊರು ಕೇರಿ ದೈವದ ಮುಂದ ಆತ್ಮದ ನುಡಿ ನುಡಿದು ಕ್ಷಮಾ ಬೇಡ್ತೀನಿ' ಎನ್ನುತ್ತಾನೆ. ಆದರೆ ಶಿವಪ್ಪಗೌಡ ಇಂಥದ್ದನ್ನು ಮಾಡಿಸಿಕೊಟ್ಟಾನೆಯೇ? ಅವನ ಆಳುಗಳು ಸಿದ್ಧನನ್ನು ಹಿಡಿದು ಬಗ್ಗಿಸಿ ಕೋಣೆಯ ಕದಹಾಕುತ್ತಾರೆ. ಅಲ್ಲಿಗೆ ಸಿದ್ಧಯ್ಯನೂ ವಜ್ರಪ್ಪನ ಹಾದಿ ಹಿಡಿದನೆಂದೇ ಅರ್ಥ. ಆದರೆ ಸಿದ್ಧ ತಪ್ಪಿಸಿಕೊಂಡು ಓಡುತ್ತಿದ್ದ. ಬಂಡವಾಳಶಾಹಿಯ ಕಪಿಮುಷ್ಠಿಯಿಂದ ತಪ್ಪಿಸಿಕೊಂಡು ಓಡಲೇ ಬೇಕಾದ ಸತ್ಯದ ಹಾಗೆ, ನಿಯತ್ತಿನ ಹಾಗೆ.

ಶಿವಪ್ಪಗೌಡನಿಗೆ ಅಧಿಕಾರ ಬೇಕು. ಅದಕ್ಕಾಗಿ ಅವನು ಎಂತಹ ರಾಜಿಗೂ ಸಿದ್ಧ. ಎಷ್ಟು ಕೊಲೆಗೂ ಸಿದ್ಧ. ಆ ಅಧಿಕಾರಕ್ಕೂ ಕಂಪನಿಯ ಸ್ಥಾಪನೆಗೂ ಅಂತಃ ಸಂಬಂಧವಿದೆ.

ಕಥೆಯಲ್ಲಿ ತುಂಬ ತೀವ್ರವಾಗಿ, ಜಮೀನ್ದಾರೀ ವ್ಯವಸ್ಥೆಗೂ ಬಂಡವಾಳವಾದಿ ವ್ಯವಸ್ಥೆಗೂ ಇರುವ ವ್ಯತ್ಯಾಸ ಕಾಣುತ್ತದೆ. ಜಮೀನ್ದಾರೀ ವ್ಯವಸ್ಥೆಯ ಪ್ರತಿನಿಧಿಯಾಗಿದ್ದ ಮಲ್ಲಪ್ಪಗೌಡನು ಮಾಡುವ ಅನ್ಯಾಯ-ಕ್ರೌರ್ಯಗಳು ನೇರಾನೇರವಾಗಿದ್ದವು. ಜನರ ಕಣ್ಣಿಗೆ ಕಾಣುತ್ತಿತ್ತು. ತಿಳಿಯುತ್ತಿತ್ತು. ಆದರೆ, ಶಿವಪ್ಪಗೌಡನ ಪಟ್ಟು, ತಂತ್ರಗಳು ಜನರಿಗೆ ಕಾಣುವುದಿಲ್ಲ. ಅವು ಕಣ್ಣ ಅಂದಾಜನ್ನು ಮೀರಿ ಇವೆ. ಹಾಗಾಗಿಯೇ 'ಶಿವಪ್ಪಗೌಡ ಅವನ ತಂದಿಹಾಂಗಲ್ಲ. ಒಳ್ಳೆಯಾತ' ಎಂಬ ಹಿರೇಮಠದಪ್ಪನ ಮಾತಿಗೆ ಜನ ತಲೆದೂಗಬೇಕಾಗುತ್ತದೆ. ಅಧಿಕಾರದ ಹಪಾಹಪಿ ಮತ್ತು ಧರ್ಮ ರಾಜಕಾರಣಗಳು ಸಮಾಜದ ತಳಾದಿಯಿಂದಲೇ ಹೇಗೆ ಒಂದಾಗುತ್ತಿವೆ- ಎಂಬ ಈ ಕಾಲದ ಸತ್ಯಕ್ಕೆ ಕಥೆ ಕನ್ನಡಿಯಾಗುತ್ತದೆ. ವಜ್ರಪ್ಪನ ಪ್ರತಿರೋಧವನ್ನು ಬಗ್ಗುಬಡಿಯಲು ಹಿರೇಮಠದಪ್ಪ ಕರೆಯಿಸಿಕೊಳ್ಳುವುದು ಗುರುಸಿದ್ಧಯ್ಯನನ್ನು. ಗುರುಸಿದ್ಧನನ್ನು ತನ್ನ ಬಳಕೆಗೆ ಬಳಸಿಕೊಳ್ಳುವ ಹಿರೇಮಠದಪ್ಪ ತನ್ನ ಕೈಗೆ ರಕ್ತ ಅಂಟಿಕೊಳ್ಳದ ಮಹಾನ್ ಸಾತ್ವಿಕನಾಗಿ ಕಾಣುತ್ತಾನೆ ಎಂಬ ವಿಷಾದದ ಧ್ವನಿಯೂ ಕಥೆಯಲ್ಲಿದೆ. 'ಸವಾರಿ'ಯ ಕಟ್ಟ ಕಡೆಯ ಬಿಗಿಹಿಡಿತ ಇರುವುದು ಯಾರ ಕೈಯಲ್ಲಿ? ಎಂದು ಗುರುತಿಸುವುದೂ ಸಾಧ್ಯವಿಲ್ಲದ ಹಾಗೆ ವ್ಯವಸ್ಥೆಯ ಸವಾರಿ ಇದೆ ಎನ್ನುತ್ತದೆ ಕಥೆ. ಕುಂವೀಯವರ 'ಕತ್ತಲನು ತ್ರಿಶೂಲ ಹಿಡಿದ ಕಥೆ'ಯ ಕತ್ತಲನ ಹಾಗೆ. ಇಲ್ಲಿಯ ಕಥೆಯ ರುದ್ರವ್ವನೂ ಶೋಷಕ ವ್ಯವಸ್ಥೆಯ ವಿರುದ್ಧ ತೀವ್ರ ಪ್ರತಿರೋಧವನ್ನು ಸಹಿಸಿಕೊಳ್ಳಲಾರದ ಅನಿವಾರ್ಯತೆಯಲ್ಲಿ ಸಿಡಿದೇಳುತ್ತಾಳೆ. ಆದರೆ, ಕತ್ತಲನಾಗಲಿ ರುದ್ರವ್ವನಾಗಲಿ ಕೆಟ್ಟ ವ್ಯವಸ್ಥೆಯ ವಿರುದ್ಧದ ಪ್ರತಿಭಟನೆಯ ಆದರ್ಶವೇ ಹೊರತೂ ವಾಸ್ತವವಲ್ಲ. ಇದು ಹೀಗಾಗಬೇಕು ಎನ್ನುವುದು ಸಂವೇದನಾ ಶೀಲತೆಯು ಕಾಣುವ ಕನಸು. ಕುವೆಂಪು ಅವರ ಕಲ್ಕಿಯ ಹಾಗೆ.

'ಜಾಗತೀಕರಣದ ಪರಿಣಾಮಗಳನ್ನು ಮನ ತಟ್ಟುವಂತೆ ಹೇಳುವ ತಾಕತ್ತಿನ ಕಥೆಗಾರ' (ಡಾ. ಮುಜಾಫರ್ ಅಸ್ಸಾದಿ) ಎಂದು ಗುರುತಿಸಿಕೊಂಡಿರುವ ಮಹಾಂತೇಶ ನವಲಕಲ್ ಅವರ ಬಹುತೇಕ ಕಥೆಗಳು ಜಾಗತೀಕರಣದ ವಿಷವರ್ತುಲವನ್ನು ವಿವರಿಸಿಕೊಳ್ಳುವಂತೆ ಇವೆ. ಅವುಗಳಲ್ಲಿ ಮುಕ್ತ ಮಾರುಕಟ್ಟೆಯು ಕಂಪನಿ ಮಾರುಕಟ್ಟೆಯಾಗಿ, ಭಾರತದ ಬೆನ್ನೆಲುಬಾದ ಕೃಷಿ ವ್ಯವಸ್ಥೆಯನ್ನು ಮತ್ತು ಆ ಮೂಲಕ ಸಾಮಾಜಿಕ ಜೀವನವನ್ನು ಹೇಗೆ ತುಳಿದುಹಾಕಿತು ಎಂಬುದನ್ನು ಹೇಳುವ ಕಥೆ- 'ಭಾರತ ಭಾಗ್ಯವಿಧಾತ'.

ಈ ಕಥೆಯು ಭಾರತದ ವಿದ್ಯಾವಂತ, ವಿಚಾರವಂತ ಆದರೆ ಅಸಹಾಯಕ ಯುವಕ ರಮೇಶನ ಬದುಕಿನಲ್ಲಿ ನಡೆಯುವ ವಿದ್ಯಮಾನಗಳ ಸಾಕ್ಷೀಪ್ರಜ್ಞೆಯಲ್ಲಿ ಸಂಭವಿಸುತ್ತದೆ. ಆತ ಕುಳಿತಿರುವ ಅರೆಗತ್ತಲು ಕೋಣೆ ಮತ್ತು ಮೇಲಕ್ಕೆ ಹಿಟ್ಟು ಉದುರುವ ಜಂತಿಗಳೇ ಭಾರತದ

ದುರಂತ ವಾಸ್ತವವನ್ನು ಸಂಕೇತಿಸುತ್ತವೆ. ಅವನ ಅಪ್ಪ-ಅವ್ವ ಇಬ್ಬರೂ ವ್ಯವಸಾಯದಲ್ಲಿ ಸಂಭವಿಸಿದ ಹಾನಿಯಿಂದ ಕಂಗೆಟ್ಟು, ಹತ್ತಿಬೆಳೆಗೆ ಹೊಡೆವ ಕೀಟನಾಶಕ ಕುಡಿದು ಸತ್ತಿದ್ದಾರೆ. ಭಾರತದ ರೈತರ ಆತ್ಮಹತ್ಯೆಗಳ ಯಾದಿಗೆ ಮತ್ತೊಂದು ಹೆಸರು ಸೇರ್ಪಡೆಯಾಗಿದೆ ಅಷ್ಟೇ. ಈಗ ಉಳಿದಿರುವವರು ರಮೇಶನನ್ನು ಅವಲಂಭಿಸಿದ ಎರಡು ಜೀವಗಳು. ಒಂದು, ಅವನ ಬೆನ್ನಿಗೆ ಬಿದ್ದ ಕುರುಡು ತಂಗಿ. ಮತ್ತೊಬ್ಬಳು ಅಜ್ಜಿ. ತಂಗಿಗೆ ಸಂಗೀತ ಕಲಿಯೋ ಆಶೆ. ಆದರೆ ಗದಗಿನ ಮಠದಲ್ಲಿ ಕುರುಡು ಮಕ್ಕಳಿಗೆ ಸಂಗೀತ ಕಲಿಸಲಾಗುತ್ತದೆ ನಿಜ. ಹೆಣ್ಣುಮಕ್ಕಳಿಗಲ್ಲವಲ್ಲ. ಪಿತೃಸತ್ತೆಯು ಹೆಣ್ಣನ್ನು ದೂರೀಕರಿಸುವ ಚಿತ್ರವನ್ನು ತುಂಬ ಸೂಕ್ಷ್ಮವಾಗಿ ಕಥೆ ಕಾಣಿಸುತ್ತದೆ.

ಅಜ್ಜಿ, ರಮೇಶನಿಗೆ ಅವರ ಅಪ್ಪನ ಖಾತೆಕೀರ್ದಿಯ ಪುಸ್ತಕವನ್ನು ತೆರೆದು ನೋಡಲು ಹೇಳುತ್ತಾಳೆ. ಯಾಕೆಂದರೆ ರಮೇಶನ ಅಪ್ಪ ಸಾಲಮಾಡಿದ್ದು ಅವರ ಊರಿನಲ್ಲಿ ಕೀಟನಾಶಕಗಳ ಅಂಗಡಿಯನ್ನು ಇಟ್ಟುಕೊಂಡು ಈಗ ಮಹಾನ್ ಶ್ರೀಮಂತನಾಗಿರುವ ರಾಮಚಂದ್ರಪ್ಪನ ಹತ್ತಿರ. ಆ ರಾಮಚಂದ್ರಪ್ಪ ಸಾಲದ ೩ ಲಕ್ಷಕ್ಕೆ ಬಡ್ಡಿ ಸೇರಿ ೭ ಲಕ್ಷ ಮಾಡಿದ್ದಾನೆ. ರಮೇಶನ ೬ ಎಕರೆ ಭೂಮಿ ಬರೆಯಿಸಿಕೊಂಡೂ ಮೇಲೆ ೧ ಲಕ್ಷ ತೀರಿಸಬೇಕಾದ ಸಾಲವಿದೆ ಎನ್ನುತ್ತಿದ್ದಾನೆ. ರಮೇಶ ಅಪ್ಪನ ಲೆಕ್ಕದ ಪುಸ್ತಕ ತೆರೆದು ನೋಡಿದಾಗ ಅದರಲ್ಲಿ ಸಾಲದ ವಿವರಗಳಿದ್ದವು. ರಮೇಶನ ಶಿಕ್ಷಣಕ್ಕೆ ೧ ಲಕ್ಷ, ಹತ್ತಿಯ ಕೀಟನಾಶಕಕ್ಕೆ ೧ ಲಕ್ಷ, ಭತ್ತದ ಕೀಟನಾಶಕಕ್ಕೆ ೧ ಲಕ್ಷ ಎಂದು ನಮೂದಾಗಿತ್ತು. ಸಾಯನ್ಸನಲ್ಲಿ ಡಿಗ್ರಿ ಪಡೆದು, ಸದ್ಯ ತಾನೂ ಒಂದು ಕೀಟನಾಶಕ ಕಂಪನಿಯ ಸೇಲ್ಸ್‌ಮನ್ ಆಗಿ ನೌಕರಿ ಮಾಡುತ್ತಿರುವ ರಮೇಶನಿಗೆ ತನ್ನ ಅಪ್ಪನ ಕೃಷಿ ಸೋಲಿನ ಕಾರಣ ನಿಚ್ಚಳವಾಗಿತ್ತು. ಅಜ್ಜಿ ಮಾತ್ರ, ಹತ್ತಿ ಬೆಳಿ ಬ್ಯಾಡ ಅಂದ್ರೂ ಕೇಳಲಿಲ್ಲ ಎಂದು ಪಿರಿಪಿರಿ ಮಾಡಿಕೊಳ್ಳುತ್ತ ಕಣ್ಣೊರೆಸಿಕೊಳ್ಳುತ್ತಿದ್ದಾಳೆ. ನಮ್ಮ ದೇಶದ ರೈತರು ತಮ್ಮ ಸಾಂಪ್ರದಾಯಿಕ ಕೃಷಿ ಪದ್ಧತಿಯನ್ನೂ ಕೃಷಿ ಬೆಳೆಯನ್ನೂ ಬಿಟ್ಟು; ವಾಣಿಜ್ಯ ಬೆಳೆಗಳನ್ನು ಬೆಳೆದು ಲಾಭ ಮಾಡಿಕೊಳ್ಳಲು ಪ್ರಯತ್ನಿಸಿದ್ದರ ಕಾರಣ ಯಾರು? ರೈತರ ಬುದ್ಧಿಗೆ ಮಂಕುಬೂದಿ ಎರಚಿದ ಪಾಪದಲ್ಲಿ ಕಂಪನಿಗಳ ಪಾಲೆಷ್ಟು? ಕಂಪನಿ ಉತ್ಪನ್ನಗಳನ್ನು ಜಾಹೀರಾತು ಮಾಡಿದ ಮಾಧ್ಯಮಗಳ ಪಾಲೆಷ್ಟು? ನಾವು ಪ್ರಜಾಸತ್ತಾತ್ಮಕ ದೇಶದಲ್ಲಿ ಇದ್ದೇವೆಯೇ? ಅಥವಾ ಕಂಪನಿ ಸರ್ಕಾರಗಳ ಅಧೀನದಲ್ಲಿ ಇದ್ದೇವೆಯೇ? ಎಂಬ ಪ್ರಶ್ನೆಗಳನ್ನು ಈ ಸಂದರ್ಭವು ಮುನ್ನೆಲೆಗೆ ತರುತ್ತದೆ.

ಅಪ್ಪನ ಖಾತೆಕೀರ್ದಿಯ ಪುಸ್ತಕವು ರಮೇಶನಿಗೆ ಚಕ್ಕನೆ ಒಂದು ಸತ್ಯವನ್ನು ಹೊಳೆಯಿಸುತ್ತದೆ. ಹತ್ತಿ ಬೆಳೆಗೆ ಅಪ್ಪ, ಭತ್ತದ ಕೀಟನಾಶಕ ಖರೀದಿಸಿದ್ದು ಯಾಕೆ? ಅಪ್ಪನ

ದುರಂತದ ಮೂಲ ಕಾರಣ ಈ ಪ್ರಶ್ನೆಯಲ್ಲಿಯೇ ಇದೆ ಎನ್ನಿಸುತ್ತದೆ ಅವನಿಗೆ. ಹೊಲದ ಸಾಲದ ವಿಷಯ ಇತ್ಯರ್ಥ ಮಾಡಿಕೊಂಡು ಬರಲು ಅವನು ರಾಮಚಂದ್ರಪ್ಪನ ಅಂಗಡಿಗೆ ಹೋಗುತ್ತಾನೆ. ಅವನಿಗೆ ಈ ಪ್ರಶ್ನೆಯನ್ನು ಕೇಳುತ್ತಾನೆ. ಆದರೆ ರಾಮಚಂದ್ರಪ್ಪ ಮಾತ್ರ ಸ್ವಲ್ಪವೂ ಮುಜುಗರಕ್ಕೆ ಒಳಗಾಗದೆ ಕಂಪನಿಯ ನಿಯಮವನ್ನು ಹೇಳುತ್ತಾನೆ– ಕಂಪನಿಗಳು ಮಾರಾಟದಲ್ಲಿ ಸರಪಳಿ ಟಾರ್ಗೆಟ್‌ನ್ನು ಇಟ್ಟುಕೊಂಡಿರುತ್ತವೆ. ಹತ್ತಿಯ ಕೀಟನಾಶಕದ ಮಾರಾಟದ ಸರಪಳಿಯಲ್ಲಿ ಭತ್ತದ ಕೀಟನಾಶಕವನ್ನೂ ಮಾರಬೇಕು. ಕಂಪನಿಯ ಈ ಲಾಭದಾಯಕ ಯೋಜನೆಯು ಮಾರಾಟಗಾರರ ಮೂಲಕ ರೈತರ ಮೇಲೆ ಪ್ರಯೋಗಗೊಳ್ಳುತ್ತದೆ. 'ನಮಗೆ ಕಂಪನಿಗಳು ವಿಧಿಸುವ ಅನ್ವಯವನ್ನು ನಾವು ರೈತರಿಗೂ ಹಾಕುತ್ತೇವೆ' ಎಂದು ಸಲೀಸಾಗಿ ಹೇಳುತ್ತಾನೆ ರಾಮಚಂದ್ರಪ್ಪ. ಆದರೆ ಇಂತಹ 'ಕಂಪನಿ ಟಾರ್ಗೆಟ್'ಗಳ ದುರಂತ ಪರಿಣಾಮವನ್ನು ಗ್ರಹಿಸಬಲ್ಲವನು ರಮೇಶ. ಅವನ ಶಿಕ್ಷಣ ಜ್ಞಾನ ಇದನ್ನು ತಿಳಿಸುತ್ತದೆ. "ನೀವು ಭತ್ತಕ್ಕೆ ಬಳಸುವ ಕೀಟನಾಶಕವನ್ನು ಹತ್ತಿಗೆ ಕೊಟ್ಟರೆ ಅದು ಭತ್ತದ ಕೀಟನಾಶಕವನ್ನು ತಿಂದು ಶಕ್ತಿಶಾಲಿಯಾಗುತ್ತದೆ. ಮುಂದೆ ಯಾವ ಕೀಟನಾಶಕವೂ ಪ್ರಯೋಜನವಾಗದು. ಅದಕ್ಕಾಗಿ ರೈತರು ಸಾಯುವುದು ಖಚಿತ" ಎನ್ನುತ್ತಾನೆ. ಆದರೆ, ರೈತರ ಈ ದುರಂತಕ್ಕೆ ತಾನು ಜವಾಬ್ದಾರನಲ್ಲ ಎಂಬ ಧೋರಣೆಯು ರಾಮಚಂದ್ರಪ್ಪನದು. ಜ್ಞಾನವಿದ್ದೂ ತಿಳುವಳಿಕೆಯಿದ್ದೂ ಬಂಡವಾಳಶಾಹಿ ಧೋರಣೆಯೆದುರು ಅದು ನಿಸ್ಸತ್ವವಾಗುವುದನ್ನು ಕಥೆ ಸೂಚಿಸುತ್ತದೆ.

ಕಂಪನಿಯೊಳಗಿನ ಬಡರೈತರ ರಕ್ತಹೀರುವ ದುರಂತಕ್ಕೆ ವ್ಯಾಖ್ಯಾನವನ್ನು ಕಥೆ ತನ್ನ ರಾಚನಿಕ ಒಳಪದರಿನಲ್ಲಿಯೇ ವಿವರಿಸುತ್ತ ಹೋಗುತ್ತದೆ. ಕಂಪನಿಯು ಶಿರಸಿಯಲ್ಲಿ ನಡೆಯುವ ಕಾರ್ಯಕ್ರಮಕ್ಕೆ ರಮೇಶನನ್ನು ಒತ್ತಾಯದಿಂದ ಕಳಿಸುತ್ತಿದೆ. ಬೇರೆ ಆಯ್ಕೆಯೇ ಇಲ್ಲದ ಹಾಗೆ. ಅಲ್ಲಿಯ ರೆಸಾರ್ಟನಲ್ಲಿ ಭಾರತದ ಸೇಲ್ಸ್‌ಮ್ಯಾನೇಜರ್ ನಡೆಯಿಸಿಕೊಡುವ 'ಬ್ರೇನ್ ಸ್ಟಾರ್ಮಿಂಗ್ ಸೆಷನ್'ನಲ್ಲಿ ರೈತರಿಗೆ ಉಪಯೋಗ ಇಲ್ಲದಿದ್ದರೂ ಕೀಟನಾಶಕ ಕೊಳ್ಳುವಂತೆ ಪ್ರಚೋದಿಸುವುದು ಹೇಗೆ? ಎಂಬ ಟ್ರೇನಿಂಗ್ ನಡೆಸಲಾಗಿತ್ತು. ರಮೇಶನಿಗೆ ತಾನು ರೈತರನ್ನು ಕೊಲ್ಲೋ ಕಸಾಯಿಖಾನೆಯ ಭಾಗ ಎಂದು ತೀವ್ರವಾಗಿ ಅನ್ನಿಸತೊಡಗಿತ್ತು. ಆತನಿಗೆ ತನ್ನ ಕೆಲಸವನ್ನು ಸರಿಯಾಗಿ ನಿರ್ವಹಿಸುವುದು ಸಾಧ್ಯವಾಗುವುದಿಲ್ಲ. ಹಾಗಾಗಿ ಕಂಪನಿಯು ರಮೇಶನಿಗೆ ಸಹಾಯಕನೊಬ್ಬನನ್ನು ನೇಮಿಸುತ್ತದೆ. ರಮೇಶನೂ ಅವಾರ್ಡ್ ಪಡೆದುಕೊಳ್ಳುತ್ತಾನೆ. ಆದರೆ ಅವನ ಮನಸ್ಸಿನಲ್ಲಿ ಅಪರಾಧಿ ಪ್ರಜ್ಞೆಯು ಬಾಧಿಸುತ್ತಲೇ ಇರುತ್ತದೆ. ಇದೇ ಸಂದರ್ಭದಲ್ಲಿ ಊರಿನಲ್ಲಿ ಮೌಲ್ಡಿನ್ ಕಂಪನಿಯ ಕೀಟನಾಶಕದ

ಬಳಕೆಯಿಂದ, ಹುಳವಷ್ಟೇ ಸಾಯುವುದಿಲ್ಲ. ಬೆಳೆಯ ಮೊಗ್ಗೂ ಉದುರಿ ಹೋಗಿ, ವ್ಯವಸಾಯದಲ್ಲಿ ನಷ್ಟವಾಗಿ ಬಸಪ್ಪ ವಿಷ ಕುಡಿದು ಸಾಯುತ್ತಾನೆ. ರಮೇಶನಿಗೆ ಅವನ ಹೆಂಡತಿ ಅನಸೂಯಮ್ಮನ ನೆನಪಾಗುತ್ತದೆ. ತನ್ನ ತಾಯಿಯ ನೆನಪೂ ಅದರೊಂದಿಗೇ ತುಂಬಿಕೊಳ್ಳುತ್ತದೆ. ಈ ಇಂತಹ ಅನ್ಯಾಯದಲ್ಲಿ ಪಾಪದಲ್ಲಿ ತಾನೂ ಪಾಲುದಾರನಾಗಿದ್ದೇನೆ ಎಂದು ಅನ್ನಿಸತೊಡಗಿದಂತೆ ರಮೇಶ ಕೆಲಸಕ್ಕೆ ರಾಜೀನಾಮೆ ಕೊಡಲು ಮುಂದಾಗುತ್ತಾನೆ. ಆದರೆ ಕಂಪನಿಯು ಅವನನ್ನು ಗೊಬ್ಬರದ ವಿಭಾಗಕ್ಕೆ ವರ್ಗಾಯಿಸುತ್ತದೆ. ಈ ಬದಲಾವಣೆ ರಮೇಶನಿಗೆ ಅನಿವಾರ್ಯವಾಗಿ, ಮತ್ತೊಂದು ಹೈ ಫೈ ಆಗಿರುವ ಕಂಪನಿಯ ಕಾರ್ಯಕ್ರಮದಲ್ಲಿ ಭಾಗೀದಾರನಾಗುವ ಸಂದರ್ಭವನ್ನು ತಂದೊಡ್ಡುತ್ತದೆ. ಕಂಪನಿಯು ತನ್ನ ಆಯ್ದ ೧೦ ಜನ ಆಫೀಸರ್‌ಗಳನ್ನು ಸಂತೃಪ್ತಗೊಳಿಸಲು ಯೋಜಿಸಿದ ಕಾರ್ಯಕ್ರಮದಂತೆ ಅದು ಆಯೋಜಿತಗೊಂಡಿತ್ತು. ಆಫೀಸರ್‌ಗಳಿಗೆ ರಾತ್ರಿಯ ಮನರಂಜನೆಗಾಗಿ ೧೦ ಜನ ಹುಡುಗಿಯರನ್ನೂ ಕರೆಯಿಸಿಕೊಳ್ಳಲಾಗಿತ್ತು. ಒಳ್ಳೆಯ ಆಫೀಸರ್‌ಗಳಿಗೆ ಕೊಡಮಾಡಿದ ಅವಾರ್ಡನಲ್ಲಿ 'ಹಿಲಿಯೋಥಿಸಿಸ್ ಕೀಟದ ಬಂಗಾರ ಲೇಪಿತ ಮೂರ್ತಿ' ಇತ್ತು. ಗುಂಡಿನ ಪಾರ್ಟಿಯಲ್ಲಿ ನಡೆಯಬಾರದ ಅಸಭ್ಯತೆಗಳು ಕೇಳಬಾರದ ಅಶ್ಲೀಲಗಳು ತುಂಬಿತ್ತು. ರಾಮಚಂದ್ರಪ್ಪನಂತೂ 'ನನ್ನ ೫೦ ಕೋಟಿ ಆಸ್ತಿಯ ಕಾರಣ ಈ ಕೀಟ. ಇದು ಹಾಂ ಅನ್ನುವಷ್ಟರಲ್ಲಿ ೧೦ ಜನ ರೈತರನ್ನು ಕೊಲ್ಲುತ್ತದೆ' ಎಂದು ಬಡಬಡಿಸುತ್ತಾನೆ. ಆ ರಾತ್ರಿಯ ಹೇಸಿಕೆಯ ಅನುಭವಗಳಿಗೆ ಬೆನ್ನುಹಾಕಿ ಓಡಬೇಕೆಂದರೆ, ಗೇಟು ದಾಟುತ್ತಿದ್ದಂತೆ ಅಜ್ಜಿ ಮತ್ತು ಕುರುಡು ತಂಗಿಯ ಅನಾಥ ಸ್ಥಿತಿಯು ಕಣ್ಮುಂದೆ ಕಟ್ಟಿದಂತಾಗಿ ರಮೇಶ ಕುಸಿದು ಕೂಡುತ್ತಾನೆ. ಗೂಗೆ ಕೂಗುತ್ತಿತ್ತು.

ರಾಮಚಂದ್ರಪ್ಪನ ಅಂಗಡಿಯಲ್ಲಿ ಅವನು ಕುಳಿತ ಸೀಟಿನ ಮೇಲುಗಡೆ ಇದ್ದ ದೊಡ್ಡದಾದ ಕೀಟನಾಶಕದ ಚಿತ್ರವನ್ನು ನೋಡಿದ ರಮೇಶನಿಗೆ– ಆ ಹಸಿರು ಹುಳು ದೊಡ್ಡದಾಗಿ ಬ್ರಹ್ಮಾಂಡವನ್ನೇ ನುಂಗುವಂತೆ ಬಾಯಿತೆಗೆದ ಹಾಗೆ ಕಾಣುತ್ತದೆ. ಬಹುರಾಷ್ಟ್ರೀಯ ಕಂಪನಿಗಳು ತಮ್ಮ ಪ್ರೊಡಕ್ಟಗಳನ್ನು ಮಾರಾಟ ಮಾಡಲು ಭಾರತವನ್ನು ಮಾರುಕಟ್ಟೆ ಜಾಗೆಯಾಗಿ ಬದಲಿಸಿಕೊಂಡಿವೆ. ಕಂಪನಿಗಳಿಗೆ ತಮ್ಮ ಲಾಭ ಮುಖ್ಯ. ತಮ್ಮ ಲಾಭವನ್ನು ಆಗುಮಾಡಲು, ಈ ದೇಶದ ಜನರ ನೆಮ್ಮದಿಯನ್ನು ಲೂಟಿಮಾಡಲು ಅವರು ಇಲ್ಲಿಯದೇ ವಿದ್ಯಾವಂತರನ್ನು, ಮಾರುಕಟ್ಟೆಗೆ ಲಾಭ ತಂದುಕೊಡಬಲ್ಲ ಕುಶಲಿಗಳನ್ನು ಬಳಸಿಕೊಳ್ಳುತ್ತದೆ. ಅಥವಾ ಅವರನ್ನು ಹಣ ಮತ್ತು ಭ್ರಷ್ಟತೆಯ ಮೂಲಕ ಖರೀದಿಮಾಡುತ್ತದೆ. ಅವರು ಒಮ್ಮೆ ಬಂಡವಾಳವಾದದ ಎಂಜಲು ನೆಕ್ಕುವ ವ್ಯಕ್ತಿಗಳಾಗಿ

ಬದಲಾದಂತೆ, ಅವರಿಗೆ ಮಾನವೀಯತೆ, ನೈತಿಕತೆಗಳು ಮುಖ್ಯ ಸಂಗತಿಗಳಾಗಿ ಕಾಡುವುದಿಲ್ಲ. ಅವರು ರಾಮಚಂದ್ರಪ್ಪನಾಗಿ ಬದಲಾಗುತ್ತಾರೆ. ಎಲ್ಲವನ್ನೂ ಕೊಂಡುಕೊಳ್ಳುವ ಶಕ್ತಿಯಿರುವ ಬಂಡವಾಳವಾದವು ಭಾರತದ ಜನಸಾಮಾನ್ಯರ ಬದುಕನ್ನು ಹೇಗೆ ಧ್ವಂಸಗೊಳಿಸುತ್ತದೆ ಎನ್ನುವುದು ಕಥೆಯಲ್ಲಿ ದಾಖಲಾಗುತ್ತದೆ. ಇಂತಹ ಜಡ ಹೊಂದಾಣಿಕೆಗೆ ಸಿದ್ಧನಿಲ್ಲದ ರಮೇಶನಂತಹ ವ್ಯಕ್ತಿಗಳು ಮಾತ್ರ ಇಲ್ಲಿ ತಳಮಳಿಸುತ್ತಾರೆ. ಆದರೆ, ಅಂಥವರ ಸಂಖ್ಯೆಯು ದಿನದಿಂದ ದಿನಕ್ಕೆ ಕ್ಷಣದಿಂದ ಕ್ಷಣಕ್ಕೆ ಇಳಿಮುಖವಾಗುತ್ತಿರುತ್ತದೆ. ಮತ್ತು, ರಮೇಶನ ಜ್ಞಾನವನ್ನು ಸಂವೇದನಾಶೀಲತೆಯನ್ನು ಬಂಡವಾಳವಾದವು ಕಾಲಕಸವಾಗಿಸುತ್ತದೆ. ಕಂಪನಿಯ ಒಳಾಂಗಣದಲ್ಲಿ ನಡೆವ ಹೇಯ ಹೊಂದಾಣಿಕೆಗಳು, ಸಮಾಜದ ಹೊರಾಂಗಣದಲ್ಲಿಯೂ ಚಿತ್ತರಗೊಳ್ಳುತ್ತ ಇಡೀ ಭಾರತದ ಕೃಷಿಯೇ ಸರ್ವನಾಶವಾಗುತ್ತಿರುವುದನ್ನು ಕಥೆ ಸೂಚಿಸುತ್ತದೆ. ಕಥೆಯ ಓದು ಉಳಿಸುವ ಗಾಢ ವಿಷಾದವು ಸದ್ಯದ ಭಾರತ ಭಾಗ್ಯವಿಧಾತನ ಅನುಭವವೇ ಆಗಿದೆ.

ವಿವೇಕ ಶ್ಯಾನಭಾಗರ 'ಹುಲಿ ಸವಾರಿ' ಕಥೆಯು ಜಾಗತೀಕರಣದ ಮಾರುಕಟ್ಟೆ ನೀತಿಯ ಅಂತರಂಗವನ್ನೇ ಶೋಧಿಸಿಡುವ ಪ್ರಾತಿನಿಧಿಕ ಕಥೆ. ಜಾಗತೀಕರಣ ಎನ್ನುವುದೇ ಹುಲಿಸವಾರಿ. ಗ್ಯಾಟ್ ಒಪ್ಪಂದಕ್ಕೆ ಅಂಕಿತ ಹಾಕುವ ಮೂಲಕ ಭಾರತ ಈ ಹುಲಿಯ ಬೆನ್ನು ಹತ್ತಿ ಆಗಿದೆ. ಇನ್ನದು ಹುಲಿಯ ಜಾಡಿನ ಅಂಧಕಾರಣ್ಯವನ್ನು ಬರಿದೆ ಅಲೆಯಬೇಕು. ಈ ಅಲೆದಾಟದಲ್ಲಿ ಜೀವ ನಿತ್ರಾಣವೇ ಆದೀತು. ಆದರೂ ಗತ್ಯಂತರವಿಲ್ಲ. ಒಂದೊಮ್ಮೆ ಈ ಸವಾರಿ ಸಾಕೆನ್ನಿಸಿ ನೆಲಕ್ಕೆ ಕಾಲೂರಿದರೆ ಆ ಕ್ಷಣವೇ ಹುಲಿಯ ಬಾಯಿಗೆ ತುತ್ತಾಗಬೇಕು. ಇಂತಹ ಭಯಾನಕ ವಾಸ್ತವವನ್ನು, ಬಹುರಾಷ್ಟ್ರೀಯ ಕಂಪನಿಯ ಉದ್ಯೋಗಿಯೊಬ್ಬನ ಅನುಭವವೆಂಬ ಕಥಾಹಂದರದಲ್ಲಿಡಲಾಗಿದೆ. ಈ ಕಥೆಯು ಸ್ವ ನಿರೂಪಣಾ ತಂತ್ರವನ್ನು ಅಳವಡಿಸಿಕೊಂಡಿದೆ. ಕಥೆಯಲ್ಲಿ ನಿರೂಪಕ ಉಚೆ ಮತ್ತು ಜೆಫ್ ಪ್ರಧಾನ ಪಾತ್ರಗಳು. ಇವರೆಲ್ಲರೂ ಬಹುಪ್ರಸಿದ್ಧ ಬಹುರಾಷ್ಟ್ರೀಯ ಕಂಪನಿಯೊಂದರ ಉದ್ಯೋಗಿಗಳು. ಈ ಕಂಪನಿಯು ಜಗತ್ತಿನ ಬಹುರಾಷ್ಟ್ರಗಳಲ್ಲಿ ತನ್ನ ಬೇರುಗಳನ್ನು ಇಳಿಸಿಕೊಂಡಿದೆ. ಉಚೆ ಆಫ್ರಿಕಾದ ಸಣ್ಣದೇಶವೊಂದರ ಪ್ರತಿನಿಧಿ. ಈ ಕಂಪನಿಯು ಬೇರೆ ಬೇರೆ ಎಂಟು ದೇಶಗಳ ಆಯ್ದ ೧೨ ಜನರಿಗೆ ಮುಂಬೈಯ ಪ್ರಸಿದ್ಧ ಹೊಟೇಲಿನಲ್ಲಿ ಹತ್ತು ದಿನಗಳ ತರಬೇತಿ ಕಾರ್ಯಾಗಾರವನ್ನು ಏರ್ಪಡಿಸಿದೆ. ಈ ಕಾರ್ಯಾಗಾರವು ಸಮುದ್ರದ ಎದುರಿನ ಹವಾನಿಯಂತ್ರಿತ ಕಟ್ಟಡದಲ್ಲಿ ನಡೆಯುತ್ತಿದೆ. ದಪ್ಪ ಕಾಜಿನ ಕಿಡಕಿಯ ಆಚೆ ಭೋರ್ಗರೆಯುತ್ತಿರುವ ಸಮುದ್ರವು ಒಂದು ಮೂಕ ಚಿತ್ರದ ಥರ ಕಾಣುತ್ತಿದೆ. ಈ ಕಟ್ಟಡ

ಮತ್ತು ದಪ್ಪ ಗಾಜಿನ ಕಿಡಕಿಗಳೇ ನಿಜಬದುಕಿನ ಸಂಪರ್ಕದಿಂದ–ಸ್ಪರ್ಶದಿಂದ ಇವರು ಸಾಧಿಸಿಕೊಳ್ಳಬೇಕಾಗಿರುವ ದೂರವನ್ನು ಸಂಕೇತಿಸುತ್ತದೆ. ಮಾಮೂಲು ಎನ್ನಿಸುವ ಕಂಪನಿ ಟ್ರೇನಿಂಗಿನ ಕೊರೆತದಲ್ಲಿ ಹೆಚ್ಚು ಲವಲವಿಕೆಯಿಂದ, ತನ್ನ ಹಾಡು ಸಂಗೀತದಿಂದ ಜೀವಂತಿಕೆಯನ್ನು ತುಂಬಿದವನು ಉಚೆ. ರಾತ್ರಿಯೆಂದರೆ ಅವನು ಕ್ಯಾಸೆಟ್ ಪ್ಲೇಯರ್‌ನಲ್ಲಿ ತನ್ನ ಬ್ಲ್ಯಾಕ್ ಮ್ಯೂಜಿಕ್ ಹಾಕಿ ಕುಣೀತಿದ್ದ. ಅಭಿವೃದ್ಧಿ ಪಥದಲ್ಲಿ ದಾಪುಗಾಲಿಟ್ಟು ದೊಡ್ಡ ಸಾಧನೆ ಮಾಡಿದವರು ಎಂದುಕೊಂಡ ದೇಶದ ಪ್ರತಿನಿಧಿಗಳಿಗೆ ಇಂತಹ ಚೈತನ್ಯ, ಲವಲವಿಕೆಗಳು ಜಡಗಟ್ಟಿಹೋಗಿದೆ ಎಂಬ ಸೂಚನೆಯೇ, ಬಹುರಾಷ್ಟ್ರೀಯ ಕಂಪನಿಗಳ ಹಿತಾಸಕ್ತವಾದ ಅಭಿವೃದ್ಧಿ ಮೀಮಾಂಸೆಯು ಮಾನವ ವಿಕಾಸದ ಸಹಜತೆಯನ್ನು ಬಂಧಿಸುತ್ತಿದೆ ಎಂಬ ಸೂಚಿತವಿದೆ.

ಈ ಕಥೆಯು ತನ್ನ ಪ್ರಧಾನ ಕೇಂದ್ರವಾಗಿಟ್ಟುಕೊಂಡ ಸಂಗತಿಯು ನಡೆಯುವುದು ೧೦ ದಿನಗಳ ತರಬೇತಿಯ ೭ನೇ ದಿನದ ರಾತ್ರಿಯಲ್ಲಿ ನಡೆಯಲಿರುವ ಮ್ಯಾನೇಜ್‌ಮೆಂಟ್ ಗೇಮ್‌ನಲ್ಲಿ. ತರಬೇತುದಾರರನ್ನು ಮೂರ್‍ನಾಲ್ಕು ಗುಂಪುಗಳಲ್ಲಿ ವಿಂಗಡಿಸಿದ್ದರು. ಈ ಮ್ಯಾನೇಜ್‌ಮೆಂಟ್ ಗೇಮ್‌ನ್ನು ಆಡಿಸುತ್ತಲೇ ಜಗತ್ತಿನಲ್ಲಿ ಪ್ರಸಿದ್ಧಿಯನ್ನು ಪಡೆದುಕೊಂಡ ಪೀಟರ್ ಕೂಡ ಆಗಮಿಸಿದ್ದನು. ಆಟದ ನಿರ್ವಹಣೆಯು ಅವನದೇ ಆಗಿತ್ತು. ಎಲ್ಲ ಆಟಗಾರರಿಗೂ ಆಟದ ನಿಯಮಗಳನ್ನು ಒಳಗೊಂಡ ಸುಮಾರು ೬೦ ಪುಟಗಳ ರೀಡಿಂಗ್ ಮಟೀರಿಯಲ್‌ಗಳನ್ನು ಒದಗಿಸಲಾಗಿತ್ತು. ಆಟಗಾರರ ಎದುರು ಜಾಗತಿಕ ಭೂಪಟ ಮತ್ತು ಕಾಲ್ಪನಿಕ ಕಂಪನಿಗಳಿದ್ದವು. ಈ ಆಟ ಹಣ ಹೂಡಿಕೆ ಮತ್ತು ಲಾಭ ಗಳಿಕೆಗೆ ಸಂಬಂಧಿಸಿತ್ತು. ಆಟದ ಅವಧಿಯನ್ನು ೩ ವರ್ಷ ಎಂದು ಹೇಳಲಾಗಿತ್ತು. ಒಂದು ಗಂಟೆಯನ್ನು ಒಂದು ತಿಂಗಳು ಎಂದು ತಿಳಿದುಕೊಳ್ಳಬೇಕಾಗಿತ್ತು. ಒಂದು ಗುಂಪಿನಲ್ಲಿ ಕಥೆಯ ನಿರೂಪಕ, ಉಚೆ ಮತ್ತು ಜೇಫ್ ಇರುತ್ತಾರೆ. ಆಟ ನಾಳೆಯೆಂದರೆ ಹಿಂದಿನ ದಿನವೇ ಯಾರಿಗೂ ಹಾಡಿನಲ್ಲಿ ನೃತ್ಯದಲ್ಲಿ ಊಟದಲ್ಲಿ ಮನಸ್ಸಿರಲಿಲ್ಲ. ಎಲ್ಲರ ಗಮನ ಇರುವುದು ನಾಳೆಯ ಆಟದ ಗೆಲುವಿನ ಬಗ್ಗೆ. ಎಷ್ಟೆಲ್ಲ ಪೂರ್ವಸಿದ್ಧತೆಗಳಿದ್ದರೂ ಲೇಖಕರ ಗುಂಪು ಸೋಲಿನ ಕಡೆ ಸರಿಯುತ್ತದೆ. ಈ ಸೋಲಿನಿಂದ ಪಾರಾಗಲು ಇಂಗ್ಲೆಂಡಿನಿಂದ ಬಂದಿದ್ದ ಜೆಫ್, ಆಫ್ರಿಕಾ ದೇಶಗಳಲ್ಲಿ ತಮ್ಮ ಕಂಪನಿಯ ವ್ಯವಹಾರವನ್ನು ವಿಸ್ತರಿಸಿಕೊಳ್ಳಬೇಕು. ಹಾಗಾದರೆ ಗೆಲ್ಲುವ ಸಾಧ್ಯತೆಗಳಿವೆ ಎಂದು ಹೇಳುತ್ತಾನೆ.

ಈ ವಿಚಾರ ಉಚೆಯನ್ನು ಗಾಢವಾಗಿ ಕಲಕಿಬಿಡುತ್ತದೆ. ಒಂದು ತಾಸಿಗೆ ಒಂದು ತಿಂಗಳ ಈ ಬಂಡವಾಳ ಹೂಡಿಕೆ ಮತ್ತು ಲಾಭಗಳಿಕೆಯ ಆಟದಲ್ಲಿ ಪ್ರತಿಯೊಂದು ಗುಂಪೂ

ಕೂಡ ಇನ್ನೊಂದು ಗುಂಪಿಗಿಂತ ಮುನ್ನುಗ್ಗುವುದು ಹೇಗೆ, ಹೆಚ್ಚಿಗೆ ಟೆಂಡರ್‌ಗಳನ್ನು ಪಡೆದು ಗೆದ್ದವರು ಹೇಗೆ ಗೆದ್ದರು, ಅವರ ಗುಪ್ತತಂತ್ರಗಳೇನು ಎಂಬೆಲ್ಲ ಯೋಚನೆಗಳಲ್ಲಿ ಅವಿಶ್ರಾಂತ ಸ್ಪರ್ಧೆ ಏರ್ಪಟ್ಟಿತ್ತು. ಇವರ ಗುಂಪಿನ ಗೆಲುವಿಗೆ ಜೆಫ್ ಸೂಚಿಸಿದ ದಾರಿಯನ್ನು ಸಮ್ಮತಿಸಲು ಉಚೆಗೆ ಸಾಧ್ಯವಾಗುವುದಿಲ್ಲ. ಮಧ್ಯಾಹ್ನ ಊಟದ ಬಿಡುವಿನಲ್ಲಿ ಉಚೆ ಏನನ್ನೋ ಬಲು ಗಂಭೀರವಾಗಿ ಯೋಚಿಸುತ್ತಿದ್ದ. ಕೇಳಿದ್ದಕ್ಕೆ- "ನಾವು ಆಫ್ರಿಕಾದಲ್ಲಿ ಹೊಸ ಕಾರ್ಖಾನೆ ಹಾಕಬಾರದು. ಅಲ್ಲಿಯ ಮಾರುಕಟ್ಟೆಗೆ ಹೋಗಬಾರದು" ಎಂದ. 'ಯಾಕೆ?' ಎಂದೆ. ಜೆಫ್‌ನ ಲೆಕ್ಕಾಚಾರದಲ್ಲಿ ಏನೋ ಊನ ಹುಡುಕಿದ್ದಾನೆ ಎಂದುಕೊಂಡು. 'ಯಾಕೆಂದರೆ ಅದು ಜನರನ್ನು ನಾಶಮಾಡುತ್ತದೆ' ಎಂದ. ನಾನು ಬೆಚ್ಚಿದೆ. ಅವನು ತನ್ನ ದೇಶದ ನಕಾಶೆ ನೋಡಿ ಭಾವುಕನಾಗಿದ್ದಾನೆ ಅನಿಸಿ 'ರಿಲ್ಯಾಕ್ಸ್' ಎಂದೆ, 'ನೀನೂ ಯಾಕೆ ಹೀಗನ್ನುತ್ತೀ? ನೋಡು, ಜೆಫ್‌ಗಿಂತ ನಿನಗೇ ಇದು ಹೆಚ್ಚು ಅರ್ಥವಾಗಬೇಕು. ನೂರಾರು ಜಾತಿ, ಧರ್ಮ, ದೇವರು ಇರುವ ನಿಮಗೂ ನಮಗೂ ಆಳದಲ್ಲಿ ಬಹಳ ಅಂತರವಿಲ್ಲ. ನಮ್ಮಲ್ಲಿ ಪ್ರತಿ ಊರಿಗೂ ಒಂದೊಂದು ಜೀವನ ವಿಧಾನವಿದೆ" ಎಂದ. ಉಚೆಯ ಮಾತನ್ನು, ಒಂದು ಆಟವಾಗಿಯೂ ಬಹುರಾಷ್ಟ್ರೀಯ ಕಂಪನಿ ತನ್ನ ದೇಶದ ನೆಲದಲ್ಲಿ ಕಾಲಿಡಬಾರದು ಎಂಬ ಅವನ ತುಡಿತವನ್ನು ಅರ್ಥೈಸಿಕೊಳ್ಳುವುದು ಲೇಖಕರಿಗೆ ಸಾಧ್ಯವಾಗುವುದಿಲ್ಲ. ಉಚೆ ತನ್ನ ದೇಶದಲ್ಲಿ ಬಂಡವಾಳವಾದ ಮತ್ತು ರಾಜಕಾರಣಗಳು ಒಟ್ಟಾಗಿ ದೇಶದ ಜನರ ಸ್ವಾತಂತ್ರ್ಯವನ್ನೇ ಕಸಿದು ಪರಾಧೀನಗೊಳಿಸಿರುವುದನ್ನು ಉನ್ಮತ್ತ ವಿಷಾದಿಂದ ವಿವರಿಸತೊಡಗುತ್ತಾನೆ. ನನ್ನ ದೇಶದಲ್ಲಿ ಇದ್ದ ದೇಶೀ ಉದ್ಯಮಗಳು ಹೊಸ ತಂತ್ರಜ್ಞಾನವಿಲ್ಲದೆ, ಸರ್ಕಾರದ ಬೆಂಬಲವಿಲ್ಲದೆ ಸೊರಗಿ ಸಾಯುತ್ತಲಿವೆ. ಹಾಕುವ ಶರ್ಟನ್ನು ಕೂಡ ಬೇರೆ ಯಾರೋ ಮಾಡಿ ನಮಗೆ ಕೊಡಬೇಕು ಎನ್ನುತ್ತಾನೆ. "ನಾವು ಅವರಿಗಾಗಿ ದುಡಿಯುವುದು, ಅವರು ಮಾಡಿದ್ದನ್ನು ಕೊಳ್ಳುವುದು. ನಾವೆಲ್ಲ ಕಡಿಮೆ ಬೆಲೆಗೆ ಸಿಗುವ ಕೂಲಿಗಳಾಗುತ್ತಿದ್ದೇವೆ"- ಎಂಬ ಉಚೆಯ ಮಾತುಗಳಲ್ಲಿ ನಿರೂಪಕನಿಗೆ, ಮನುಷ್ಯ ಬದುಕು ಮರಗಟ್ಟಿಹೋದಂತಹ ಅಸಹಾಯಕ ದುರ್ನಾತದ ಕಮಟು ಸ್ಪರ್ಶ ಒದಗಿತ್ತು. ಉಚೆಯ ಆಫ್ರಿಕಾದ ಕಣ್ಣಲ್ಲಿ, ತನ್ನ ಭಾರತದಲ್ಲಿ ಬಿಕರಿಯಾಗುತ್ತಿರುವ ಬಡವರ ಶ್ರಮದ ಕಥನಗಳು ಕಾಣತೊಡಗಿದ್ದವು.

ಮತ್ತೆ ಆಟ ಶುರುವಾಗಿತ್ತು. ಯಾವಾಗಲೂ ಗೆಲ್ಲಬೇಕು ಎನ್ನುವ ಹುಕಿ ಇರುವ ಜೆಫ್‌ನಿಗೆ, ಉಚೆ ತಲೆಕೆಟ್ಟವನ ಹಾಗೆ ಕಾಣತೊಡಗಿದ್ದ. ಜೆಫ್ ಆತಂಕಿತನಾಗಿದ್ದ. ಹೀಗೆ ಆಡಿದರೆ, ನಾವೆಲ್ಲ ಕೊನೆಯ ಸ್ಥಾನದಲ್ಲೇ ಕೊನೆಯವರೆಗೂ ಇರಬೇಕಾದೀತು- ಎಂದು ಎಚ್ಚರಿಸಿ ಹೋಗಿದ್ದ. ಆದರೂ ಆ ರಾತ್ರಿ ಲೇಖಕರು ಮತ್ತು ಉಚೆ ಮಾತನಾಡುತ್ತ

ಕುಳಿತಿದ್ದರು. ಸಾಕೆಂಬಷ್ಟು, ಇನ್ನು ಹೇಳದಿದ್ದರೆ ತಾಳಲಾರೆವು ಎಂಬಷ್ಟು, ಹಾಡಿಲ್ಲ, ಕುಣಿತವಿಲ್ಲ, ಓದಿಲ್ಲ, ವಾಕಿಂಗಿಲ್ಲ.... ಈ ಆಟದ ಸ್ಪರ್ಧೆ ಯಮಪಾಶದಂತೆ ಸುತ್ತಿಕೊಂಡಂತೆ ಅನ್ನಿಸಿತ್ತು.

ಮಾರನೆಯ ಬೆಳಗು, ಆಟಕ್ಕಾಗಿ ಜೆಫ್‌ನ ಸೂಚನೆ ಪಾಲಿಸುವಾ ಎಂಬ ನಿರೂಪಕರ ಮಾತಿಗೆ ಉಚೆ ವ್ಯಗ್ರನಾಗಿದ್ದ. 'ಆಟವೆಂದರೆ ಎಲ್ಲದಕ್ಕೂ ಒಪ್ಪುತ್ತೀಯಾ? ನಿನ್ನ ಬಂಧುಗಳ ಹೆಸರಿನ ಬೊಂಬೆಗಳನ್ನು ಮಾಡಿ ಕೊಲ್ಲುವ ಆಟ ಆಡಿ ಬೊಂಬೆ ಸರಿಸಿಡಲು ನೀನು ಒಪ್ಪುತ್ತೀಯಾ?" ಎಂದು ಕೇಳಿದ್ದ. 'ನಾವೀಗ ನಷ್ಟದಲ್ಲೇನೂ ಇಲ್ಲ. ಇಷ್ಟೇ ಸಾಕು. ಇದನ್ನೇ ಮುಂದುವರಿಸುವಾ' ಎಂದು ಹಠಮಾಡಿದ್ದ. ಆದರೆ, ಜೆಫ್ ಒಂದು ಹದಿನೈದು ನಿಮಿಷ ಉಚೆ ಒಬ್ಬನನ್ನೇ ಏಕಾಂತಕ್ಕೆ ಕರೆದುಕೊಂಡು ಹೋಗಿ ಬಂದು, 'ಉಚೆ ಸಹಕರಿಸುತ್ತಾನೆ' ಎಂದು ಘೋಷಿಸಿದ್ದ. ಉಚೆ ಯಾಕೆ ಒಪ್ಪಿದ? ಅವನನ್ನು ಒಪ್ಪಿಸಿದ ಬಲವಂತ ಯಾವುದು? ಹೊಡೆದಾಟವೇ, ಭಯವೇ, ಬಯ್ಗುಳವೇ, ನಡೆದದ್ದಾದರೂ ಏನು? ಉಚೆಯ ಅಭಿಪ್ರಾಯದ ತೀವ್ರತೆ ನನ್ನ ಅರಿವಿಗೆ ಬರುತ್ತಿದ್ದರೂ, ನಾನೂ ಅಂತಹದೇ ಹಿನ್ನೆಲೆಯಿಂದ ಬಂದಿದ್ದರೂ, ಜೆಫ್‌ನಂಥವರ ಅಭಿಪ್ರಾಯವನ್ನು ಒಪ್ಪುವುದನ್ನು ನಾನು ಯಾವಾಗಿನಿಂದ ಕಲಿತೆ? ಯಾಕೆ ಕಲಿತೆ? ಎಂಬ ಅಗಣಿತ ಪ್ರಶ್ನೆಗಳು ನಿರೂಪಕರನ್ನು ಕಾಡತೊಡಗುತ್ತದೆ. ಉಚೆ ಯಾಕೆ ಎಲ್ಲದಕ್ಕೂ ಬರಿದೆ ತಲೆಯಾಡಿಸಿ ಒಪ್ಪಿಗೆ ಸೂಚಿಸುವ ಮಟ್ಟಕ್ಕೆ ಬಂದು ಬಿಟ್ಟ– ಎಂಬ ಪ್ರಶ್ನೆ ಪ್ರಶ್ನೆಯಾಗಿಯೇ ಉಳಿಯುತ್ತದೆ.

೧೯೯೨ರಲ್ಲಿ ಬರೆದ ಈ ಕಥೆ– ಬಹುರಾಷ್ಟ್ರೀಯ ಕಂಪನಿಗಳ ಸ್ಪರ್ಧಾತ್ಮಕ ಹುನ್ನಾರವನ್ನು; ಬಹುಸಾಂಸ್ಕೃತಿಕ ಪರಿಸರದಿಂದ ಆ ಕ್ಷೇತ್ರವನ್ನು ಪ್ರವೇಶಿಸುವ ಯುವ ಪ್ರಜ್ಞಾವಂತ ಮನಸ್ಸುಗಳು ತಮ್ಮ ದೇಶ, ಭಾಷೆ, ಸಂಸ್ಕೃತಿ ಮತ್ತು ಮೌಲ್ಯಗಳ ಮೇಲೆ ನಡೆಯುವ ದಬಾವಣೆಯನ್ನು ಅರ್ಥೈಸಿಕೊಂಡೂ ಅಸಹಾಯಕರಾಗಿ ಇರಬೇಕಾಗುವ ದುರಂತವನ್ನು ವಿಡಂಬಿಸುತ್ತದೆ. ಉಚೆಯ ಪ್ರಬಲ ವಿರೋಧ ಕೂಡ, ಕ್ಷಣಾರ್ಧದಲ್ಲಿ ಮಣ್ಣುಪಾಲಾಗುತ್ತದೆ ಎನ್ನುವುದಾದರೆ; ಜಾಗತೀಕರಣದ ಬಂಡವಾಳವಾದದ 'ಒಪ್ಪಿಗೆಯನ್ನು ಉತ್ಪಾದಿಸುವ ತಂತ್ರ' ಅದೆಷ್ಟು ಭೀಕರವಾಗಿರುತ್ತದೆ ಎನ್ನುವುದನ್ನು ಈ ಕಥೆ ಧ್ವನಿಸುತ್ತದೆ. ಜಾಗತೀಕರಣದ ಮುಕ್ತ ಮಾರುಕಟ್ಟೆ ನೀತಿಯು 'ಉಚೆ' ಯಂತಹ ಯೌವನ ಭರಿತ, ಉತ್ಸಾಹ ಭರಿತ, ಜೀವಚೈತನ್ಯದ ಚಿಲುಮೆಯನ್ನು ಜೀವಂತ ಹೆಣವಾಗಿಸುತ್ತದೆ. ಮತ್ತು ಯಾತನೆಯ ಪದರುಗಳನ್ನು ಅರಗಿಸಿಕೊಂಡು ಜಡವಾಗಲು ಸೂಚಿಸುತ್ತದೆ. ಇಡೀ ಕಥೆಯನ್ನು ಎಲ್ಲೂ ಎಳೆ ಕಡಿಯದಂತೆ, ಒಂದು ಉಸಿರಿಗೆ ಓದುವ ಬಗೆಯಲ್ಲಿ ಕಥೆಯ

ನಿರೂಪಣೆಯಿದೆ. ಈ ಕಥೆಯು ಜಾಗತೀಕರಣವು, ತಂದೊಡ್ಡಿದ ಕೊಳ್ಳುವ ಮಾರುವ ವಿಂಗಡನೆಯ ಭಯಾನಕ ಆಳದ ಗಾಯವನ್ನು ತೋರುತ್ತದೆ. ಜೆಫ್ ಮತ್ತು ಉಚೆ ಈ ಎರಡು ವಿರುದ್ಧ ಧ್ರುವಗಳ ಪ್ರತೀಕವಾಗಿದ್ದಾರೆ. ಜಾಗತೀಕರಣದ ಭಯಾನಕ ವಾಸ್ತವ ಎಂದರೆ, ಜಾಗತೀಕರಣದ ಎಲ್ಲ ಅನ್ಯಾಯಗಳ ಅರಿವಿದ್ದೂ ಅದನ್ನು ಮೀರಲಾಗದಿರುವುದು.

"ಈ ಖಂಡಾಂತರದಲ್ಲಿ ಎಲ್ಲವನ್ನೂ ತವರಿನದರೊಟ್ಟಿಗೆ ಅಳೆಯಬೇಕು. ಕಾಲವನ್ನು ಹಣವನ್ನು ರುಚಿಯನ್ನು ಎಚ್ಚರಗಳನ್ನು..... ಮತ್ತಿನ್ನಿತರೆ ಬಳಕೆಗಳನ್ನೂ." ಎನ್ನುವ ಕಥಾನಾಯಕ ಉಬಿಯ ಕಣ್ಣೋಟದಿಂದ ಜಾಗತೀಕರಣದ ನವವಸಾಹತುಶಾಹಿ ಪರಿಕಲ್ಪನೆಯನ್ನು ಚಿಂತನೆಗೆ ಹಚ್ಚುವ ಕಥೆ ಹಕೂನ ಮಟಾಟ. ಈ ಕಥೆ ನಡೆವ ನೆಲ ದಕ್ಷಿಣ ಆಫ್ರಿಕಾ. ಭಾರತದ ಸ್ವಾತಂತ್ರ್ಯ ಹೋರಾಟದ ಮಹಾತ್ಮ ಗಾಂಧಿಯನ್ನು ರೂಪುಗೊಳಿಸಿದ ನೆಲವದು. ಇಂದು ಜಾಗತೀಕರಣದ ನವವಸಾಹತುಶಾಹಿಯ ಆಕ್ರಮಣವನ್ನು ಅರ್ಥೈಸಿಕೊಳ್ಳಲು ಕನ್ನಡ ಕಥೆಗಾರರಿಗೆ ಮತ್ತೆ ಮತ್ತೆ ದಕ್ಷಿಣ ಆಫ್ರಿಕಾ ನೆಲೆಯಾಗುತ್ತಿರುವುದು ಅಚ್ಚರಿಯಾಗಿದೆ. ಈ ಕಥೆಯಲ್ಲಿ ಉಬಿ, ಬಸು, ವಚನ್, ಭಾನು, ಬೂಮ ಮೊದಲಾದ ವ್ಯಕ್ತಿಗಳಿದ್ದಾರೆ. ಉಚ್ಚಾಯ ಪಟ್ಟಾಭಿ ಎಂಬ ಉಚ್ಚರಿಸಲು ಕಷ್ಟವಾದ ಹೆಸರೀಗ ಉಬಿ ಎಂದು ಅಂಕಿತ ನಾಮವಾಗಿದೆ. ಬಸು ತನ್ನ ಕಂಪನಿಯ ಬ್ಯುಸಿನೆಸ್‌ನ್ನು ದಕ್ಷಿಣ ಆಫ್ರಿಕಾದ ಈ ನೆಲದಲ್ಲಿ ವಿಸ್ತರಿಸಿಕೊಳ್ಳಲು ಬಯಸುತ್ತಾನೆ. ಅದರ ಸರಿಯಾದ ನೀಲನಕ್ಷೆಯನ್ನು ರೂಪಿಸಲು, ಆ ವ್ಯವಹಾರವನ್ನು ಯಶಸ್ಸುಗೊಳಿಸಲು ಅಗತ್ಯ ಪರಿಣತಿ, ತಂತ್ರ ಜ್ಞಾನದ ತಿಳುವಳಿಕೆ ಹೊಂದಿರುವ ಗೆಳೆಯರನ್ನು ಒಟ್ಟಿಗೆ ಕರೆದು ತಂದಿದ್ದಾನೆ. ಎಲ್ಲರೊಟ್ಟಿಗಿದ್ದೂ ಕಂಪನಿಯ ಪ್ರಾಜೆಕ್ಟಿನ ಭಾಗವಾಗಿಯೇ ಬಂದಿದ್ದರೂ, ಅವರುಗಳಿಗಿಂತ ಭಿನ್ನವಾಗಿ ಲೋಕವನ್ನು ಕಾಣಬಲ್ಲ ಮನಸ್ಸು ಉಬಿಯದು. ಮೌಂಟಮೇರು, ಕಿಲಿಮಂಜರೋ, ಕಾಂಗೋ, ಗೊರಾಂಗೋರೋ, ಸೆರಾಂಗೆಟಿ ಮೊದಲಾದ ಪ್ರಾಂತಗಳನ್ನು ಹಾದು ಹೋಗುವಾಗ ಅಲ್ಲಿಯ ಮಸಾಯಿ, ಗೋಚ, ಚಾಗ, ಗೂ ಮುಂತಾದ ಬುಡಕಟ್ಟು ಜನಾಂಗಗಳ ಬದುಕಿನ ಕಿಂಚಿತ್ ದರ್ಶನವಾಗುತ್ತದೆ. ಕೀನ್ಯಾ ಮತ್ತು ಟಾಂಜಾನಿಯಾ ಮಧ್ಯದಲ್ಲಿ ಗಾಡಿ ನಿಂತಾಗ ಕೆಲವು ಮಸಾಯಿ ಹೆಂಗಸರು ಏನೇನೋ ಮಾರುವ ಸಾಹಸದಲ್ಲಿ ದಾರಿಗೆ ಅಡ್ಡವಾಗುತ್ತಾರೆ. ಒಬ್ಬ ಮಸಾಯಿ ಮುದುಕಿ, ಕಾರಿಳಿದು ಸಿಗರೇಟು ಸೇದುತ್ತಿದ್ದ ಉಬಿಯ ಕೈಗೆ ತಾಮ್ರದ ಕಡಗ ತೊಡಿಸಿ ಹಣ ಕೇಳುತ್ತಾಳೆ. ಒಂದು ಡಾಲರ್ ಕೊಡಲು ಮನಸ್ಸು ಬಾರದೆ ಮರಳಿ ಹಣವನ್ನು ಜೇಬಿಗಿಳಿಸಿಕೊಂಡು ಕಡಗ ಬಿಚ್ಚಿ ಕೊಡುತ್ತಾನೆ. ಅವಳ ಕಣ್ಣುಗಳಾಳದ ನಿರಾಸೆ ತಾಳದೆ ಕಾರು ಹೊರಡುವಾಗ ೧೦ರೂ. ನೋಟನ್ನು ಅವಳೆಡೆ ಬೀಸುತ್ತಾನೆ. ಅವಳು ಗಾಳಿಯೊಂದಿಗೆ ಸೆಣಸಿ

ಆ ೧೧೦ರೂ. ಕಸಿದುಕೊಂಡು ನಗೆ ಬೀರುತ್ತಾಳೆ. ವಚನ ಆ ದೃಶ್ಯ ಅಳಿಸಿಹೋಗದಂತೆ ತನ್ನ ಕ್ಯಾಮರಾದಲ್ಲಿ ಅದನ್ನು ಸೆರೆಹಿಡಿದಿದ್ದಾನೆ.

ಅಲ್ಲಿಯ ಅರುಷ ಟೌನಿನಲ್ಲಿ ಮಿರ್ಜಿಯಾನ ಅಹಮದ್ ಇದ್ದಾರೆ. ಅವರು ಸುಮಾರು ನಾಲ್ಕು ತಲೆಮಾರುಗಳ ಹಿಂದೆ ಗುಜರಾತ್‌ನಿಂದ ವಲಸೆ ಬಂದ ಮನೆತನದವರು. ಸಾಕಷ್ಟು ಶ್ರೀಮಂತರು. ಅವರನ್ನು ಅರುಷದಲ್ಲಿ 'ಮೀರ್' ಅಂತ ಕರೆಯೋದು. ಅವರೊಂದಿಗೆ ಸೇರಿ ಅಲ್ಲಿಯ ವಿಸ್ತಾರವಾದ ವರ್ಜಿನ್‌ಲ್ಯಾಂಡ್‌ನಲ್ಲಿ ಬಹುದೊಡ್ಡ ಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸಬೇಕು ಎನ್ನುವುದು ಬಸುವಿನ ಕನಸು. ಬೆಂಗಳೂರು ಮತ್ತು ದೇಶದ ಬೇರೆ ಬೇರೆ ಭಾಗಗಳಲ್ಲಿ ಅವನ 'ಅಕ್ಷರ ನಾಲೆಡ್ಜ ಫೌಂಡೇಶನ್' 'AKF' ಅತ್ಯಂತ ಯಶಸ್ವಿಯಾಗಿ ಕಾರ್ಯನಿರ್ವಹಿಸುತ್ತಿದೆ. ಈಗ ಅದನ್ನು ದೇಶದ ಹೊರಗೂ ವಿಸ್ತರಿಸಬೇಕೆಂಬ ತೀವ್ರ ಅಭಿಲಾಶೆ ಅವನದು. ಬಸು ವಿಚಿತ್ರ ಮನುಷ್ಯ, ಹೆಣ್ಣು, ಮಣ್ಣು, ಹೊನ್ನುಗಳಲ್ಲಿ ಅವನಿಗೆ ಮಣ್ಣಿನ ಹುಚ್ಚು. "ವಿಶೇಷವಾಗಿ ನೀರಿನ ಸೆಲೆಯಿರುವ ಜಮೀನೆಂದರೆ ಎಲ್ಲಿಲ್ಲದ ಆಸಕ್ತಿ. ಕೆರೆ, ತೊರೆಗಳ ಮಗ್ಗುಲಿನ ನೆಲ ಕಂಡರಂತೂ ಅದನ್ನು ಹೊಂದುವ ತನಕ ಉನ್ಮತ್ತ ಭ್ರಮಿಸಿಬಿಡುತ್ತಾನೆ." ಆಫ್ರಿಕಾ ದೇಶ ಸ್ವತಂತ್ರವಾದ ಮೇಲೆ ಎಲ್ಲ ಭೂಮಿಯನ್ನೂ ರಾಷ್ಟ್ರೀಕರಿಸಿಬಿಟ್ಟರಂತೆ. ಅದಕ್ಕೆ ಅಲ್ಲಿ ಅಭಿವೃದ್ಧಿ ಕಡಿಮೆ ಎಂದ ಬಸು. "ಒಂದೊಮ್ಮೆ ನಿಮಗೆ ಬೆಂಗಳೂರಿನಲ್ಲಿ ಈ ಥರದ ನೆಲ ಇದ್ದಿದ್ದರೆ ಕೊಬ್ಬರಿ ಮಿಠಾಯಿ ಹಾಗೆ ಕತ್ತರಿಸಿ ಲೇಔಟ್ ಅಂತ ಹಂಚಿಬಿಡ್ತಿದ್ದಿರಿ ಅಲ್ಲವೇ?" ಎಂದು ಕೇಳುತ್ತಾನೆ ಭಾನು.

ಇಡೀ ಕಥೆಯಲ್ಲಿ ಪ್ರಧಾನ ಪಾತ್ರದಂತೆ ಸಂವಹನಿಸುವುದು ಆಫ್ರಿಕಾದ ವರ್ಜಿನ್ ಲ್ಯಾಂಡ್. ನೂರಾರು ಎಕರೆ ವಿಸ್ತೀರ್ಣವಾಗಿ ಹರಡಿದ ಹಸಿರು ಬಯಲು. ಅದರ ಮೇಲಾಡುವ ನೀಲಿ ಮೋಡಗಳು. ಮೋಡಗಳ ತೆರೆ ಸರಿದಂತೆ ಎತ್ತರೆತ್ತರಕ್ಕೆ ಉಬ್ಬಿ ನಿಂತಿರುವ ಮೇರು ಪರ್ವತ ಶ್ರೇಣಿಗಳು. ದಾಟಿ ಆ ಕಡೆಗಿಳಿದರೆ, ಬಲು ಇಕ್ಕಟ್ಟಾದ ಕಾಲಿಡಲೂ ಅನುವಿಲ್ಲದಷ್ಟು ನಿಬಿಡವಾಗಿ ಹೆಣೆದ ಪರ್ವತಾವಳಿಗಳು. ಇಂತಹ ಆಫ್ರಿಕಾದ ನೆಲ. ನೆಲವನ್ನು ತನ್ನ ಒಡೆತನಕ್ಕೆ ದಕ್ಕಿಸಿಕೊಳ್ಳಬೇಕು ಎಂಬ ಮನುಷ್ಯ ವಾಂಛೆಗೆ, ಉದ್ದಿಮೆ, ಶಿಕ್ಷಣ, ವ್ಯಾಪಾರ, ಸೇವೆ ಇಂತಹ ಹಲವು ಹೆಸರುಗಳು. ಜಾಗತೀಕರಣ ಕಾಲದಲ್ಲಿ ಶಿಕ್ಷಣವೂ ವ್ಯಾಪಾರವಾಗಿದೆ. ಬಂಡವಾಳಶಾಹಿಗಳಿಗೆ ಅಗತ್ಯವಾದ ಗುಲಾಮರನ್ನು ಉತ್ಪನ್ನ ಮಾಡುವ ಶಿಕ್ಷಣವು ಹೆಚ್ಚು ಪ್ರಸಿದ್ಧಿಯನ್ನು ಪಡೆದಿದೆ. ಜಗತ್ತಿನಲ್ಲಿಯ ಶ್ರೀಮಂತರು ಎಲ್ಲಿ ಬೇಕಾದರೂ ಹೋಗಿ, ತಮ್ಮ ವ್ಯವಹಾರವನ್ನು ಪ್ರಾರಂಭಿಸುವುದಕ್ಕೆ; ಉದ್ದಿಮೆಯನ್ನು ವಿಸ್ತರಿಸುವುದಕ್ಕೆ ಜಾಗತೀಕರಣದ ಮುಕ್ತ ಮಾರುಕಟ್ಟೆ ನೀತಿಯು ಅವಕಾಶ ಮಾಡಿಕೊಡುತ್ತದೆ. ಇದು

ಬಸುವಿನಂತಹ ಶ್ರೀಮಂತ ಉದ್ದಿಮೆದಾರರಿಗೆ ತಮ್ಮ ವಹಿವಾಟಿನ ವಿಸ್ತರಣೆಯ ಹಾದಿಯಾಗಿದೆ.

ಆದರೆ ಹೀಗೆ, ಹಣ ಹೂಡಿಕೆಗಾಗಿ, ಷೇರುದಾರರಾಗಿ, ಕಂಪನಿಯ ಭಾಗೀದಾರರಾಗಿ ಪ್ರವೇಶಿಸುವ ಯುವಕರಲ್ಲಿ ಸಂವೇದನಾಶೀಲತೆಯಿದ್ದರೆ –ಆ ನೆಲದ ನಿದರ್ಶನದಲ್ಲಿ ತನ್ನ ನಾಡಿನ ಗತಿಸ್ಥಿತಿಯನ್ನು ಕಾಣುವುದು ಅನಿವಾರ್ಯವಾಗುತ್ತದೆ.

'ಇದು ನಮ್ಮಲ್ಲಿನ ಎಪ್ಪತ್ತರ ನೆಲದ ಹಾಗೆ ಕಾಣಿಸುತ್ತಲ್ಲವೆ? ಎಲ್ಲೆಲ್ಲೂ ಹಳ್ಳಿತನ.....' ಎನ್ನುವ ವಚನನ ಮಾತುಗಳನ್ನು ಈ ಹಿನ್ನೆಲೆಯಲ್ಲಿ ಅರ್ಥಮಾಡಿಕೊಳ್ಳಬೇಕು. 70ರ ದಶಕದಲ್ಲಿ ಭಾರತ ಅದಾಗಲೇ ಆಧುನಿಕತೆಗೆ ತೆರೆದುಕೊಂಡಿತ್ತು. ಆದರದು ಜಾಗತೀಕರಣದ, ಮಾರುಕಟ್ಟೆಯೇ ಬದುಕಾದ ಕಾಲವಲ್ಲ. ಜಾಗತೀಕರಣಕ್ಕೆ ಗೊತ್ತಿರುವುದೇ ಎರಡು ವಿಷಯಗಳು. ಮಾರುವುದು ಮತ್ತು ಕೊಳ್ಳುವುದು. ಜಾಗತೀಕರಣವು ಆಧುನಿಕತೆಯ ಮುಂದುವರಿಕೆ ಎಂಬ ಭ್ರಮೆಯನ್ನು ಹುಟ್ಟಿಸುತ್ತದೆಯಾದರೂ ಅದರ ಚಹರೆ ಮತ್ತು ಸಿದ್ಧಾಂತ ಬೇರೆ. ಜಾಗತೀಕರಣವು ಕಾಲೂರಿ ದಶಕಗಳು ಕಳೆದ ಮೇಲೆ, ಆಧುನಿಕತೆಯಲ್ಲಿ ಪರಂಪರೆಯ ಸತ್ವವನ್ನು ಉಳಿಸಿಕೊಳ್ಳುವ ಲಕ್ಷಣಗಳಿತ್ತು ಎಂಬುದು ತಿಳಿಯತೊಡಗಿದೆ. ಜಾಗತೀಕರಣವು ತನ್ನ ವ್ಯವಹಾರವನ್ನು ನೇರವಾಗಿ ಮಂಡಿಸುವುದಿಲ್ಲ. ಅದು ಲಾಭ–ನಷ್ಟದ ಮಾತನಾಡುವುದಿಲ್ಲ. ಅದರದ್ದೇನಿದ್ದರೂ ಪರೋಪಕಾರದ ಭಾಷೆ. ಅಭಿವೃದ್ಧಿಯ ನುಡಿ. ದೇಶಪ್ರೇಮ ಹಾಗೂ ಅಭಿವೃದ್ಧಿಯ ಮಂತ್ರಗಳು I want to give the best of me and the best to this country. And I also want you to give your best- ಎನ್ನುವ ಬಸು, ಉಬಿಯ ಆರ್ಕಿಟೆಕ್ಚಿಕ್ ಜ್ಞಾನವನ್ನು, ವಚನನ ಫಿಲ್ಮ ಪ್ರೊಡಕ್ಷನ್ ಜ್ಞಾನವನ್ನು ಸರಿಯಾಗಿ ತನಗಾಗಿ ಬಳಸಿಕೊಳ್ಳಲು ನೋಡುತ್ತಾನೆ. ಸುಮಾರು 200 ಎಕರೆಗೂ ಹೆಚ್ಚು ವಿಸ್ತಾರವಾದ ಕ್ಯಾಂಪಸ್ಸಿನ ಕಲ್ಪನೆಯಿರುವ ಬಸು ಅಲ್ಲಿ ಬರೀ ಶಿಕ್ಷಣ ಸಂಸ್ಥೆಯನ್ನು ಕಟ್ಟುವುದಿಲ್ಲ. ಅಲ್ಲಿ ಸಿಮೆಂಟ್ ಪ್ಲ್ಯಾಂಟ್, ವಿಂಡ್‌ಮಿಲ್, ಎಲೆಕ್ಟ್ರಿಕಲ್ ಪ್ರಾಜೆಕ್ಟ ಹೀಗೆ ಸನ್ಯಾಸಿ ಸಂಸಾರದ ಲೆಕ್ಕ ಹಾಕುತ್ತಾನೆ ಎನ್ನುವುದು ಉಬಿಗೆ ಗೊತ್ತು. "ಆಫ್ರಿಕನ್ ನೆಲ ಪ್ರಾಪಂಚಿಕ ಒತ್ತಡವನ್ನು ಹೆಚ್ಚು ಕಾಲ ತಡೆದುಕೊಳ್ಳಲಿಕ್ಕಾಗೋದಿಲ್ಲ. ಹಾಗೇನಾದರೂ ಆಯಿತೋ ಇಲ್ಲಿನ ಬಯಲು, ಕಾಡು ಬೆಟ್ಟ ನಿರ್ನಾಮವಾದಂತೆಯೇ. ಇದಕ್ಕೆ ನೀನು ಪೀಠಿಕೆ ಬರೆಯುತ್ತಿದ್ದಿ ಅಥವಾ ನಮ್ಮಿಂದ ಬರೆಸುತ್ತಿದ್ದಿ. ಎಜ್ಯುಕೇಷನ್ನಿನ ನೆವದಲ್ಲಿ ಎಷ್ಟು ಅನ್ಯಾಯ ಈ ನೆಲದ ಮೇಲೆ ನಡೆದಿದೆ ಗೊತ್ತೇ?" ಎನ್ನುತ್ತಾನೆ ಉಬಿ. ಮಾತನಾಡುತ್ತ ಕಣ್ಣೀರಾಗುತ್ತಾನೆ.

ಈ ಕಥೆಯ ಯಾವುದನ್ನು ಆಫ್ರಿಕಾದ ನೆಲ ಎಂದು ಮಾತನಾಡುತ್ತಿದೆಯೋ ಅದು ಆಫ್ರಿಕಾ ಮಾತ್ರವೇ ಅಲ್ಲ. ಕೆಲವೇ ಕಾಲದ ಹಿಂದಿನ ಭಾರತವೂ ಇದಕ್ಕಿಂತ ಬೇರೆಯಿರಲಿಲ್ಲ. ಆಫ್ರಿಕಾದ ಹಸಿರೋ ಹಸಿರಿನ ಬಯಲು, ಶುದ್ಧ ನೀರ ಧಾರೆಗಳು. ಎತ್ತರೆತ್ತರದ ಪರ್ವತಗಳು ಭಾರತವನ್ನೇ ತೋರಿಸುತ್ತಿವೆ. 'ಸುಜಲಾಂ ಸುಫಲಾಂ ಮಲಯಜ ಶೀತಲಾಂ, ಸತ್ಯ ಶ್ಯಾಮಲಾಂ' ಎಂದೆಲ್ಲ ಕರೆಯಿಸಿಕೊಂಡಿದ್ದ ನಾಡು ಈಗ ಏನಾಯಿತು? ಶಿಕ್ಷಣ ಸಂಸ್ಥೆಯ ಹೆಸರಿನಲ್ಲಿ ಏನೆಲ್ಲ ಅನ್ಯಾಯವನ್ನು ಭಾರತ ಕಂಡುಂಡಿದೆಯೋ ಆ ಎಲ್ಲವನ್ನೂ ನೆನಪಿಸುತ್ತದೆ.

ಕಥೆಯ ಮುಂದಿನ ಭಾಗದಲ್ಲಿ, ಇವರುಗಳು ಕೈಗೊಳ್ಳುವ ಪ್ರವಾಸವು ಆಫ್ರಿಕಾದ ಸಮೃದ್ಧ ಚೆಲುವಿಗೆ ಕೈಗನ್ನಡಿಯಾಗುತ್ತದೆ. ಆ ಪ್ರದೇಶವನ್ನು ಪರಿಚಯಿಸಲು ಕರೆದೊಯ್ಯುವ ಡೇವಿಡ್-ಅಲ್ಲಿಯ ಬುಡಕಟ್ಟು ಜನರ ಬಗ್ಗೆ ಹೇಳುತ್ತಾ ಹೋಗುತ್ತಾನೆ. ದುರಾಸೆಯಿಲ್ಲದ, ಬದುಕಿನ ಅಗತ್ಯಗಳೇ ಕಡಿಮೆಯಿರುವ ಗುಡ್ಡಗಾಡಿನ ಮಸಾಯಿ ಬದುಕಿನ ಬಗ್ಗೆ ಹೇಳುತ್ತಾನೆ. "ಈ ದೇಶದ ಸೊಗಡು ಉಳಿದಿರುವುದೇ ಅವರಿಂದ. ಆಳಿದ ಬಿಳಿಯರಿಂದಾಗಲೀ, ಈಗ ಆಳಲಿಕ್ಕಿರುವ ಬಹುರಾಷ್ಟ್ರೀಯರಿಂದಾಗಲೀ ಅಲ್ಲ." ಆ ಪ್ರಯಾಣದಲ್ಲಿಯೇ ಸಿಂಹಿಣಿಯೊಂದು ಝೀಬ್ರಾ ಹಿಂಡಿನ ಮೇಲೆರಗಿ, ಒಂದರ ಕತ್ತಿಗೆ ಬಾಯಿ ಹಾಕಿ ಜಗ್ಗಿಕೊಂಡು ಹೋದ 'ಹಕೂನ ಮಟಾಟ'ದ ದರ್ಶನವೂ ಆಯಿತು. ಅಪಾಯ ಬಂದು ಎರಗಬಹುದೆಂದು ಗೊತ್ತಿದ್ದರೂ ಅದನ್ನು ಗಮನಿಸದಂತೆ ಹೊಟ್ಟೆಯ ಹುಲ್ಲಿಗಾಗಿ ಒಂದು ಭಾಗದಿಂದ ಇನ್ನೊಂದು ಭಾಗಕ್ಕೆ ವಲಸೆ ಹೋಗುವ ಗ್ನೂಗಳ, ಝೀಬ್ರಾಗಳ, ಥಾಮ್‌ಸ್‌ನ್‌ಗಳ ಹಿಂಡು.... -ಈ ಪ್ರಕೃತಿಯೇ ಬದುಕಿನ ಕುರಿತ ಅನನ್ಯ ತಿಳಿವನ್ನು ದಾಟಿಸುತ್ತಿತ್ತು. ಈ ಜೀವಿಗಳಂತೆಯೇ ಆಫ್ರಿಕಾದ ಒಳಾಂತರಂಗದಲ್ಲಿ ಅಲೆಮಾರಿಗಳಾಗಿ ತಿರುಗುವ, ಭೂಮಿಯ ಮೇಲೆ ಹಕ್ಕು ಚಲಾಯಿಸದೆ ಅದರ ಚೆಲುವಿನ ಉನ್ನತಿಗೆ ಕಾರಣರಾದ ಮಸಾಯಿಗಳಂತಹ ಬುಡಕಟ್ಟು ಜನರಿದ್ದಾರೆ. ಇದನ್ನೆಲ್ಲ ತೀವ್ರವಾಗಿ ಅನುಭವಿಸಿ ನೋಡುವ ಉಬಿಗೆ -ಹೊರಡುವ ಗಳಿಗೆಯಲ್ಲಿ ಬಸು ಮತ್ತು ಮೀರ್ ಅಪ್ಪಿಕೊಂಡು ಹಸ್ತಲಾಘವ ಮಾಡುವಾಗ, ಅವರ ಕೈಗಳಲ್ಲಿ ಭೂಮಿಯ ಮೇಲಿನ ಮತ್ತೊಂದು ಹಕ್ಕು ಹೊಂಚುತ್ತಿದ್ದಂತೆ -ಅನ್ನಿಸಿತ್ತು. ತುಂಬ ಆತಂಕಿತನಾಗಿದ್ದ ಉಬಿ. ಮರಳುವ ಹೊತ್ತಿನ ಚೆಕ್‌ನಲ್ಲಿ ಮತ್ತೆ ಅದೇ ಮಸಾಯಿ ಮುದುಕಿಯಿದ್ದಳು. ಅವಳ ಕೈಯಲ್ಲಿ ಅದೇ 10 ರೂಪಾಯಿಯ ಭಾರತೀಯ ನೋಟು ಇತ್ತು. ಉಬಿ ಕಿಸೆಯಿಂದ ನೂರು ಡಾಲರಿನ ನೋಟನ್ನು ಅವಳಿಗೊಡ್ಡಿದ. ಒಂದು ಲಕ್ಷದ ಇಪ್ಪತ್ತು

ಸಾವಿರ ಷಿಲ್ಲಿಂಗುಗಳ ಪುಳಕವನ್ನು ಅವಳ ಕಣ್ಣು ತುಳುಕಿದವು. ಬಸು ಕೆಟ್ಟದಾಗಿ ಬಯ್ದುಕೊಂಡ ಉಬಿಯನ್ನು.

ಈ ಕಥೆ ಆಫ್ರಿಕಾದ ಕ್ಯಾನವಾಸಿನಲ್ಲಿ ಭಾರತವನ್ನು ಮೂಡಿಸುತ್ತದೆ. ಎಲ್ಲ ಘಟನೆಗಳೂ ಭಾರತವನ್ನು –ವಸಾಹತುಶಾಹಿಯಿಂದ ಮತ್ತೀಗ ಜಾಗತೀಕರಣ ಭಯಾನಕತೆಯಲ್ಲಿ ಸಿಲುಕಿರುವ ಭಾರತವನ್ನು ಕಾಣಿಸುತ್ತದೆ. 'ಮಾಮ ಮಸಾಯಿ' ಎಂಬ ನಮ್ಮ ನಾಗರಿಕ ಭಾಷೆಯಲ್ಲಿ ಅರ್ಥವಾಗದ ದೈನೇಸಿ ಯಾಚನೆಯ ಮುದುಕಿ, ಭಾರತದ ಲಕ್ಷಾವಧಿ ಚೆಕ್‌ಪೋಸ್ಟಗಳಲ್ಲಿ ಮತ್ತೆ ಮತ್ತೆ ಕಾಣುತ್ತಲೇ ಇರುತ್ತಾಳೆಯಲ್ಲವೇ? ಜಗತ್ತಿನ ಬಡರಾಷ್ಟ್ರಗಳ ಅಪಾರ ಪ್ರಾಕೃತಿಕ ಸಂಪತ್ತಿನ ಮೇಲೆ, ಜಗತ್ತಿನ ಎಲ್ಲ ಶ್ರೀಮಂತರೂ ಒಂದಾಗಿ ಹಕ್ಕು ಚಲಾಯಿಸುತ್ತಿರುವ, ತಮ್ಮ ಪೇಟೆಂಟನ್ನು ಊರುತ್ತಿರುವ ವಿದ್ಯಮಾನಗಳನ್ನು ಕಾಣಿಸುತ್ತದೆ. ಶಿಕ್ಷಣ ಪ್ರಸಾರದಂತಹ ಮಾನವೀಯ ಸೇವೆಯ ಚಹರೆಯನ್ನು ಮುಂದಿಟ್ಟುಕೊಂಡ ಲೂಟಿಕೂರರ ಬಗ್ಗೆ ಗಮನಿಸಲು ಸೂಚಿಸುತ್ತದೆ. ಶಿಕ್ಷಣ ಸಂಸ್ಥೆಗಳ ಹೆಸರಿನಲ್ಲಿ ಜಗತ್ತಿನ ಏಕಮಾದರಿಯನ್ನು ಬಿತ್ತಿ; ಮುಂದಿನ ತಲೆಮಾರುಗಳನ್ನು ವಿಚಾರಶೂನ್ಯ ಬಾಯಿಪಾಠದ ಗಿಳಿಗಳನ್ನಾಗಿ ಮಾಡುವ, ಬಹುರಾಷ್ಟ್ರೀಯ ಕಂಪನಿಗಳ ಸೇವಕರನ್ನಾಗಿ ಮಾಡುವ, ಅದನ್ನೇ ಅಭಿವೃದ್ಧಿ ಎಂದುಕೊಳ್ಳುವ ದುರಂತ ಒಂದೆಡೆ. ಇದೇ ಹೆಸರಿನಲ್ಲಿ ಯಾರದೋ ನೆಲ–ಜಲ–ಕಾಡುಗಳಂತಹ ಪ್ರಾಕೃತಿಕ ಸಂಪತ್ತಿನ ಮೇಲೆ ತಮ್ಮ ಹಕ್ಕನ್ನು ಸ್ಥಾಪಿಸುವುದು. ಈ ಕಥೆಯ ಮಹತ್ವವಿರುವುದು. ಇದು ಜಾಗತೀಕರಣದ ಶೋಷಕ ವ್ಯವಸ್ಥೆಯ ಜಾಲವನ್ನು ತೋರಿಸುತ್ತದೆ ಎನ್ನುವುದರಲ್ಲಿ. ಅಮೇರಿಕಾದಂತಹ ದೇಶಗಳ ಶ್ರೀಮಂತರು ಭಾರತವನ್ನು ನುಂಗಲು ಬಾಯಿತೆರೆಯುತ್ತಾರೆ. ಭಾರತದಂತಹ ದೇಶಗಳ ಶ್ರೀಮಂತರು ಆಫ್ರಿಕಾವನ್ನು ನುಂಗಲು ಬಾಯಿ ತೆರೆಯುತ್ತಾರೆ. ನಾವು ಯಾವುದನ್ನು ಶ್ರೀಮಂತ ದೇಶ–ಬಡದೇಶ ಎಂದು ತಿಳಿಯುತ್ತೇವೆಯೋ ಆ ತಿಳುವಳಿಕೆಯ ಮಾನದಂಡವೇ ತಪ್ಪಿದೆ. ಅಪಾರ ಸಂಪನ್ಮೂಲಗಳನ್ನು ಹೊಂದಿರುವ ದೇಶಗಳನ್ನು ಬಡದೇಶಗಳೆಂದು ಕರೆಯುತ್ತ, ಅವುಗಳ ಉದ್ಧಾರದ ಯೋಜನೆಗಳೆಂಬ ಕಪಟ ತಂತ್ರಗಳಿಂದ ಸಂಪನ್ಮೂಲಗಳನ್ನು ದೋಚುವ ಅಮಾನವೀಯತೆ ಇದಾಗಿದೆ. ವಸಾಹತುಶಾಹಿಯ ಲೂಟಿಗೆ ಒಂದು ರಹದಾರಿಯಿತ್ತು. ಜಾಗತೀಕರಣದ ಬಹುರಾಷ್ಟ್ರೀಯ ಕಂಪನಿಗಳ ಲೂಟಿಗೆ ಶತಸಹಸ್ರ ದಾರಿಗಳಿವೆ. ಆರ್ಥಿಕವಾಗಿ ಹೆಚ್ಚೆಚ್ಚು ಬಲಾಢ್ಯನಾಗಬೇಕೆಂಬ ವೈರಸ್; ಲೂಟಿಕೋರತನವನ್ನೇ ನಾಗರಿಕತೆಯ ಮಾದರಿಯನ್ನಾಗಿ ರೂಪಿಸುತ್ತಿದೆ.

ಜಾಗತೀಕರಣದ ಪರಿಣಾಮವಾಗಿರುವ ಬಂಡವಾಳವಾದ, ಬಂಡವಾಳವಾದಿಯಾಗುವ ಪ್ರಾಥಮಿಕ ಅರ್ಹತೆಯಾದ ಲೂಟಿಕೋರತನ; ಈ ಲೂಟಿಕೋರತನದ ಅನಿವಾರ್ಯತೆಯಾಗಿರುವ ಮೋಸ, ಅತಿನಾಗರಿಕ ಬದುಕಿನ ಮನುಷ್ಯ ಸಂಬಂಧಗಳನ್ನು ಜಗಿದು ಉಗಿದ ತಿಪ್ಪೆಯಾಗಿಸಿದೆ ಎಂಬದನ್ನು 'ಹೆಡ್ ಹಂಟರ್' ಕಥೆ ವಿವರಿಸುತ್ತದೆ. ಈ ಕಥೆ ನಡೆಯುವುದು ಪ್ರಸಿದ್ಧ ಕಂಪನಿಯೊಂದರ ಒಳಾಂಗಣದ ವ್ಯವಹಾರದಲ್ಲಿ. ಸಹೋದ್ಯೋಗಿಗಳ ನಡುವಿನ ಸಂವಹನದಲ್ಲಿ. ಸಂಪೂರ್ಣ ಕಥೆ ಆಫೀಸೆಂಬ ಗೋಡೆಯ ಒಳಗಿನ ಜಗತ್ತನ್ನು ಮಾತ್ರ ತೋರುತ್ತದೆ. ಆವರಣ ಸಣ್ಣದಾದುದರಿಂದಲೋ ಏನೋ ಹೆಚ್ಚು ತೀಕ್ಷ್ಣವಾಗಿ ತೋರುತ್ತದೆ.

ಅವರ ಆಫೀಸಿನಲ್ಲಿ ಬಾಸ್‌ನನ್ನು ಬಾಸ್ ಎಂದು ಕರೆಯುವಂತಿಲ್ಲ. ಎಲ್ಲರೂ ಎಲ್ಲರನ್ನೂ ಅವರವರ ಹೆಸರಿನಿಂದಲೇ ಕರೆಯುವುದು. ಇದು ಆಫೀಸಿನ ನಿಯಮ. ಹೊರತೋರಿಕೆಯ ಕಣ್ಕಟ್ಟಿನಂತೆ ಕಾಣುವ ಈ ಸಜ್ಜನಿಕೆಯು, ನಿಜವಾದ ಸಂಬಂಧಗಳಲ್ಲಿ ತನ್ನ ರೂಪವನ್ನು ಪ್ರಕಟಿಸುತ್ತಲೇ ಇರುತ್ತದೆ. ಬಾಸ್ ಎಂದು ಕರೆಯಬೇಕಿಲ್ಲ. ಹಾಗಂತ ಬಾಸ್‌ಗಿರಿ ಇಲ್ಲವೆಂದಲ್ಲ. ಆಜ್ಞೆ ಮಾಡುವುದಿಲ್ಲ. ಆದರೆ ಮಾತು ಮೀರುವಂತಿಲ್ಲ. ಸ್ನೇಹದ ನಯ ಬೆರೆತ ಮಾತುಗಳಿವೆ. ಒಳಗೆ ಉಸಿರುಗಟ್ಟಿಸುವ ಹುದುಲಿದೆ. ಸಂದೀಪ ಆಫೀಸಿನ ಬಾಸ್. ರಾಜು ಅವನ ಕೆಳಗಿನ ಅಧಿಕಾರಿ. ಸಂದೀಪ್ ರಾಜುವನ್ನು ಭೇಟಿಮಾಡಲು ಮೇಲ್ ಮಾಡಿ, ಕರೆಯಿಸಿ, ಬಾಸ್‌ಗಿರಿ ಪ್ರದರ್ಶಿಸಿ, ರಿಸೆಪ್ಷ್ಯನಿಸ್ಟ ಕಡೆ ಹೇಳಿಸುವುದು. ಅವನ ಅಹಂಕಾರಕ್ಕೆ ಸೊಪ್ಪು ಹಾಕಾಬಾರದೆಂದು ರಾಜು ಅಷ್ಟೇ ನಾಜೂಕಾಗಿ, ಅಷ್ಟೇ ಕುಶಲತೆಯಿಂದ ಸುಳ್ಳುಗಳನ್ನು ಪೋಣಿಸುವುದು. ನಾಟಕೀಯತೆಯೇ ಕಥೆಯ ಜೀವದ್ರವ್ಯವಾಗಿದೆ. ತನ್ನ ವರ್ತನೆಯಿಂದ ಬಾಸ್ ಸಂದೀಪನಿಗೆ ಸಿಟ್ಟು ಬಂದರೂ ಅವನದನ್ನು ತೋರಿಸಲಾರ. ನಗುತ್ತ ಬರಮಾಡಿಕೊಳ್ಳುತ್ತಾನೆ. ಯಾಕೆಂದರೆ "ನಿಮ್ಮ ಕೈಕೆಳಗೆ ಕೆಲಸ ಮಾಡುವವರನ್ನು ಖುಷಿಯಾಗಿಡುವಂತೆ ನೋಡಿಕೊಂಡರೆ ಅವರು ಚೆನ್ನಾಗಿ ಕೆಲಸ ಮಾಡುತ್ತಾರೆ. ಅದರಿಂದ ಪ್ರೊಡೆಕ್ಟಿವಿಟಿ ಹೆಚ್ಚಾಗುತ್ತದೆ." ಎಂದು ಮ್ಯಾನೇಜ್‌ಮೆಂಟ ಟ್ರೇನಿಂಗ್‌ಗಳಲ್ಲಿ ಸರಿಯಾಗಿ ತಲೆತುಂಬಿರುತ್ತಾರೆ. ಎಂದುಕೊಳ್ಳುತ್ತಾನೆ ರಾಜು. ಪರಸ್ಪರ ವೈಯಕ್ತಿಕ ಬದುಕುಗಳ ಬಗ್ಗೆ ತುಂಬ ಆಪ್ತ ಭಾವನೆಯಿಲ್ಲದೆ, ಬರಿದೆ ವ್ಯವಹಾರಿಕ ಅನುಕೂಲಕ್ಕಾಗಿ ನಡೆವ, ಆತ್ಮೀಯವೆಂದು ಪರಸ್ಪರರಿಗೆ ಮೋಸಗೊಳಿಸುವ ಮಾತುಕತೆಗಳ ರಾಜಕಾರಣ ವಾಕರಿಕೆ ಅನ್ನಿಸುವಂತಿರುವುದನ್ನು ಕಥೆ ತನ್ನ ರಚನೆಯಲ್ಲಿಯೇ ನೇಯ್ದಿದೆ. ಆಫೀಸಿನ ಸಹೋದ್ಯೋಗಿ ಶಶಿಕಲಾಳಿಗೆ ಈ ಸಲ ತುಂಬ ಕಡಿಮೆ ಸ್ಕೋರ್

ಬಂದಿರುವುದರಿಂದ ಅವಳನ್ನು ಇಂದೇ ರಾಜೀನಾಮೆ ಕೊಡಿಸಿ ಮನೆಗೆ ಕಳುಹಿಸುವ ಗಂಭೀರ ಕೆಲಸವನ್ನು ಸಂದೀಪ್ ರಾಜುವಿಗೆ ವಹಿಸುತ್ತಾನೆ. ನೀನು ಈ ಕೆಲಸವನ್ನು ಮಾಡುತ್ತೀಯಾ. ನಿನ್ನ ಮೇಲೆ ನಂಬಿಕೆಯಿದೆ. ಒಂದೊಮ್ಮೆ ನಿನ್ನ ಸಹಾಯಕ್ಕೆ ಅಗತ್ಯಬಿದ್ದರೆ ನಾನಿದ್ದೇನೆ –ಎಂದ ಸಂದೀಪನ ಮಾತಿನಲ್ಲಿ, ನಿನ್ನ ಕೈಲಾಗದ್ದನ್ನು ನಾನು ಮಾಡಬಲ್ಲೆ ಎಂಬ ಅಹಂಕಾರ ಇರುವುದು ರಾಜುವಿನ ಗಮನಕ್ಕೆ ಬಂದಿತ್ತು.

ನಾಲ್ಕು ತಿಂಗಳ ಹಿಂದೆ, ಕಂಪನಿಯಿಂದ ಒಂದಿಬ್ಬರು ಪ್ರಾಜೆಕ್ಟ್ ಲೀಡರ್‌ಗಳು ಗುಡ್‌ಬೈ ಹೇಳಿ ಅಮೇರಿಕಾಕ್ಕೆ ಹಾರಿದ್ದರು. ಅದೇ ವೇಳೆಗೆ ಕಂಪನಿಗೆ ಹೊಸ ಪ್ರಾಜೆಕ್ಟ ಬಂದಿತ್ತು. ಸಂದೀಪ್, ಆ ಪ್ರಾಜೆಕ್ಟಿನ ಲೀಡರ್‌ಶಿಫನ್ನು ಬಲವಂತವಾಗಿ ರಾಜುವಿನ ಕೊರಳಿಗೆ ಹಾಕಿದ್ದ. ಹೊಸ ಟೆಕ್ನಿಕಲ್ ಲೀಡರ್‌ನನ್ನು ಕೊಡಲು ಕಂಪನಿಗೆ ಆಗಲಿಲ್ಲ. ಕಡೆಗೂ ಪ್ರಾಜೆಕ್ಟ ಸೋತಾಗಿತ್ತು. ಪರಿಣಾಮವಾಗಿ, ಆ ಪ್ರಾಜೆಕ್ಟಲ್ಲಿ ಕೆಲಸ ಮಾಡಿದವರೆಲ್ಲರೂ ರಾಜೀನಾಮೆ ಕೊಟ್ಟು ಹೋಗಿಯಾಗಿತ್ತು.

ಈಗ ನಡೆಯುವುದು, ನಡೆಯಬೇಕಿರುವುದು ರಾಜು ಮತ್ತು ಶಶಿ ಕಾನ್ಫರನ್ಸ ರೂಂನಲ್ಲಿ ಭೇಟಿಯಾಗುವುದು. ಅಲ್ಲಿಗೆ ಬರುವಾಗಲೇ ಶಶಿ, ಬ್ಯಾಡ್ ನ್ಯೂಸ್ ಕೇಳಲು ಸಿದ್ಧವಾಗಿಯೇ ಬಂದಿದ್ದಳು. ಅವಳ ಸೂಜಿಮೊನಿಯ ಗುಣಕ್ಕೆ ರಾಜುವೇ ಅವಾಕ್ಕಾಗಬೇಕಾಯಿತು. ಒಮ್ಮೆಲೇ ಒಂದು ವಾಕ್ಯದಲ್ಲಿ ನಿರ್ಧಾರ ಹೇಳದೆ, ಒಂದಿಷ್ಟು ಪ್ರಾಜೆಕ್ಟ ವಿಷಯ ಮಾತನಾಡಿ, ಅವಳು ಮಾನಸಿಕವಾಗಿ ಸಿದ್ಧವಾದ ಮೇಲೆ ವಿಷಯವನ್ನು ಹೇಳಿದರಾಯಿತು ಎಂದು ರಾಜು, 'ಪ್ರಾಜೆಕ್ಟ ಸೋಲಿಗೆ ಕಾರಣ ಏನು?' ಎಂದು ಪ್ರಶ್ನಿಸುತ್ತಾನೆ. 'ಐ ಥಿಂಕ್, ಯು ಆರ್ ದಿ ಓನ್ಲಿ ರೀಜನ್ ಫಾರ್ ದಿ ಫೇಲ್ಯುಯರ್ ಆಫ್ ದಿಸ್ ಪ್ರಾಜೆಕ್ಟ' ಎಂದು ಶಶಿ, ನೇರ ಹೊಣೆಯನ್ನು ರಾಜುವಿನ ಮೇಲೆ ಹೊರೆಸಿಬಿಡುತ್ತಾಳೆ. ಅವನು ಹೇಗೆ ಕಾರಣ ಎನ್ನುವ, ಅವನು ಮುಚ್ಚಿಟ್ಟುಕೊಂಡ ಅವನನ್ನು ತೆರೆತೆರೆದು ತೋರುತ್ತಾಳೆ. ರಾಜುವಿನ ಸ್ವ ಸಮರ್ಥನೆಗೆ, 'ಈಗಾಗಲೇ ಮೂಲೆಗುಂಪಾಗಿರೋ ಮೇನ್‌ಫ್ರೇಂ ಟೆಕ್ನಾಲಜಿ ನಿಂಗೆ ಬೇಕಿರಲಿಲ್ಲ' ಎಂದು ವಿವರಿಸುತ್ತಾಳೆ. ಅವಳ ರಾಜೀನಾಮೆಯ ಮತ್ತು ಅದಕ್ಕೂ ಮೊದಲಿನ ಕೆಲವು ಸಾಂಪ್ರದಾಯಿಕ ಕೆಲಸಗಳ ಸೂಚನೆ ಕೊಟ್ಟು ಕಳಿಸುತ್ತಾನೆ ಸಂದೀಪ್, ಶಶಿಯ ರಾಜೀನಾಮೆಯ ಸುಂದರ ಬರಹವನ್ನು ಇ ಮೇಲ್‌ಗೆ ಹಾಕುತ್ತಾನೆ. ನಾಳೆಯಿಂದ ಅಟೆಂಡೆನ್ಸ, ಕಂಪ್ಯೂಟರ್‌ಗಳಲ್ಲಿ ಅವಳ ಹೆಸರು ಇರುವುದಿಲ್ಲ.

ಎರಡು ದಿನಗಳ ನಂತರ ರಾಜುವನ್ನು ಶಶಿ ಕಾದು ಕಾದು ಭೇಟಿಯಾಗುತ್ತಾಳೆ. ಅವಳ ಮದುವೆಯ ಕಾರ್ಡ ಕೊಟ್ಟು ಕರೆಯುತ್ತಾಳೆ. ಅವಳೊಂದಿಗೆ ಮಾತನಾಡುವಾಗ

ರಾಜುವನ್ನು ಬೆಚ್ಚಿಬೀಳಿಸುವ ವಿಷಯಗಳು ಶಶಿಯಿಂದಲೇ ಗೊತ್ತಾಗುತ್ತವೆ. ಶಶಿ ಆಫೀಸಿಗೆ ಬಂದು ಹಾಜರಾದ ಮೇಲೆ ಆಫೀಸಿನ ಉನ್ನತ ಅಧಿಕಾರಿಗಳು ರಾಜೀನಾಮೆ ಬಿಸಾಕಿ ಅಮೇರಿಕಾಕ್ಕೆ ಹಾರಿದ್ದರು. ನಾನು ಇನ್ನೂ 2 ತಿಂಗಳು ಇಲ್ಲಿದ್ದರೆ, ಎಲ್ಲ ಸಾಫ್ಟವೇರ್ ಇಂಜನಿಯರ್ಸ್ ಖಾಲಿಯಾಗ್ತಾರೆ ಎಂಬ ಭಯ ಸಂದೀಪನಿಗೆ –ಎನ್ನುತ್ತಾಳೆ. ಅವಳೊಬ್ಬ ಹೆಡ್ ಹಂಟರ್. ಈಗ ಬಂದಿದ್ದು ಕೂಡ, ರಾಜುವಿಗೆ ಸಂದೀಪನ ಕೈಕೆಳಗೆ ಕೆಲಸ ಮಾಡುತ್ತ ಈ ಕಂಪನಿಯಲ್ಲಿ ಕೊಳೆಯುವುದಕ್ಕಿಂತಲೂ ಹೆಚ್ಚಿನ ಸಂಬಳಕ್ಕೆ ಅಮೇರಿಕಾಕ್ಕೆ ಹಾರು – ಎಂದು ಸೂಚನೆ ಕೊಡುವುದಕ್ಕೆ.

ಉದ್ಯೋಗ ಎನ್ನುವುದು ಹಣ ಮಾಡುವ ದಂಧೆಯಾಗಿರುವ, ಅದಕ್ಕೊಂದು ನೈತಿಕತೆ, ನಿಷ್ಠೆಗಳ ಅಗತ್ಯವಿದೆ ಎಂಬ ಹಂಗಿಲ್ಲದ ಇಂದಿನ ಮುಕ್ತ ಮಾರುಕಟ್ಟೆಯ ಬದುಕಿನ ಒಳಪದರುಗಳಲ್ಲಿ ಕೊಳೆತು ಕೀವಾಡುತ್ತಿರುವ ಸಂಗತಿಗಳನ್ನು ಈ ಕಥೆ ಅನಾವರಣ ಮಾಡುತ್ತದೆ. ಹಲವು ಸಂಗತಿಗಳು ಒಂದರೊಳಗೊಂದು ಸೇರಿ ಕೊಲಾಜ್ ಆಗಿವೆ. ಪರಸ್ಪರ ಮತ್ಸರ, ಕೋಪಗಳಿದ್ದರೂ ಬಹಿರಂಗದಲ್ಲಿ ಮಾತ್ರ ನಯವಾಗಿ 'ಮ್ಯಾನರ್ಸ್'ನಿಂದ ನಡೆಯುವ ಮಾತುಕತೆಯ ವ್ಯವಹಾರವು ಮನುಷ್ಯ ಜನಾಂಗವು ಭಾಷೆಯನ್ನು ಶೋಧಿಸಿಕೊಂಡಿದ್ದರ ಕುರಿತೇ ಅಸಹ್ಯವೆನ್ನಿಸುವಂತಿರುವುದನ್ನು ದಾಖಲಿಸುತ್ತದೆ. ಸಂದೀಪ ಮತ್ತು ರಾಜುವಿನ ಮಾತುಕತೆಗಳಲ್ಲಿದು ಢಾಳಾಗಿ ಕಾಣುತ್ತದೆ.

ಮುಕ್ತಮಾರುಕಟ್ಟೆಯ ಸ್ಪರ್ಧಾತ್ಮಕ ಜಗತ್ತು, ಒಂದು ಕಂಪನಿಯ ಯಶಸ್ಸಿಗೆ ಕಾರಣರಾದ ಪರಿಣತರನ್ನು ಅಲ್ಲಿಂದ ಎತ್ತಿಕೊಳ್ಳಲು ಹೇಗೆಲ್ಲ ತಂತ್ರಗಾರಿಕೆಯನ್ನು ನಡೆಯಿಸುತ್ತದೆ ಎಂಬುದರ ಅನಾವರಣವಿದೆ. ಸಭ್ಯ, ಮುಗ್ಧ ಹುಡುಗಿಯಂತೆ ಕಾಣುವ ಶಶಿ, ಈ ಕಂಪನಿಯ ಇಂದಿನ ಕಷ್ಟಕ್ಕೆ, ಮಹತ್ವದ ಉದ್ಯೋಗಿಗಳೆಲ್ಲ ರಾಜೀನಾಮೆ ಕೊಟ್ಟು ಅಮೇರಿಕಾ ಸೇರಿಕೊಳ್ಳುವುದಕ್ಕೆ ಕಾರಣಳಾಗಿದ್ದಾಳೆ. ತನ್ನನ್ನು ತಾನು 'ಹೆಡ್‌ಹಂಟರ್' ಎಂದು ಹೇಳಿಕೊಳ್ಳಲು, ಆ ಮೂಲಕ ತನ್ನ ಸಂಪಾದನೆ ಎಷ್ಟು ಎಂದು ಸಾರಿಕೊಳ್ಳಲು ಅವಳಿಗೆ ಮುಜುಗರವೇನಿಲ್ಲ. ಈಗವಳು ರಾಜುವಿಗೆ ಆವ್ಹಾನ ಕೊಡಲು ಮತ್ತೆ ಬರುವುದೂ ಆಫೀಸಿಗೆ. ಆಫೀಸು ಬಿಟ್ಟು ಹೋಗಿರುವ ಶಶಿ, ರಾಜುವನ್ನು ಭೇಟಿಯಾಗಲು ಬಂದಳೆಂಬುದು ರಿಸೆಪ್ಷ್ಯನಿಸ್ಟ ಮೂಲಕ ಸಂದೀಪ ತಿಳಿಯುತ್ತಾನೆ. ಶಶಿಯ ಮೇಲೆ ಸಂದೀಪನಿಗಿರುವ ಅನುಮಾನವೀಗ ರಾಜುವಿನ ಕಡೆ ವಿಸ್ತರಿಸುತ್ತದೆ. ಸಂಬಂಧ ಮತ್ತಷ್ಟು ಕಠಿಣವಾಗುತ್ತದೆ. ರಾಜು, ಕಂಪನಿ ಬಿಡುವುದು ಅನಿವಾರ್ಯವಾಗುತ್ತದೆ. ಆಗಲಿ. ಅದರಿಂದ ಶಶಿಗೆ ಹಣ ಬರುತ್ತದೆ. ಅಷ್ಟು ಸಾಕು. ಅಮೇರಿಕಾದಂತಹ ದೇಶಕ್ಕೆ ನಮ್ಮ ದೇಶದ ಶಕ್ತಿವಂತರನ್ನು

ತಲುಪಿಸುವ ಮೀಡಿಯೇಟರ್ ಆಗಿರುವ ಶಶಿಗೆ ಹಣ ಮುಖ್ಯ. ಬೇರೆನೂ ಅಲ್ಲ. ಅದನ್ನು ಆಗುಮಾಡಲು ಸ್ನೇಹ, ಹರಟೆ, ಆಪ್ತ ಮಾತುಕತೆ ಇತ್ಯಾದಿ.

ತುಂಬ ಆತ್ಮೀಯವಾಗಿ ಮೇಲ್ನೋಟಕ್ಕೆ ಕಾಣುವ ವಲಯವೇ ಒಬ್ಬರೊಬ್ಬರನ್ನು ಬೇಟೆಯಾಡುವಂತಿದೆ. ರಾಜು, ತನ್ನ ಕಂಪ್ಯೂಟರ್‌ನಲ್ಲಿ ಸರ್ದಾರ್ಜಿ ಜೋಕ್ಸ ಮತ್ತು ಹೆಣ್ಣುಗಳ ಚಿತ್ರವನ್ನು ನೋಡುತ್ತಿರುವುದನ್ನು ಬಾಸ್ ಸಂದೀಪ ತುಂಬ ತಣ್ಣನೆಯ ಸ್ನೇಹಮಯ ಧಾಟಿಯಲ್ಲಿ ಎಚ್ಚರಿಸುತ್ತಾನೆ. ತನ್ನ ಕಂಪ್ಯೂಟರ್ ಈತ ಹ್ಯಾಕ ಮಾಡಿಕೊಂಡಿದ್ದಾನೆ ಎನ್ನುವುದು ರಾಜುವಿಗಾಗ ತಿಳಿಯುತ್ತದೆ. ಕಂಪನಿ ಜಗತ್ತಿನ ಒಳಾಂಗಣದಲ್ಲಿ ಪ್ರತಿಯೊಬ್ಬರೂ ಅವರವರ ಕೆಲಸವನ್ನು ನಿಗಾ ಇಟ್ಟು ಮಾಡಲು ಪ್ರೈವಸಿಗಳಿವೆ. ಕಂಪಾರ್ಟಮೆಂಟಗಳಿವೆ. ಆದರದು ಮೇಲಿನ ಅಧಿಕಾರಿಗಳ ಕಣ್ಣ ಸುಪರ್ದಿಯಲ್ಲಿರುತ್ತದೆ. ಸಿ.ಸಿ.ಕ್ಯಾಮರಾಗಳು ದೇಹದ ಚಲನ ವಲನ ಮಾತ್ರ ದಾಖಲಿಸುತ್ತವೆ. ಆದರೆ, ಮನಸ್ಸಿನ ವಿಚಾರಗಳನ್ನೂ ದಾಖಲಿಸುವ ಸೂಕ್ಷ್ಮದರ್ಶಕಗಳು ಬಂಡವಾಳಶಾಹಿಯ ಪ್ರಭುತ್ವದಲ್ಲಿದೆ. ಶಶಿ, ರಾಜುವಿಗೆ ಅಮೇರಿಕಾ ಕಂಪನಿಗೆ ಆಫರ್ ಮಾಡಿ, ಮನೆಗೆ ಫೋನ್ ಮಾಡ್ತೀನಿ ಎನ್ನುತ್ತಾಳೆ. ಆಫೀಸಿನಲ್ಲಿ ತನ್ನ ಕೈಕೆಳಗೆ, ತಾನು ಸೂಚಿಸುವ ಕೆಲಸ ಮಾಡಿಕೊಂಡಿರುವ ಶಶಿ, ತನ್ನ ಮನೆಯ ಫೋನ್ ನಂಬರ ಸಂಪಾದಿಸಿದ್ದು ಯಾವಾಗ? ಎಂದು ರಾಜು ಗಾಭರಿಯಾಗುತ್ತಾನೆ. ನಾಲಿಗೆ ಹೊರಳಿಸುವ ಮಾತಿಗೂ, ಮನಸ್ಸಿನಲ್ಲಿ ಹುಟ್ಟುವ ಮಾತಿಗೂ ಪರಸ್ಪರ ಸಂಬಂಧವೇ ಇಲ್ಲದಂತಹ ಸ್ಥಿತಿಯಲ್ಲಿ – ಸಹೋದ್ಯೋಗಿಗಳಾಗಿ ಬದುಕುವ ಮನುಷ್ಯ ಘನತೆಯ ಅಧಃಪತನದ ಸಂಕೇತದಂತಿದೆ ಈ ವಿವರಗಳು. ತನ್ನ ಕೈಕೆಳಗೆ ಅಷ್ಟೇ ಅಲ್ಲ ಇಡೀ ಆಫೀಸಿನಲ್ಲಿ ಹಗಲಿಡೀ ದುಡಿಯುವ ಜವಾನನಿಗೆ ಬರೀ 800 ರೂಪಾಯಿ ಸಂಬಳ. ಮದುವೆಯಾಗಬೇಕು. 200 ಹೆಚ್ಚು ಮಾಡಲು ಶಿಫಾರಸು ಮಾಡಿ ಎಂದು ಕೇಳಿಕೊಂಡಾಗ, ರಾಜುವಿಗೆ ತಲೆ ಧಿಂ ಅನ್ನುತ್ತದೆ. ನಾವು 50 ಸಾವಿರವನ್ನು ಜುಜುಬಿ ಎಂದು ಮಾತಾಡಿಕೊಳ್ಳುತ್ತೇವೆ. ಇವನಿಗೆ ಇಷ್ಟು ಕಡಿಮೆ ಸಂಬಳವಾ? ಅನ್ನಿಸುತ್ತದೆ. ಜಾಗತೀಕರಣದ ಸಾಮರಸ್ಯ ಮತ್ತು ಸಾಮೀಪ್ಯದ ನಿಜವಾದ ವಸ್ತು ಸ್ಥಿತಿ ಇದು ಎಂಬ ಸೂಚಿತ ಇಲ್ಲಿದೆ. ಬಂಡವಾಳವಾದವೇ ಬದುಕಿನ ಏಕೈಕ ಮೌಲ್ಯವಾದಾಗ, ಅದು ಮನುಷ್ಯ ಸಂಸ್ಕೃತಿ ನೂರಾರು ವರ್ಷಗಳಿಂದ ಬಲು ಜೋಪಾನವಾಗಿ ಸಂಚಿತವಾಗಿಸಿಕೊಂಡ ಮಾನವೀಯ ಮೌಲ್ಯಗಳನ್ನು ವಜಾಮಾಡಿ ಅವುಗಳನ್ನೂ ತನ್ನ ಕಾಲಾಳುವಾಗಿಸಿಕೊಳ್ಳುವುದನ್ನು ಕಥೆ ಹೇಳುತ್ತದೆ. ಈ ಕಥೆ ಹೊರಗಣ್ಣಿಗೆ ಪಾಶ್ ಆಗಿ, ಅತಿನಾಗರಿಕವಾಗಿ ಕಾಣುತ್ತಿರುವ ಬದುಕಿನ ವಿನ್ಯಾಸದ ಒಳಸತ್ಯವಾಗಿದೆ.

ನಗರಗಳಿಂದು ಇಂತಹ ಉಸಿರುಗಟ್ಟಿಸುವ ಅಡ್ಡೆಗಳಾಗಿವೆ. ಆಧುನಿಕತೆಯ ಪ್ರವೇಶವಾದ 70ರ ದಶಕದಲ್ಲಿ, ಗ್ರಾಮಬದುಕಿನಿಂದ ಸಿಡಿದು ಬಿದ್ದ ಕಾಳುಗಳ ಹಾಗೆ ಕಾಣುವ ನಗರ ಕೇಂದ್ರಿತ ಹೊಂದಾಣಿಕೆಯು ಯಾವ ಅನಾಥ ಪ್ರಜ್ಞೆಯನ್ನು, ಅಸಹಾಯಕ ಒಂಟಿತನವನ್ನು ಹುಟ್ಟಿಸುತ್ತಿತ್ತೋ ಅದಕ್ಕಿಂತ ಭಯಂಕರವಾದ ಮತ್ತು ತೀವ್ರವಾದ ಸ್ಪರ್ಧಾತ್ಮಕ ಜಗತ್ತು ಈಗಿನದು. ಯಶವಂತ ಚಿತ್ತಾಲರ 'ಶಿಕಾರಿ' ಕಾದಂಬರಿಯ ನಾಯಕನಿಗೆ; ಶಾಂತಿನಾಥ ದೇಸಾಯಿಯವರ 'ರಾಕ್ಷಸರು' ಕಾದಂಬರಿಯ ನಾಯಕನಿಗೆ –ಯಾವ ರೂಕ್ಷತೆ ಕಾಡುತ್ತಿತ್ತೋ ಅದಕ್ಕಿಂತಲೂ ಭೀಕರವಾದ ಅನಾಥಪ್ರಜ್ಞೆಯಿದು. ಅಥವಾ ಆ ಅನಾಥ ಭಾವವನ್ನು ಅರಗಿಸಿಕೊಳ್ಳಲು ಒಂದು ಆಕ್ರಮಣಕಾರಿ ಭ್ರಮೆಯ ವಲಯವನ್ನು ರೂಪಿಸಿಕೊಳ್ಳುವುದು. ಮತ್ತು ಸ್ಪರ್ಧೆಯ ಮೇಲಾಟವನ್ನೇ ಬದುಕು ಎಂದು ಭ್ರಮಿಸಿಕೊಳ್ಳುವುದು. ಮನುಷ್ಯ ಬದುಕು ಈ ಹಿಂದೆ ಎಂದೂ ಕಂಡರಿಯದ ಹಿಂಸೆಯ ರೂಕ್ಷ್ಮತೆಯಿದು. ಮಂಜಿನಿಂದ ಸುಡುವ ರೀತಿ.

ಜಾಗತೀಕರಣ ಎಂಬ ಮುಕ್ತ ಬಂಡವಾಳದ ಹರಿವು ಭಾರತದ ಸಾಮಾಜಿಕ ಬದುಕಿನಲ್ಲಿ ಉಂಟುಮಾಡಿದ ವಿಪ್ಲವವನ್ನು ಅಳೆಯುವ ಕಂಪನಾಂಕವೇ ಇಲ್ಲವಾಗಿದೆ. ಭಾರತದಂತಹ, ಶ್ರೀಮಂತ ಸಂಪನ್ಮೂಲಗಳನ್ನು ಹೊಂದಿದ ಬಡರಾಷ್ಟ್ರವು ತನ್ನ ಅಭಿವೃದ್ಧಿಯ ಪರಿಕಲ್ಪನೆಯಲ್ಲಿ ತಪ್ಪು ಹಾದಿಯನ್ನು ತುಳಿದೂ ಆಗಿದೆ. ಮಾನವ ಸಂಪನ್ಮೂಲ ಹೆಚ್ಚಿರುವ ದೇಶವು ಅಳವಡಿಸಿಕೊಳ್ಳಬೇಕಾದ ಅಭಿವೃದ್ಧಿಯ ಸಂಕಥನಕ್ಕೂ, ಮಾನವ ಸಂಪನ್ಮೂಲದ ಕೊರತೆಯಿರುವ ದೇಶಗಳ ಅಭಿವೃದ್ಧಿಯ ಸಂಕಥನಕ್ಕೂ ಇರುವ ಮತ್ತು ಇರಬೇಕಾದ ಮೂಲಭೂತ ವ್ಯತ್ಯಾಸದ ತಿಳಿವು ಮತ್ತು ಕಾಳಜಿಯಿಲ್ಲದ, ಮುಂದಾಲೋಚನೆಯಿಲ್ಲದ, ರಾಜಕೀಯ ನೈಪುಣ್ಯವಿಲ್ಲದ ಅಧಿಕಾರ ರಾಜಕಾರಣದ ಉರುಳು ಭಾರತದ ಸ್ವಾಯತ್ತತೆಯನ್ನೇ ನಾಶಮಾಡುವಂತಿತ್ತು. ಅಭಿವೃದ್ಧಿಯ ಮಾನದಂಡದಲ್ಲಿ ಆರ್ಥಿಕತೆಗೆ ಮಾತ್ರ ಮನ್ನಣೆಯನ್ನು ನೀಡತೊಡಗಿ, ಬಹುವೈವಿಧ್ಯಪೂರ್ಣವಾದ ಬಹುಸಾಂಸ್ಕೃತಿಕ ಪರಿಸರವನ್ನು ಸರ್ವನಾಶ ಮಾಡಿ ಆಗಿತ್ತು. ಯಂತ್ರಗಳ ತಂತ್ರಜ್ಞಾನದ ಬಳಕೆ ಮಾತ್ರ ಅಭಿವೃದ್ಧಿ ಎಂಬ ಶತಮೂರ್ಖ ನಿರ್ಣಯಕ್ಕೆ ತಲುಪಿ ಆಗಿತ್ತು. ಇಂತಹ ವಿದ್ಯಮಾನಗಳು ಭಾರತದಂಥ ಸಮಾಜದ ಕೂಡು ಬದುಕಿಗೆ ವಿಧ್ವಂಸಕಾರಿ ಸ್ಥಿತಿಯನ್ನು ತಲುಪಿಸಿತ್ತು. ಭಾರತವೀಗ ಮಾರಿಕೊಳ್ಳುವವರ ಉಗ್ರಾಣವಾಗಿ ಬದಲಾಗತೊಡಗಿತ್ತು. ಜಗತ್ತಿನ ಶ್ರೀಮಂತರಿಗೆ ಉಪಭೋಗಕ್ಕೆ, ವಿಲಾಸಕ್ಕೆ, ವೈಭವಕ್ಕೆ ಏನೇನು ಅಗತ್ಯವೋ ಆ ಎಲ್ಲವೂ ಸುಲಭವಾಗಿ, ಮುಫತ್ತಾಗಿ ಭಾರತದಲ್ಲಿ ಸಿಗತೊಡಗಿತ್ತು. ಅರಣ್ಯ, ನೀರು, ಶುದ್ಧ ಗಾಳಿ,

ಖನಿಜ, ಸಾಗರದಾಳಗಳಂತಹ ಪ್ರಾಕೃತಿಕ ಸಂಪತ್ತನ್ನು ಉಪಯೋಗಿಸಿ ಇಲ್ಲಿನ ಬಡಜನರಿಗೆ ಮೂರುಕಾಸಿನ ಉದ್ಯೋಗ ನೀಡಿ, ತಾವು ಶ್ರೀಮಂತರಾಗುವ ಬಹುರಾಷ್ಟ್ರೀಯ ಕಂಪನಿಗಳ ಬಂಡವಾಳಗಾರರನ್ನು ನಮ್ಮ ರಾಜಕಾರಣಿಗಳು ರೆಡ್ ಕಾರ್ಪೆಟ್ ಹಾಸಿ, ಹೂಗುಚ್ಛ ಕೊಟ್ಟು, ಮೊಣಕಾಲೂರಿ ನಿಂತು ಸ್ವಾಗತಿಸಿದರು. ಮನುಷ್ಯ ದೇಹ, ಶಕ್ತಿ, ಪ್ರತಿಭೆ, ಸೌಂದರ್ಯ, ಕೌಶಲ್ಯ, ಜ್ಞಾನ ಎಲ್ಲವೂ ಬಿಕರಿಗಿಟ್ಟ ಸಂಗತಿಗಳಾದವು. ಈ ಮಾರಾಟದ ಸರಪಳಿ ಅಂತ್ಯವೇ ಇಲ್ಲದ ಹಾಗೆ ಬೆಳೆಯತೊಡಗಿತು. ತನ್ನ ದೇಶದಿಂದ ಒಂದು ಒಣಮರವನ್ನು ಕಡಿಯಗೊಡದ, ಒಂದು ತೊಟ್ಟು ಡಿಸೇಲು-ಪೇಟ್ರೋಲನ್ನು ಮೇಲೆತ್ತಲು ಕೊಡದ, ತನ್ನ ನೆಲದಾಳದ ಖನಿಜ ಸಂಪನ್ಮೂಲವನ್ನು ಒಂದಿಂಚೂ ಬಗೆಯಕೊಡದ, ತನ್ನ ದೇಶದ ಜಲಮೂಲಕ್ಕೆ ಬರಿಗಾಲಿನ ಧೂಳೂ ಆವರಿಸಗೊಡದಂತೆ ಕಾಪಿಟ್ಟುಕೊಂಡ ಅಮೇರಿಕಾದಂತಹ ದೇಶಗಳು, ತೃತೀಯ ಜಗತ್ತಿನ ರಾಷ್ಟ್ರಗಳ ನೈಸರ್ಗಿಕ ಸಂಪತ್ತಿನ ಲೂಟಿಗಾಗಿ ಯುದ್ಧ ಮಾಡಿದವು. ತನಗೆ ಸಡ್ಡು ಹೊಡೆದು ಬೆಳೆದು ನಿಲ್ಲಬಹುದಾದ ಸಾರ್ವಭೌಮ ಶಕ್ತಿಯಿರುವ ದೇಶಗಳನ್ನು ಜಾಗತೀಕರಣದ ಒಪ್ಪಂದದ ಕುಣಿಕೆಯಲ್ಲಿ ಸಿಲುಕಿಸಿ ಉಸಿರುಗಟ್ಟಿಸಿದವು. ಅಭಿವೃದ್ಧಿಯ ಕುರಿತ ತಪ್ಪು ಸಂಕಥನವನ್ನು ಹರಡಿ, ಒಪ್ಪಿಗೆಯನ್ನು ಉತ್ಪಾದಿಸಿದವು. ಭಾರತದ ಸರ್ಕಾರಕ್ಕೆ ಕೃಷಿ ವಲಯದ ಸಾಲವನ್ನು ಸಬ್ಸಿಡಿಯನ್ನು ಕಡಿಮೆ ಮಾಡಲು ಸೂಚಿಸುವ ವಿಶ್ವಬ್ಯಾಂಕ್ ಅಮೇರಿಕಾದ ಚೇಲಾದಂತೆ ವರ್ತಿಸಲಾರಂಭಿಸಿತ್ತು. ಅಮೇರಿಕಾ ತನ್ನ ದೇಶದಲ್ಲಿ ಕೃಷಿಗೆ, ಶಿಕ್ಷಣಕ್ಕೆ, ಆರೋಗ್ಯಕ್ಕೆ ನೀಡುತ್ತಿರುವ ಸಬ್ಸಿಡಿಯನ್ನು ನೋಡಿದರೆ; ಉಳಿದ ರಾಷ್ಟ್ರಗಳ ಆಂತರಿಕ ವಿಚಾರದಲ್ಲಿ ಮೂಗು ತೂರಿಸುವ ಅಧಿಕಪ್ರಸಂಗವನ್ನು ಮಾಡಬಾರದಿತ್ತು. ಜಾಗತೀಕರಣವೆಂದರೆ ಅಮೇರಿಕೀಕರಣವಲ್ಲದೆ ಬೇರೇನೂ ಅಲ್ಲ ಎಂಬುದನ್ನು ವಿದ್ವಾಂಸರು ಸಾಕ್ಷಿ, ಪುರಾವೆಗಳ ಸಮೇತ ಮನನ ಮಾಡಿದರೂ; ನಮ್ಮನ್ನಾಳುವ ರಾಜಕಾರಣಿಗಳ ಅಮಾನುಷ ಸ್ವಾರ್ಥದ ಕಾರಣದಿಂದ ಭಾರತ ಮಾರುವ, ಮಾರುಕಟ್ಟೆ ಪ್ರದೇಶವೂ; ಮಾರಿಕೊಳ್ಳುವವರ ಸಂತೆಪೇಟೆಯೂ ಆಯಿತು. ಜಾಗತೀಕರಣದ ಪರಿಣಾಮವಾಗಿ, ಮಾರುಕಟ್ಟೆಯು ನಮ್ಮ ಬದುಕಿನ ಅಗತ್ಯದ ಸಂತೆಯಾಗದೆ, ನಮ್ಮ ಬದುಕನ್ನೇ ಬದಲಿಸುವ ಆದ್ಯತೆಯಾಗುವ; ಬದುಕಿನ ವೇಳಾಪಟ್ಟಿಯನ್ನೇ ತಲೆಕೆಳಗು ಮಾಡಿಬಿಡುವ ಸ್ಥಿತಿಯನ್ನು ಬಹಳಷ್ಟು ಸಣ್ಣಕಥೆಗಳು ಹೇಳುತ್ತವೆ. ಕನ್ನಡ ಸೃಜನಶೀಲತೆಯು ಸೇಲ್ಸಮನ್‌ಗಳ ನಗುವನ್ನು ಮಾರ್ಕೆಟ್ಟಿನ ವ್ಯಾಪಾರಿಯನ್ನು, ಕೂಗುವ ಹರಾಜನ್ನು. ಹೀಗೆ ಯಾವ ಸಣ್ಣ ಪುಟ್ಟ ಚಿತ್ರವನ್ನೂ ನಿರ್ಲಕ್ಷಿಸದೆ ಅವುಗಳಿಗೊಂದು ಕ್ಯಾನವಾಸ್ ಹಾಕಿದೆ. ಸಂತೆಪೇಟೆ ಒಂದು ನಿರ್ಧಿಷ್ಟ ಸ್ಥಳವಾಗಿ ಉಳಿದಿಲ್ಲ.

ಅದು ಬದುಕಿನ ಪ್ರತಿಯೊಂದು ಆಯಾಮವನ್ನೂ ಹೊಕ್ಕಿದೆ. ವಿನಯಾ ಅವರ ತಿಳಿಯಲಾಯಿತೆ, ತಿಳಿವ? ಕಥೆ-ಪ್ರವಾಸೋದ್ಯಮವನ್ನೇ ಬ್ಯುಸಿನೆಸ್ ಮಾಡಿಕೊಂಡಿರುವ ಕಂಪನಿಯೊಂದು, ಮಧ್ಯಮವರ್ಗದ ಆಸೆ ಹಾಗೂ ದೌರ್ಬಲ್ಯವನ್ನು ಗುರುತಿಸಿ ಹೇಗೆ ಸುಲಿಗೆಕೋರತನಕ್ಕೆ ಇಳಿಯುತ್ತದೆ. ಮೊಬೈಲ್, ಇಮೇಲ್‌ಗಳಂತಹ ಸಾಮಾಜಿಕ ಜಾಲತಾಣಗಳು ಇಂತಹ ಲೂಟಿಕೋರ ಕಂಪನಿಗಳ ಜಾಹೀರಾತಿನ ಜಾಹೀರನಾಮೆಗಳಾಗುತ್ತವೆ ಎಂಬುದನ್ನು ಹೇಳುತ್ತದೆ.ಕಥೆಯ ನಾಯಕಿ ಶಾಲಿನಿ, ಬಾಲ್ಯದಿಂದ ನಾವು ತಿಳಿದ-ಬೆಳೆದ-ಬಾಳಿದ ಜೀವನ ಮೌಲ್ಯಗಳಿಗೂ, ಈಗ ಒಂದಿಷ್ಟು ಆಸೆ ತೋರಿದರೆ ಬಾಯಿ ತೆರೆಯುವ ಮಟ್ಟಕ್ಕೆ ಇಳಿದುಬಿಟ್ಟಿದ್ದಕ್ಕೂ ಇರುವ ವ್ಯತ್ಯಾಸಕ್ಕೆ ಆತ್ಮನಾಶದ ನೋವಿನಿಂದ ಕಣ್ಣೀರಾಗುತ್ತಾಳೆ. ಕಾಲಿಡುವ ನೆಲವೇ ಇಳಕಲು ಭೂಮಿಯಾಗಿ, ನಾವುಗಳು ಇಡಿಇಡಿಯಾಗಿ ಈ ಆಸೆ ಬುರುಕತನದ ಅಧಃಪತನಕ್ಕೆ ಸರಿಯುತ್ತಿದ್ದೇವೆಯೇ? ಎಂಬ ಪ್ರಶ್ನೆಯನ್ನು ಕಥೆ ಮುಂದಿಡುತ್ತದೆ.

ವಿವೇಕ ಶ್ಯಾನಭಾಗರ 'ಸಶೇಷ' ಕಥೆಯು –ಕಂಪನಿಯ ಉದ್ಯೋಗಿಗಳಾಗಿರುವವರು, ಇದ್ದಕ್ಕಿದ್ದಂತೆ ತಮ್ಮೆದುರು ತೆರೆದುಕೊಂಡ ಆರ್ಥಿಕ ಉದಾರೀಕರಣವು ವಿದೇಶೀ ಕಂಪನಿ ವಹಿವಾಟಿನ ಸಾಮ್ರಾಜ್ಯವನ್ನು ಬೆಳೆಸಿದಾಗ, ತಾವು ಮಾಡಬೇಕಿರುವುದೇನು? ನಾವು ಎಲ್ಲಿ ಸಲ್ಲುತ್ತೇವೆ? ಎಂಬ ಗಾಬರಿಯಲ್ಲಿ ಅಸ್ತವ್ಯಸ್ತರಾಗುವುದನ್ನು ಹೇಳುತ್ತದೆ. ಮಲ್ಟಿನ್ಯಾಶನಲ್ ಕಂಪನಿಯ ಹಿರಿಯ ಹುದ್ದೆಯಲ್ಲಿರುವ ಇವರುಗಳಿಗೆ, ತಮ್ಮೊಂದಿಗಿದ್ದು ಈಗ ವಿದೇಶದಲ್ಲಿ ತಮಗಿಂತ ಹೆಚ್ಚಿನ ಸಂಬಳ ಪಡೆಯುತ್ತಿರುವ ನಂಬಿ-ಯ ಬಗ್ಗೆ ಚಿಂತನೆ. ಮಲ್ಟಿನ್ಯಾಷನಲ್ ಕಂಪನಿಗಳು ಜನರು ತಮ್ಮ ಬದುಕಿನ ಬೇರುಗಳ ಬಗ್ಗೆ, ಸುತ್ತಲ ವರ್ತಮಾನಗಳ ಬಗ್ಗೆ ಯೋಚಿಸದಂತೆ ಗಾಜಿನ ಗೋಡೆ ಕಟ್ಟುವುದನ್ನು ಹೇಳುತ್ತದೆ ಇದೇ ನಂಬಿ ಈಗ, ಇಷ್ಟುದೊಡ್ಡ ಹುದ್ದೆ ನಿಭಾಯಿಸುತ್ತಾನೆ ಎನ್ನುವುದು ನಂಬಲೂ ಆಗದ್ದು ಎನಿಸುತ್ತದೆ. ಯಾಕೆಂದರೆ, ಅವನು ದಿನಂಪ್ರತಿಯ ಖರ್ಚು ವೆಚ್ಚ ಬರೆದು ತಾಳೆ ನೋಡುವ ತಾತನ ಕುಟುಂಬದಿಂದ ಬಂದವನು ಮತ್ತು ತನ್ನ ಬದುಕಿನ ಒಂದು ಘಟ್ಟದವರೆಗೂ ಅದನ್ನು ತಾಳೆನೋಡುತ್ತಿದ್ದವನು. ಒಮ್ಮೆ ಒಂದೆರಡು ತಿಂಗಳು ಅವನು ಖಿನ್ನನಾಗಿ ಯೋಚಿಸಿದ್ದು 12 ರೂಪಾಯಿ ಲೆಕ್ಕ ಹೊಂದಾಣಿಕೆ ಆಗುತ್ತಿಲ್ಲವೆಂದು. ನಂಬಿ ಮತ್ತು ಅವನ ಹೆಂಡತಿಯನ್ನು, ಅವರಮನೆಯಲ್ಲಿ ಕೂರಿಸಿ –ಈ ಹಾಳು ಲೆಕ್ಕದ ಹಳೆಯ ಪರಿಪಾಟಲನ್ನು ಬಿಟ್ಟು ನೆಮ್ಮದಿಯಿಂದ ಬಾಳುವಂತೆ ಪ್ರವೀಣ ಶುಕ್ಲಾ ಬೈದು ಬುದ್ಧಿಹೇಳಬೇಕಾಯಿತು. ನಂಬಿಯ ಲೆಕ್ಕದ ಪುಸ್ತಕ, ದೇವರಿಗೆ ತಪ್ಪುಕಾಣಿಕೆ ಕಟ್ಟಿ ಲೆಕ್ಕದ ಪೆಠಾರಿಯನ್ನು ಸೇರಿತು. ನಂಬಿ, ಖರ್ಚಿಗೆ ಕಡಿವಾಣ ಹಾಕುವ ಪದ್ಧತಿಯನ್ನು ಬಿಟ್ಟು

ತನಗೆ ತಾನೇ ಧಾರಾಳಿಯಾಗುತ್ತಾನೆ. ಒಂದು ಬಗೆಯ ನೋವು ತುಂಬಿದ ನಿರಾಳತೆಯಲ್ಲಿ ಹೊಸ ಬದುಕಿನ ಕ್ರಮಕ್ಕೆ ಒಡ್ಡಿಕೊಳ್ಳುತ್ತಾನೆ. ಎಂಬ ಈ ಕಥೆ ಹಣದ ಹರಿವು ಮನುಷ್ಯರ ಬದುಕಿನ ವಿನ್ಯಾಸವನ್ನೇ ಬದಲಿಸಿದ್ದನ್ನು ಸೂಚಿಸುತ್ತದೆ. ನಮಗಾಗಿ ಹಣ, ಮಾರುಕಟ್ಟೆ ಎಂದಿದ್ದದ್ದು ಈಗ ಹಣಕ್ಕಾಗಿ, ಮಾರುಕಟ್ಟೆಗಾಗಿ ನಾವು ಎಂಬ ಸ್ಥಿತಿಯನ್ನು ತಲುಪಿದೆ. ಕೃಷಿ ಭಾರತದ ಬೆನ್ನೆಲುಬು ಎಂಬ ಅರ್ಥಶಾಸ್ತ್ರದ ಪುಸ್ತಕದ ವಾಕ್ಯವು ಬಲುದೊಡ್ಡ ವಿಡಂಬನೆಯಂತೆ ಕಾಣತೊಡಗಿತು. ಭಾರತದ ಪ್ರತಿಭಾವಂತರು ವಿದೇಶಿ ಕಂಪನಿಗಳ ಕೂಲಿಯಾಳುಗಳಾದರು. ಭಾರತದ ಸಂಪನ್ಮೂಲ ವಿದೇಶಗಳನ್ನು ಸೇರಿತು.

ಭಾರತದ ಹೆಣ್ಣುಗಳ ಮೈ ಮಾರುವ ಉದ್ಯೋಗ ಭರದಿಂದ ಬೆಳೆಯಿತು. ಎಂಜಲುಗಾಸಿಗೆ ಐಟಿಬಿಟಿಗಳೆಂಬ ಬ್ರಹ್ಮರಾಕ್ಷಸನನ್ನು ಬೆಳೆಸಿಯಾಯಿತು. ಈ ಮಣ್ಣು ಈ ನೀರು, ಈ ಸಂಪನ್ಮೂಲಗಳ ಹಿತಮಿತ ಬಳಕೆಯಿಂದ, ನಮ್ಮದೇ ಆದ ಪ್ರಗತಿಯ ದಾರಿಯನ್ನು ಶೋಧಿಸಿಕೊಳ್ಳುವ ಅಗತ್ಯವಿದೆ ಎಂಬುದನ್ನು ಸಂಪೂರ್ಣವಾಗಿ ಅಲಕ್ಷಿಸಲಾಯಿತು. ಈ ವಿದ್ಯಮಾನಗಳ ಒಂದು ಭಾಗವೇ ಗಣಿಗಾರಿಕೆ. ಹಣ ಮಾಡುವ ಹಣದ ಮೂಲಕ ರಾಜಕೀಯ ಅಧಿಕಾರವನ್ನು ಪಡೆವ, ಶ್ರೀಮಂತಿಕೆಯ ಮೂಲಕ ಗೌರವವನ್ನು ಪಡೆಯುವ ರೋಗಗ್ರಸ್ಥರಾದ ಭಾರತೀಯರು ನೆಲ ಬಗೆದು ದೋಚಿ ದಿಢೀರ್ ಶ್ರೀಮಂತರಾಗುವ ಹುಚ್ಚು ಹತ್ತಿದಂತೆ ವರ್ತಿಸತೊಡಗಿದರು, ನೆಲದ ಗರ್ಭವನ್ನು ಹೀಗೆ ಗೆಬರಾಡಿ ಟೊಳ್ಳುಮಾಡಿದರೆ ಮುಂದೆ ಸಂಭವಿಸಬಹುದಾದ ಪ್ರಾಕೃತಿಕ ಅಸಮತೋಲನದ ದೂರಗಾಮಿ ಪರಿಣಾಮಗಳ ಕುರಿತು ಯೋಚಿಸಲಿಲ್ಲ. ಗಣಿಗಾರಿಕೆಯ ಧೂಳು ಸುತ್ತಲ ಜನಜೀವನವನ್ನು ಅದೆಂಥ ಅಪಾಯಕಾರಿ ರೋಗಗಳಿಗೆ ತಳ್ಳೀತು ಎಂಬ ಮುಲಾಜು ಕಾಯಲು "ಈ ಭೂಮಿ ನಮ್ಮ ಹಿರಿಯರಿಂದ ಬಂದ ಬಳುವಳಿಯಲ್ಲ. ನಮ್ಮ ಮುಂದಿನ ಮಕ್ಕಳಿಗೆ ನಾವು ಬಿಟ್ಟು ಹೋಗಬೇಕಾದ ಆಸ್ತಿ" –ಎಂಬ ನೈತಿಕ ಎಚ್ಚರದ ಮೊದಲ ಪಾಠವೂ ಇವರುಗಳಿಗೆ ಅರ್ಥವಾಗಲಿಲ್ಲ. ಭೂಮಿ ತನ್ನ ಒಳಪದರವನ್ನು ಟೊಳ್ಳಾಗಿಸಿಕೊಳ್ಳುವುದಿಲ್ಲ. ಅದು ಮೈಕೊಡವಿ ತನ್ನನ್ನು ತಾನು ಸರಿಪಡಿಸಿಕೊಳ್ಳುತ್ತದೆ ಎಂಬ ಜೀವಭಯವೂ ಕಾಡಲಿಲ್ಲ. ಮಣ್ಣುಮಾರಿ ಹಣ ಮಾಡಿಕೊಂಡವರು, ಜನಸಾಮಾನ್ಯರ ಪ್ರಶ್ನೆಯನ್ನು ಕೇಳಿಸಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ನಮ್ಮ ದೇಶದ ಕಾನೂನು, ಭೂಮಿಯ ಹಕ್ಕು ಪಡೆದ ಮಾತ್ರಕ್ಕೆ ಭೂಮಿಯ ಒಳಪದರದಲ್ಲಿರುವ ನಿಧಿ, ನಿಕ್ಷೇಪಗಳ ಹಕ್ಕೂ ಸಿಕ್ಕಹಾಗೇ ಎಂದು ಒಪ್ಪುವುದಿಲ್ಲ. ಜಾಗದ ಒಡೆತನ ಖಾಸಗಿಯವರದ್ದಾದಾಗಲೂ, ಭೂಮಿಯ ಒಳಗಿನ ಸಂಪತ್ತಿಗೆ ಸರ್ಕಾರ ಒಡೆತನವನ್ನು ದಾಖಲಿಸುತ್ತದೆ. ತನ್ನ ಜಾಗೆಯಲ್ಲಿ ಸಿಕ್ಕ ನಿಧಿಯ ಬಳಕೆಯ ಹಕ್ಕು ಜಾಗದ

ಮಾಲೀಕನದಲ್ಲ. ಈ ಎಲ್ಲ ಕಾನೂನಾತ್ಮಕ ತೊಡಕುಗಳಿದ್ದಂತೆ ಭವ್ಯ ಭಾರತದ ದೇಸೀ ಬಂಡವಾಳಗಾರರು ಮಣ್ಣ ಗರ್ಭವನ್ನೇ ಎತ್ತಿ ಮಾರಿದರು. ಕರ್ನಾಟಕದ ಬಳ್ಳಾರಿ ಅದಕ್ಕೊಂದು ಅತ್ಯಂತಿಕ ನಿದರ್ಶನವಾಗಿ ಹೋಯಿತು. ಬಹುಶಃ ಜನಸಮುದಾಯವು ಬಾಳಿ-ಬದುಕಿದ ಊರು ಹೀಗೆ ಮನುಷ್ಯರ ಕೊಳ್ಳುಬಾಕತನದಿಂದಾಗಿ ದುರ್ಗತಿ ಹಿಡಿದ, ಇನ್ನೊಂದು ಉದಾಹರಣೆ ಚರಿತ್ರೆಯಲ್ಲಿ ಸಿಗಲಾರದೇನೋ.

ಭಾರತೀಯ ಚಾರಿತ್ರಿಕ ಕಥನದಲ್ಲಿ ಭಾರತೀಯರ ವಿಸ್ಮೃತಿಯ ಸಂಪುಟ ಬಲು ದೊಡ್ಡದಿದೆ. ನಿನ್ನೆಯ ತಪ್ಪುಗಳನ್ನು ಇಂದು ಮತ್ತೆ ಹೊಸದಾಗಿಸಿಕೊಳ್ಳುತ್ತ ನಡೆಯುವ ಕಾರಣಕ್ಕಾಗಿಯೇ, ಇಂದಿಗೂ ಆ ರಣಗಾಯಗಳನ್ನು ಮರಳಿ ಕೀವಾಡಿಸಿಕೊಳ್ಳುತ್ತಿರುವುದಕ್ಕಾಗಿಯೇ – ಜಗತ್ತಿನಲ್ಲಿಯೇ ಪ್ರತಿಭಾವಂತ ಮಾನವ ಸಂಪನ್ಮೂಲವನ್ನೂ ಶಕ್ತಿಯುತ ಪ್ರಾಕೃತಿಕ ಸಂಪನ್ಮೂಲವನ್ನು ಹೊಂದಿಯೂ ತೆವಳುತ್ತಿರಬೇಕಾಗಿದೆ. ಸ್ವದೇಶೀ ಮಂತ್ರ ಪಠಿಸುವವರೇ, ಮಾತೃದೇವೋಭವ ಎನ್ನುವವರೇ ತಾಯ್ನೆಲವನ್ನು ಮಾರಿದ ಲಜ್ಜೆಗೇಡಿ ಚರಿತ್ರೆಯನ್ನು ಮರೆಯದ ಹಾಗೆ –ಕನ್ನಡದ ಕಥನಗಳು ಅವುಗಳನ್ನು ಸೃಜನಶೀಲ ಎಚ್ಚರವಾಗಿ ದಾಖಲಿಸಿವೆ. ಭಾರತದ ನಿಜವಾದ ಜನಚರಿತ್ರೆ ಇರುವುದು ಇಂತಹ ಸೃಜನಶೀಲ ದಾಖಲೆಗಳಲ್ಲಿಯೇ ಅಲ್ಲವೇ? ಇತಿಹಾಸ ನಿರ್ಮಾಣದ ಕಲ್ಪನೆಯೇ ಭಾರತೀಯರಿಗಿಲ್ಲ ಎಂದು, ಏಕಮಾದರಿಯ ಇತಿಹಾಸವನ್ನು ರಚಿಸುತ್ತ; ಭಾರತೀಯರ ಸೌಹಾರ್ದತೆಯ ಮೂಲವನ್ನೇ ಸರ್ವನಾಶ ಮಾಡಿದವರು ಬ್ರಿಟೀಷರು. ಟಿಪ್ಪುವಿನ ಕುರಿತ ಓರಿಯಂಟಲ್ ಮತ್ತು ಬ್ರಿಟೀಷ ಮಾದರಿಯ ಇತಿಹಾಸಕ್ಕೂ ಜನಪದರು ಸೃಜನಶೀಲವಾಗಿ ರೂಪಿಸಿಟ್ಟ ಚರಿತ್ರೆಗೂ ಇರುವ ವ್ಯತ್ಯಾಸವನ್ನು ಗಮನಿಸಬೇಕು. ಈ ಹಿನ್ನೆಲೆಯಲ್ಲಿ ಅಂತಹ ಚಾರಿತ್ರಿಕ ಮಹತ್ವ ಕೂಡ ಗಣಿಗಾರಿಕೆಯ ಕಥೆಗಳಿಗಿವೆ. ಈ ಮಾದರಿಯ ಕಥೆಗಳಲ್ಲಿಯೇ ವಸುಧೇಂದ್ರ ಅವರ 'ಕೆಂಪುಗಿಳಿ' ಪ್ರಾತಿನಿಧಿಕವಾಗಿದೆ.

ಈ ಕಥೆ, ಬಂಡವಾಳವಾದದ ಪರಿಣಾಮವಾದ ಗಣಿಗಾರಿಕೆಯು ನಮ್ಮ ಬದುಕಿಗೆ ಧುತ್ತನೇ ಅವತರಿಸಿದ್ದಲ್ಲ. ಆಧುನಿಕತೆಯ ಸಂದರ್ಭದಲ್ಲಿಯೇ ನಾವು ಅನುಸರಿಸತೊಡಗಿದ, ಆರಾಧಿಸತೊಡಗಿದ ವಸಾಹತುಶಾಹಿಯ ಮಾದರಿಯು ಮುಂದೆ ನವವಸಾಹತುಶಾಹಿಯ ಆಗಮನಕ್ಕೆ ಸ್ವಾಗತ ಫಲಕವನ್ನು ತೂಗಿತ್ತು. ಈ ವೈಚಾರಿಕತೆಯನ್ನು ಕಥೆಯೊಳಗಣ ಸಹಜ ಸರಳ ನಡೆಯಾಗಿ ವಸುಧೇಂದ್ರ ಕಾಣಿಸುತ್ತಾರೆ. ಮಾಸ್ತಿ ಕಥನ ಮಾದರಿಯ ಸಾರ್ಥಕ ಮುನ್ನಡೆಯೊಂದು ಈ ಕಥಾಭಿತ್ತಿಯಲ್ಲಿದೆ.

ಕಥೆ ಪ್ರಾರಂಭವಾಗುವುದು, ಸ್ವ ನಿರೂಪಣಾ ವಿಧಾನದಲ್ಲಿ. ಶಾಲೆಯಲ್ಲಿ ಬುದ್ಧಿವಂತನೆಂದು ಬೀಗುತ್ತಿದ್ದ ಹುಡುಗ 'ನಮ್ಮ ಹೊಲ' ಎಂಬ ಕನ್ನಡ ಪ್ರಬಂಧ ಬರೆಯಲು ಹೋಗಿ, ಹೊಲದ ಬಗ್ಗೆ ಏನೂ ತಿಳಿಯದ್ದರಿಂದ ಅಸಡ್ಡಾಳ ಬರೆದು, ತನ್ನ ಕಲ್ಪಿತ ಊಹಾಪೋಹಗಳಿಂದಾಗಿ ಮಾಸ್ತರರಿಂದ ಬೈಯಿಸಿಕೊಂಡು; ಸಹಪಾಠಿಗಳಿಂದ ನಗೆಯಿಸಿಕೊಂಡು ಕಣ್ಣೀರಾಗಬೇಕಾಗುತ್ತದೆ. ಮಾಸ್ತರಿಗೆ ಸಿಟ್ಟು ನೆತ್ತಿಗೇರಿ, 'ಮರದಾಗ ಉಳ್ಳಾಗಡ್ಡೀ ಸುರಿತಾವೇನಲೇ? ಈ ಬಳ್ಳಾರಿ ಜಿಲ್ಲೆ ಮಧ್ಯದಾಗ ಸಮುದ್ರ ಬಂದೈತೇನಲೇ? ಯಾವತ್ತಾದ್ರೂ ಹೊಲಕ್ಕ ಹೋಗಿದ್ದೋ ಇಲ್ಲೋ?' ಎಂದು ಬೈದರು. ಪ್ರಬಂಧಕ್ಕೆ ಸೊನ್ನೆ ಹಾಕಿ ಕೊಟ್ಟರು. ಮನೆಗೆ ಬಂದರೆ, ಮುದ್ದು ಮಾಡಿ ರಮಿಸಿ ಕೇಳಿದ ಅಮ್ಮನ ಕೈಗೆ ತಕರಾರು ಅರ್ಜಿಕೊಟ್ಟಂತೆ ಪ್ರಬಂಧ ಕೊಟ್ಟರೆ ಮೊದಲು ಅವಳೂ ಬಿದ್ದು ಬಿದ್ದು ನಕ್ಕಳು. ಆಮೇಲೆ, 'ನೂರಾರು ಎಕರೆ ಹೊಲ ಉತ್ತಿ ಬಿತ್ತಿದವರ ಮನೀ ಮಕ್ಕಳಿಗೆ ಎಂಥಾ ಗತಿ ಬಂತಲ್ಲೋ' ಎಂದು ಪೇಚಾಡಿದಳು. ಅಪ್ಪ ಮನೆಗೆ ಬಂದ ಮೇಲೆ ಇದೇ ವಿಷಯವಾಗಿ ಅಪ್ಪ-ಅಮ್ಮನ ಮಧ್ಯೆ ಜಟಾಪಟಿಯೂ ನಡೆದು ಹೋಯಿತು. ಆಗ ಅಮ್ಮನಿಂದ ತಿಳಿದದ್ದು, ತಾತನಿಗಿದ್ದ ನೂರಾರು ಎಕರೆ ಹೊಲ. ಸುಗ್ಗಿ ಧಾನ್ಯ ಮನೆಗೆ ಬರುವಾಗ ಅರ್ಧ ಕಿಲೋಮೀಟರ್‌ವರೆಗೆ ಸರದಿಯಲ್ಲಿ ನಿಂತಿರುತ್ತಿದ್ದ ಎತ್ತಿನ ಬಂಡಿಗಳು. ಆ ಮನೆಯಲ್ಲಿದ್ದ ಅಡಕಲು ಕೋಣೆ. ಅಲ್ಲಿ ಧಾನ್ಯ ಸಂಗ್ರಹಿಸಿ ಇಡುತ್ತಿದ್ದುದು. ತಲೆಬಾಗಿ ಒಳಬರಲು ಬಾಗಿಲು ಗಿಡ್ಡವಾಗಿಟ್ಟಿದ್ದು. ಅಲ್ಲಿ ಮನೆ ಒಳ-ಹೊರಗೆಲ್ಲ ಚೆಲ್ಲಾಡಿರುತ್ತಿದ್ದ ಮಕ್ಕಳಾಟದ ಕಾಳುಗಳು. –ಇಂತಹ ರೈತಾಪಿ ಬದುಕು ಬದಲಾದ ಕಾಲಕ್ಕೆ ಒಗ್ಗಿಕೊಳ್ಳುವ ಹಟದಲ್ಲಿ ಕಾಣೆಯಾಯಿತು.

ಆರು ಗಂಡು, ನಾಲ್ಕು ಹೆಣ್ಣು ಮಕ್ಕಳ ತಾತನ ಕುಟುಂಬದಲ್ಲಿ ಹೆಣ್ಣು ಮಕ್ಕಳ ಮದುವೆಗಾಗಿ ಒಂದಿಷ್ಟು ಹೊಲ ಹೋದವು. ಹಿರಿಯ ಮಗನನ್ನು ಡಾಕ್ಟರ ಮಾಡಬೇಕೆಂಬೋ ತಾತನ ಕನಸಿನ ದುರುಪಯೋಗ ಮಾಡಿಕೊಂಡ ಮಗ ಅತ್ತ ಡಾಕ್ಟರನಾಗಲಿಲ್ಲ. ಇತ್ತ ಅಪ್ಪನನ್ನು ಸುಲಿಯುವುದು ಬಿಡಲಿಲ್ಲ. ಕೊನೆಗೆ ಆಸ್ತಿ ಪಾಲಾಗುವ ಹೊತ್ತಿನಲ್ಲಿದ್ದದು ಬರೀ ೮ ಎಕರೆ. ಅದನ್ನು ನಿರೂಪಕರ ಅಪ್ಪನ ಹೆಸರಿಗೆ ಬರೆಯಲಾಗಿತ್ತು. ಗುಮಾಸ್ತಗಿರಿಯ ಅಪ್ಪನಿಗೆ ಹೊಲದ ದುಡಿಮೆಯ ಪ್ರೀತಿಯೇನೂ ಇರಲಿಲ್ಲ. ಅದನ್ನು ಗುತ್ತಿಗೆಯ ಮೇಲೆ ಈರಪ್ಪನಿಗೆ ಕೊಟ್ಟಿದ್ದ. ಈರಪ್ಪ ಮತ್ತು ನರಸಕ್ಕ ಮನೆಯ ಸಕಲ ಆಗುಹೋಗುಗಳಿಗೂ ಸಹಾಯಕರಾಗಿದ್ದರು. ಆದರೆ ಹೊಲದಿಂದ ತಂದು ಒಪ್ಪಿಸುವುದು ಒಂದೋ ಎರಡೋ ಚೀಲ ಮಾತ್ರ. ಎರಡೂ ಮನೆಗಳ ಸ್ನೇಹ-ಸಾಮೀಪ್ಯ ಮಾತ್ರ ಯಾವ

ಅನುಮಾನಕ್ಕೂ ಎಡೆಗೊಡದಂತೆ ಇತ್ತು. ಈರಪ್ಪನ ಹಿರಿಯ ಮಗ ಕುಮಾರಸ್ವಾಮಿ ಮತ್ತು ನಿರೂಪಕ ಒಂದೇ ಕ್ಲಾಸಲ್ಲಿ ಓದುತ್ತಿದ್ದರು. ಕುಮಾರಸ್ವಾಮಿಗೆ ಬೇಡದಿದ್ದರೂ ಅವನ ಮೈಮೇಲೆ ಇವನ ಹಳೆ ಅಂಗಿಯೇ ಅಲ್ಲದೆ, ಗತ್ಯಂತರವಿರಲಿಲ್ಲ. –ಕಥೆಯ ಈ ಮೊದಲ ಭಾಗವು ಆಧುನಿಕತೆಯ ಶಿಕ್ಷಣದ, ಉದ್ಯೋಗದ ವಸಾಹತು ಮಾದರಿಯ ಬೆನ್ನು ಹತ್ತಿದ ಜನಾಂಗವು ತನ್ನ ಮೂಲ ಬದುಕಿನಿಂದ ಬೆನ್ನು ಹಾಕಿದ ಪರಿಣಾಮವನ್ನು ಹೇಳುತ್ತದೆ. ಸ್ವಾತಂತ್ರ್ಯ ನಂತರದ ನಮ್ಮ ಅಭಿವೃದ್ಧಿಯ ಯೋಜನೆಗಳು ಕೃಷಿಯನ್ನು ಕೃಷಿ ಸಂಬಂಧಿ ಚಟುವಟಿಕೆಗಳನ್ನು ಆದ್ಯತೆಯಾಗಿಸಿಕೊಳ್ಳದಿದ್ದ ಫಲಿತವನ್ನು ಸೂಚಿಸುತ್ತದೆ. ಬಹು ವೈವಿಧ್ಯಮಯ ಪ್ರಾಕೃತಿಕತೆಯನ್ನು ಹೊಂದಿರುವ ದೇಶದಲ್ಲಿ ಏಕರೂಪೀ ಅಭಿವೃದ್ಧಿಯ ಮಾದರಿಯನ್ನು ರೂಪಿಸಿದ್ದರ ದುರಂತವನ್ನು ತೋರುತ್ತದೆ.

ಕಥೆಯ ಎರಡನೆಯ ಭಾಗ, ನಿರೂಪಕನ ಬಾಲ್ಯದ ಸ್ಮೃತಿ ಸಂಪುಟಕ್ಕೆ ಸಂಬಂಧಿಸಿದ್ದು. ಅದರಲ್ಲಿ ಬಲುಮುಖ್ಯವಾಗಿರುವುದು ಈರಪ್ಪ ಹೇಳುವ ರೋಚಕ ಕಥೆಗಳು. ಒಂದು ಕಪ್ ಕಾಫಿಗಾಗಿ ಆತ ಏಳುಹೆಡೆ ಸರ್ಪವನ್ನೇ ತನ್ನ ಹಿರಿಗತ್ತಿಯಿಂದ ಹೆದರಿಸಿಟ್ಟ ಕಥೆ ಕಟ್ಟಬಲ್ಲವನಾಗಿದ್ದ. ಈರಪ್ಪ ಕಟ್ಟಿಗೆ ಸೀಳುತ್ತಿದ್ದ ನೆನಪುಗಳು, ಹಾಗೆ ಹೇಳಿದ ಕಥೆಯಲ್ಲಿ, "ನೋಡ್ತಾ ಇರು ಧಣಿ. ಏಳೆಡೆ ಸರ್ಪನ ಪೂರ್ತಿ ಪಳಗಿಸಿ, ಭೂಮಿಯೊಳಗೆ ಹೂಳಿಟ್ಟಿರೋ ನಿಧೀನ ತೋರ್ಸೋಕೆ ಹೇಳಿ ದೊಡ್ಡ ಶ್ರೀಮಂತ ಆಗಿ, ದೇಶಕ್ಕೇ ರಾಜ ಆಗ್ತೀನಿ" ಎಂದಿದ್ದ. ಇನ್ನೊಂದು, ಅಪ್ಪನೊಂದಿಗೆ ಅಕ್ಕ ಮತ್ತು ಇವನು ಇಬ್ಬರೂ ಹೊಲ ನೋಡಲು, ಹೊಲದ ಪೂಜೆ ಮಾಡಿ ಬರಲು ಹೋಗಿದ್ದು. ಎಷ್ಟೋ ವರ್ಷದ ಮೇಲೆ ಅತ್ತ ಹೊರಟ ಅಪ್ಪನಿಗೆ ದಾರಿಯ ಗುರುತು ಮರೆತು ಹೋಗಿತ್ತು. ಮುಂದೆ ಹೊಲವನ್ನು 'ಈರಪ್ಪನ ಹೊಲ' ಎಂದು ಕೇಳಿ ದಾರಿಯ ಗುರುತು ಕೇಳಬೇಕಾದ ಸಂದರ್ಭವೆ, ಮಣ್ಣನ್ನು ಅಧಿಕಾರದಿಂದ ಆಳಲು ಸಾಧ್ಯವಿಲ್ಲ. ಅದರೊಂದಿಗೆ ಅರಗಿ ಬೆರೆತವರೊಂದಿಗೆ ಮಾತ್ರ ಅದು ತನ್ನ ಗುರುತು ಪತ್ರವನ್ನು ದಾಖಲಿಸಿಕೊಡುತ್ತದೆ –ಎಂಬ ಅಂಶವನ್ನು ನೋಡುತ್ತೇವೆ. ಆವತ್ತು ಹೊಲದಲ್ಲಿ ಗಿಳಿಹಿಂಡು ಅಕ್ಕನ ತಲೆಯ ಮೇಲಿಂದ ಹಾರಿಹೋಗಿದ್ದು. ಈರಪ್ಪ ಟವಲ್ಲು ಬೀಸಿ ಒಂದು ಗಿಳಿಯನ್ನು ಹಿಡಿದು ಅಕ್ಕ–ತಮ್ಮರಿಗೆ ಸ್ಪರ್ಶಕ್ಕೆ ಗಿಳಿಯನ್ನು ಹಿಡಿದು ಕೊಡುವುದು, ಆ ಗಿಳಿಯೋ ಮನುಷ್ಯ ಸ್ಪರ್ಶದಿಂದ ತನ್ನ ಮೈ ಮೈಲಿಗೆಯಾಯಿತೇನೋ ಎನ್ನುವಂತೆ ಕೊಕ್ಕಿನಿಂದ ಉಜ್ಜಿ ಉಜ್ಜಿ ಸ್ವಚ್ಛಗೊಳಿಸಿಕೊಳ್ಳುವುದು. ಅಕ್ಕ–ತಮ್ಮ ಗಿಳಿಯ ಹಸಿರು ಮೈ–ಕೆಂಪು ಕೊಕ್ಕಿನ ಕಾರಣವನ್ನು ಕಂಡುಹಿಡಿಯುವುದು..... ಹೀಗೆ. ಹಸಿರು ಮೆಣಸಿನಕಾಯಿ ತಿನ್ನುವುದರಿಂದ ಅದರ ಮೈಯೆಲ್ಲ

ಹಸಿರಾಗಿದೆಯೆಂದೂ, ಖಾರದ ಮೆಣಸಿನಕಾಯಿ ತಿನ್ನುವುದರಿಂದ ಕೊಕ್ಕು ಕೆಂಪಗಾಗಿದೆ ಎಂದೂ ತೀರ್ಮಾನಕ್ಕೆ ಬರುತ್ತಾರೆ. ಲೇಖಕರು ಆ ಬಾಲ್ಯದ ಸೊಗಸಿನಲ್ಲಿ ಈರಪ್ಪನಿಗೆ ಕಿಚಾಯಿಸುತ್ತಾರೆ. ಗಿಳಿ ಎಷ್ಟು ಸ್ವಚ್ಛ ಇದೆ. ನೀನು ಕೊಳಕ. ದಿನಾ ಸ್ನಾನ ಕೂಡ ಮಾಡುವುದಿಲ್ಲ ಎಂದು. ಈರಪ್ಪ ನಕ್ಕು ಉತ್ತರಿಸಿದ್ದನಂತೆ. "ಚಿಕ್ಕ ಧಣಿ, ನಾನು ಹೊಲದಾಗೆ ಗೇದು ಬೆಳೆ ಬೆಳಸ್ತೀನಿ. ಈ ನನ್ಮಗಂದು ನಾನು ಬೆಳೆದಿದ್ದನ್ನು ಬಂದು ತಿಂದುಕೊಂಡು ಹೋಗ್ತದೆ. ನಂಗೂ ಹಂಗೆ ಯಾರಾದ್ರೂ ತಿಂಬೋದಕ್ಕೆ ಬೆಳೆಸಿಕೊಟ್ಟರೆ, ನಾನೂ ದಿನಾ ಸ್ನಾನ ಮಾಡ್ತೀನಿ." ಎಂದು. ಈರಪ್ಪನ ಮಾತಿನಲ್ಲೆ ದುಡಿವ ವರ್ಗದ ಆತ್ಮಾಭಿಮಾನವಿತ್ತು. ದೇಹಶ್ರಮವನ್ನು ಕನಿಷ್ಠ ಎಂದು ತಿಳಿದು ಬೌದ್ಧಿಕ ಶ್ರಮವೇ ಶ್ರೇಷ್ಠ ಎಂದು ತಿಳಿದ ಮೇಲ್ಜಾತಿಯ ವಾರಸುದಾರಿಕೆಗೆ ಬದುಕಿನ ಸತ್ಯವನ್ನು ಮನವರಿಕೆ ಮಾಡಿಸುವ ಒತ್ತಡವಿತ್ತು. ಜ್ಞಾನದ ಕುರಿತ ಈ ಅವೈಜ್ಞಾನಿಕ ವಿಂಗಡನೆಯನ್ನು ಅದರ ಹಿಂದಿರುವ ಪುರೋಹಿತಶಾಹಿಯ ಜಾಣ್ಮೆಯನ್ನು ಪ್ರಶ್ನಿಸುವ ಇರಾದೆಯಿದ್ದಂತೆ ಇತ್ತು. ಈರಪ್ಪನಿಗೂ ಗಿಳಿಗೂ ಇದ್ದ ಸಂಬಂಧದ ನಾತೆಯೇ ಬೇರೆಯಿತ್ತು. ಹೊಲದಲ್ಲಿ ಬೆಳೆದುನಿಂತ ಬೆಳೆಯನ್ನು ತಿನ್ನುವುದು ಮಾತ್ರವಲ್ಲದೆ ಹಾಳೂ ಮಾಡುವ ಗಿಳಿಹಿಂಡು ಎಂದರೆ ನನಗೆ ಸಿಟ್ಟು ಬರ್ತದೆ ಎಂದಿದ್ದ ಈರಪ್ಪ. ಎಳೆಯ ಹುಡುಗನಿಗೆ ಈ ಸಮಸ್ಯೆಯನ್ನು ಪರಿಹರಿಸುವುದು ಸುಲಭವಾಗಿ ಕಂಡಿತ್ತು. ಮುಂದಿನ ಸಲ ಬರುವಾಗ ಬಣ್ಣದ ಪೆಟ್ಟಿಗೆ ತರ್ತೇನೆ. ಗಿಳಿ ಹಿಡಿದು ಅವುಗಳಿಗೆ ಕೆಂಪುಬಣ್ಣ ಬಳಿಯುವೆ. ಆಗವು ಹಸಿರು ಗಿಡದಲ್ಲಿ ಕುಳಿತರೂ ನೀನು ಥಟ್ಟನೆ ಗುರುತು ಹಿಡಿದು ಓಡಿಸಬಹುದು ಎನ್ನುತ್ತಾನೆ. "ಹಸಿರು ಗಿಡದಾಗೆ ಕೆಂಪು ಗಿಣಿಗಳು ಕೂತರೆ ನೋಡಲಿಕ್ಕೆ ಎಷ್ಟು ಛಂದ ಇರ್ತದಲ್ಲೇನೋ? ಗಿಡದ ತುಂಬಾ ದಾಸವಾಳದ ಹೂ ಸುರದಂಗೆ" ಎಂದು ಎರಡೂ ಕೈಗಳನ್ನು ಗಲ್ಲದ ಮೇಲಿಟ್ಟುಕೊಂಡು ಅಕ್ಕ ಕನಸು ಕಂಡಿದ್ದಳು. ಈರಪ್ಪ ಹಾರಿಸಿಬಿಟ್ಟ ಗಿಳಿ ಖುಷಿಯಿಂದ ಕೂಗಿಕೊಳ್ಳುತ್ತ ತನ್ನ ಹಿಂಡಿನ ಕಡೆ ಹಾರಿಹೋಯಿತು.

ಕಥೆಯ ಮೂರನೆಯ ಭಾಗ –ಅಪ್ಪ ಆ ಎಂಟೆಕರೆ ಹೊಲವನ್ನು ಮಾರುವ ಪ್ರಸಂಗಕ್ಕೆ ಸಂಬಂಧಿಸಿತ್ತು. ಶಾಣ್ಯಾ ಆದರೂ ಗುಮಾಸ್ತ ಮಾತ್ರ ಆಗಿದ್ದ ಅಪ್ಪನಿಗೆ, ಮಗನ ಓದಿಸುವಿಕೆಯ ಖರ್ಚು ವೆಚ್ಚ ಸರಿದೂಗಿಸುವಲ್ಲಿಯೇ ಸಾಕುಸಾಕಾಗಿತ್ತು. ಮಗಳ ಮದುವೆಗೆ ಹೊಲ ಮಾರದೆ ಬೇರೆ ಗತ್ಯಂತರವಿರಲಿಲ್ಲ. ನಗರದಲ್ಲಿದ್ದು ಓದುತ್ತಿದ್ದ ಮಗನಿಗೆ ಅಪ್ಪ, ಒದ್ದೆ ದನಿಯಿಂದ ವಿಷಯ ತಿಳಿಸಿದ್ದ. ಹೊಲ ಮಾರುವುದಕ್ಕೆ ಒಪ್ಪಿಗೆ ಕೇಳಿದ್ದ. "ಹಿರಿಯರಿಂದ

ಬಂದ ಆಸ್ತಿನ್ನ ಮಾರಲಿಕ್ಕೆ ದುಃಖ ಆಗ್ತದೋ..." ಎಂದು ಒದ್ದಾಡುತ್ತಲೇ, ಯಾವುದೋ ಅಪರಾಧಿ ಪ್ರಜ್ಞೆಯಿಂದ ಕುಸಿಯುತ್ತಲೇ ಅಪ್ಪ ಸಹಿ ಮಾಡಿಸಿದ್ದರು. ಸಣ್ಣಗೆ ನಡುಗುತ್ತಿದ್ದ ಅಪ್ಪನ ಹಸ್ತವನ್ನು ತನ್ನ ಬೊಗಸೆಯಲ್ಲಿ ಹಿಡಿದು ಸಮಾಧಾನಿಸಿದ್ದು ನೆನಪಾಗುತ್ತಿದೆ. ಹೊಲ ಮಾರಲು ಈರಪ್ಪನ ಒಪ್ಪಿಗೆಯೂ ಬೇಕಿತ್ತು. ಗೋಪಣ್ಣ ಮಾಸ್ತರು, "ಇಷ್ಟು ವರ್ಷ ಅದನ್ನ ಉತ್ತಿ ಬಿತ್ತಿ ನೋಡಿಕೊಂಡಿ ನೀನು. ನಿನ್ನ ಹೊಟ್ಟೆ ಮೇಲೆ ಕಾಲು ಇಡುವಂಥಾ ದುಷ್ಟತನ ಯಾರಿಗೂ ಇಲ್ಲ. ಇಕೋ. ಇದಿಷ್ಟೂ ನಿಂಗೇ ಅಂತ ಕೊಟ್ಟುಬಿಡ್ತೀನಿ."||೫||"ಇದನ್ನ ತಗೊಂಡು ಮಂಗಳಕಾರ್ಯ ನಿರ್ವಿಘ್ನ ಆಗೋ ಹಂಗೆ ಈ ಪತ್ರಕ್ಕೆ ಹೆಬ್ಬೆರಳು ಒತ್ತಿಬಿಡು" ಎಂದರು ಈರಪ್ಪನಿಗೆ. ಅವನ ಕೈಗೆ ೫೦೦೦ ರೂಪಾಯಿಗಳನ್ನಿಟ್ಟರು. ಅಷ್ಟು ದೊಡ್ಡ ಮೊತ್ತವನ್ನು ಜೀವಮಾನದಲ್ಲಿಯೇ ನೋಡಿರದಿದ್ದ ಈರಪ್ಪ ತತ್ತರಿಸಿಹೋದ. ನಡುಗುತ್ತಲೇ ಹೆಬ್ಬೆರಳು ಒತ್ತಿದ. ಕಾಸಿಂಸಾಬರು ಈರಪ್ಪನ ಮಗ ಕುಮಾರಸ್ವಾಮಿಯನ್ನು ಕರೆದಾಗ, ಅಂವ ದೊಡ್ಡವರಿಗೇ ತಿರುಗಿ ಮಾತನಾಡಿದ್ದು, ಸಹಿ ಮಾಡಲು ಒಪ್ಪದಿದ್ದುದು, ಈರಪ್ಪ ಅಲ್ಲೇ ಮೂಲೆಯಲ್ಲಿದ್ದ ಮಡಿಕೋಲಿನಿಂದ ಕುಮಾರಸ್ವಾಮಿಯನ್ನು ಹಿಗ್ಗಾಮುಗ್ಗಾ ಬಡಿದಿದ್ದು, ಕಡೆಗವನು ಸಹಿ ಹಾಕಿದ್ದು –ಹೀಗೆ ಏನೆಲ್ಲ ನಾಟಕೀಯ ವಿದ್ಯಮಾನಗಳು ನಡೆದುಹೋಗಿದ್ದವು. ಆವತ್ತು ಮೊದಲನೇ ಸಾರಿ ಈರಪ್ಪ ಕಾಫಿ ಕುಡಿಯದೆ ಎದ್ದು ಹೋಗಿದ್ದ. ರಾತ್ರಿ ಕುಡಿದು ಬಂದು, ಏನೆಲ್ಲ ಬಡಬಡಿಸಿದ್ದ.

ಈ ಎಲ್ಲ ನಡೆದು ಹೋಗಿದ್ದ ಘಟನೆ ಮರಳಿ ನೆನಪಾಗುತ್ತಿರುವುದು ಕಥೆಯ ನಾಲ್ಕನೆಯ ಮತ್ತು ಕಡೆಯ ಭಾಗದಲ್ಲಿ. ಊರುಬಿಟ್ಟುಬಂದು ಸುಮಾರು ಇಪ್ಪತ್ತು ವರ್ಷಗಳ ನಂತರ. ಮರಳಿ ಊರಿನ ಮಣ್ಣಿಗೆ ಕಾಲಿಟ್ಟಾಗ. 'ನಮ್ಮೂರು ಅಂತ ಹೇಳಿಕೊಳ್ಳಲು ಬರೀ ನೆನಪುಗಳು ಮಾತ್ರ ಆ ಊರಿನಲ್ಲಿ ಇದ್ದವೇ ಹೊರತೂ ಬೇರೇನೂ ಇಲ್ಲ' ಎಂಬ ಸ್ಥಿತಿಯಲ್ಲಿ. ಇದ್ದ ಊರಿನ ಮನೆಯು ಜುಜುಬಿ ಅನ್ನಿಸಿ ಮಾರಿಯೂ ಆಗಿತ್ತು. ಬೆಂಗಳೂರಿನಲ್ಲಿ ಮನೆ ಖರೀದಿಯೂ ಆಗಿತ್ತು. ಊರಿನ ಮನೆ ಮಾರಿದ ದುಡ್ಡಿನಲ್ಲಿ ಬೆಂಗಳೂರಿನಲ್ಲಿ ಒಂದು ಬಚ್ಚಲು ಮನೆ ಖರೀದಿಸಲೂ ಆಗುವುದಿಲ್ಲ ಎಂದು ನಗೆ ಆಡಿಕೊಂಡಿದ್ದೂ ಆಗಿತ್ತು. ಆದರೆ... ಕಲಿತ ಶಾಲೆಯ ಕಾರ್ಯಕ್ರಮಕ್ಕೆ ಮೇಷ್ಟ್ರು ಒತ್ತಾಯದಿಂದ ಕರೆದಿದ್ದಕ್ಕೆ ಹೋಗಿದ್ದ ಸಂದರ್ಭ ಇದಾಗಿತ್ತು.

ಎಲ್ಲ ಬದಲಾಗಿತ್ತು. ಬದಲಾಗಲೇ ಬೇಕಾದ ೨೦ ವರ್ಷಗಳ ಅಂತರದಲ್ಲಿ ಹೇಗೋ ಹಾಗಲ್ಲ. ವಿಚಿತ್ರವಾಗಿ ಬದಲಾಗಿತ್ತು. ಎಲ್ಲ ಹುಡುಗಿಯರೂ ಚೂಡಿದಾರ ಹಾಕಿದ್ದರು. ತಾವು

ಕಲಿಯುತ್ತಿದ್ದ ಕಾಲದಲ್ಲಿ ಉತ್ತರ ಭಾರತದಿಂದ ಬಂದಿದ್ದ ಒಬ್ಬಳೆ ಹುಡುಗಿ ಹಾಕುತ್ತಿದ್ದ ಚೂಡಿದಾರ, ಅದಕ್ಕಾಗಿ ಅವಳು ಮಾಸ್ತರಿಂದ ಬೈಯಿಸಿಕೊಂಡಿದ್ದು ನೆನಪಾಗುತ್ತಿದೆ. ಮಕ್ಕಳೆಲ್ಲ ಇಂಗ್ಲೀಷಿನಲ್ಲಿ ಮಾತನಾಡಲು, ವಸ್ತು ಪ್ರದರ್ಶನದ ವಿವರಣೆ ಕೊಡಲು ಒದ್ದಾಡುತ್ತಿದ್ದರು. 'ಕನ್ನಡದಲ್ಲೇ ಹೇಳ್ರೋ' ಎಂದರೆ 'ಮಾಸ್ತರು ಇಂಗ್ಲೀಷಿನಾಗೆ ಹೇಳಬೇಕು ಅಂತ ಹೇಳ್ಯಾರೆ ಸಾರ್' ಎಂದಿದ್ದರು. ಇಡೀ ಶಾಲೆಯ ಮಕ್ಕಳಿಗೆ ಭರ್ಜರಿ ಊಟದ ವ್ಯವಸ್ಥೆ ಮಾಡಲಾಗಿತ್ತು. ಎರಡು ಚಾಕಲೇಟ್ ಸಿಕ್ಕರೆ ಹೆಚ್ಚಾಗಿದ್ದ ತಮ್ಮ ಕಲಿಕೆಯ ಕಾಲ ನೆನಪಾಗಿ, 'ಇಷ್ಟೊಂದು ದುಡ್ಡು ಎಲ್ಲಿಂದ ಬರ್ತದೋ? ಎಂದು ಕೇಳಿದರೆ; ಆತ 'ಮೈನ್ಸ' ಎಂಬ ಮಂತ್ರಾಕ್ಷರ ಹೇಳಿ ಸುಮ್ಮನಾಗಿಬಿಟ್ಟಿದ್ದ. ಅದೊಂದು ಒಡೆಯಬಾರದ ರಹಸ್ಯವೇನೋ ಎನ್ನುವಂತೆ. ಇಡೀ ಊರು, ಮೈನ್ಸ ಸಾಗಾಟದ ಕಾರಣಕ್ಕೆ, ಹಿಂದೊಮ್ಮೆ ಇಲ್ಲಿ ರಸ್ತೆಯಿತ್ತು. ಎಂಬ ಅಂದಾಜೂ ಬರದಂತೆ ತಗ್ಗುದಿನ್ನೆಯಾಗಿ ಹೋಗಿತ್ತು. ಕೆಂಪು ಧೂಳಿನಿಂದ ಮುಚ್ಚಿ ಹೋದ ಜಗತ್ತು. ಹುಣಸೆ ಮರ, ಹಣ್ಣು, ಪೊದೆ, ಲೈಟಿನ ಕಂಬ ಎಲ್ಲವೂ ಕೆಂಪೋ ಕೆಂಪು. ಹೊಲವಿದ್ದ ಆ ಜಾಗೆಯೀಗ ಒಂದು ಎಕರೆಗೆ ಒಂದು ಕೋಟಿ ಬೆಲೆಬಾಳುವ ಮೈನ್ಸ ಖಜಾನೆಯಾಗಿ ಬದಲಾಗಿತ್ತು. ಆ ಮಣ್ಣಿನ ದರ ಕೇಳಿದರೆ ಎಂತಹ ಸಾಫ್ಟವೇರ್ ಸಂಪಾದನೆಯೂ ಜುಜುಬಿ ಅನ್ನಿಸತೊಡಗಿತ್ತು.

ಈ ಕಥೆಯ ಶಕ್ತಿ ಇರುವುದೇ ಅದು, ಅತ್ಯಂತ ಸಣ್ಣ ಸಣ್ಣ ವಿವರಗಳನ್ನೂ ಬಿಡದಂತೆ, ಜಾಗತೀಕರಣದ ಸಾಂಸ್ಕೃತಿಕ ಪರಿಣಾಮವನ್ನು ಕಾಣಿಸುವಲ್ಲಿ. ಉತ್ತರ ಭಾರತದ ಚೂಡಿದಾರ್ ಈಗ ದಕ್ಷಿಣ ಭಾರತದ ಯೂನಿಫಾರಂ ಆಗಿ ಬದಲಾಗಿರುವ ಕಾರಣ, ಉತ್ತರದ ಆವಾಹನೆಗೆ, ಉತ್ತರದ ಆರಾಧನೆಗೆ, ಉತ್ತರವೇ ಸರ್ವಶ್ರೇಷ್ಠ ಎಂಬ ಭ್ರಮೆಯನ್ನು ಹುಟ್ಟುಹಾಕಿದ್ದರ ಪರಿಣಾಮ. ಒಂದು ಸಂಸ್ಕೃತಿ ತನ್ನ ಗುಣ ಸ್ವರೂಪವನ್ನು ಬಿಟ್ಟುಕೊಟ್ಟು ಅಲ್ಲಿ ಇನ್ನೊಂದು ಸಂಸ್ಕೃತಿಯನ್ನು ಪ್ರತಿಷ್ಠಾಪಿಸಿಕೊಳ್ಳುವಾಗ, ಆ ಮತ್ತೊಂದು ಸಂಸ್ಕೃತಿಯ ಯಾಜಮಾನ್ಯವನ್ನು ಒಪ್ಪಿಕೊಂಡಿರುತ್ತದೆ. ಉತ್ತರ ಭಾರತ ಇಂದು ಉಡುಪಾಗಿ, ಊಟವಾಗಿ, ಭಾಷೆಯಾಗಿ, ಆಚರಣೆಯಾಗಿ ದಕ್ಷಿಣದ ಮೇಲೆ ಸವಾರಿ ಮಾಡುತ್ತದೆ. ಮಾಧ್ಯಮಗಳ ಮೂಲಕ ಬಂಡವಾಳಶಾಹಿಯು ಅಂತಹ ಒಪ್ಪಿಗೆಯನ್ನು ಹರಡುತ್ತದೆ. ಮಾರುಕಟ್ಟೆಯಲ್ಲಿ ಲಾಭ ದೋಚಲು, ಏಕ ಮಾದರಿಯ ಉತ್ಪನ್ನಗಳನ್ನು ಲಾರ್ಜಸ್ಕೇಲಿನಲ್ಲಿ ಉತ್ಪನ್ನಮಾಡಲು ಇದಕ್ಕಿಂತ ಸುಲಭವಾದ, ಲಾಭದಾಯಕವಾದ ಮತ್ತೊಂದು ದಾರಿಯಿಲ್ಲ. ಮಕ್ಕಳು ಶಾಲೆಯಲ್ಲಿ ಬಳಸುತ್ತಿರುವ ಇಂಗ್ಲೀಷು. ಈ ಇಂಗ್ಲೀಷು ಭಾರತಕ್ಕೆ ಬರೀ ಒಂದು ಭಾಷೆಯಲ್ಲ. ಈ ನೆಲದ ಸಂಪತ್ತನ್ನು ಲೂಟಿಮಾಡಿ, ಅಭಿವೃದ್ಧಿಯ ತಪ್ಪು ಮಾದರಿಯನ್ನು ನಿರ್ಧರಿಸಿ

ಇಟ್ಟುಹೋದ ಯಾಜಮಾನ್ಯದ ವಸಾಹತು ಸಂಸ್ಕೃತಿಯ ಹೇರಿಕೆಯ ನಿದರ್ಶನ. ಇಂಗ್ಲೀಷ ಕಲಿತರೆ ಮಾತ್ರ ಉದ್ಯೋಗ, ಇಂಗ್ಲೀಷ ಕಲಿತರೆ ಮಾತ್ರ ಮೋಕ್ಷ ಎಂಬ ಭ್ರಮೆಯನ್ನು ಬಿತ್ತಿ ಬೆಳೆದುಕೊಳ್ಳಲಾಗಿದೆ. ಒತ್ತಾಯದಿಂದ ಇಂಗ್ಲೀಷನ್ನು ಮಕ್ಕಳ ಮನಸ್ಸಿನ ಮೇಲೆ ಹೇರಲಾಗುತ್ತದೆ. ಆ ಭಾಷೆಯನ್ನು ಒಪ್ಪಿಕೊಂಡ ಮನಸ್ಸು, ಈ ಸಂಸ್ಕೃತಿಯ ವಿಶಿಷ್ಟತೆಗಳನ್ನು ಗ್ರಹಿಸಿಕೊಳ್ಳುವುದು ಹೇಗೆ ಸಾಧ್ಯ? ಹಾಗಾಗಿಯೇ ಭಾರತದ ಯುವ ಸಮುದಾಯವೀಗ, 'ಬೇರು ಸತ್ತೀಮರವ ಎತ್ತಿ ನಿಲ್ಲಿಸೋ ಪ್ರಭುವೇ' ಎಂದು ಬೇಡಿಕೊಳ್ಳುವಂತಹ ಸ್ಥಿತಿಗೆ ತಲುಪಿದೆ.

ಗಣಿಗಾರಿಕೆಯ ದುಷ್ಪ ಪರಿಣಾಮವನ್ನು ದೃಶ್ಯಚಿತ್ರವಾಗಿ ಕೊಡಲು ಈ ಕಥೆ ಪ್ರಯತ್ನಿಸಿದೆ. "ಅಲ್ಲಿನ ದೃಶ್ಯವನ್ನು ನೋಡಿ ನನಗೆ ಆಘಾತವಾಯ್ತು. ಅಲ್ಲಿ ಹೊಲಗಳೇ ಇರಲಿಲ್ಲ. ಬರೀ ಕೆಂಪು ಧೂಳಿನ ಬಯಲು. ಹೆಜ್ಜೆಯಿಟ್ಟರೆ ಕಮಲದ ಹೂಗಳಿರಬೇಕಾದ ನನ್ನ ಹೊಲದಲ್ಲಿ, ಆ ಕಮಲದ ರಕ್ತ ಚೆಲ್ಲಾಡಿದಂತೆ ಕಾಣುತ್ತಿತ್ತು. ಹೊಲಗಳಲ್ಲಿ ಆಳವಾದ ಕುಣಿಗಳನ್ನು ತೋಡಿದ್ದರು. ಕಣ್ಣು ಹಾಯಿಸಿದಲ್ಲೆಲ್ಲ ಗಣಿಗಾರಿಕೆ. ಅಲ್ಲಿ ಮೊದಲೊಮ್ಮೆ ಬಿತ್ತಿ ಬೆಳೆಯುತ್ತಿದ್ದರೆಂದು ಹೊಸಬರಿಗೆ ಹೇಳಿದರೆ, ಅವರು ದೇವರಾಣೆಗೂ ನಂಬುವಂತಿರಲಿಲ್ಲ. ಹುಡುಕಿದರೂ ಒಂದಿಷ್ಟು ಹಸಿರು ಕಾಣುತ್ತಿರಲಿಲ್ಲ. ನೂರಾರು ಯಂತ್ರಗಳು ಇಡೀ ಬಯಲಿನಲ್ಲಿ ಏಕಪ್ರಕಾರವಾಗಿ ಕೆಲಸ ಮಾಡುತ್ತಿದ್ದವು. ಮಣ್ಣನ್ನು ಒಯ್ಯಲು ಸಾವಿರಾರು ಲಾರಿಗಳು ಸಾಗರೋಪಾದಿಯಲ್ಲಿ ನಿಂತಿದ್ದವು....... ಕೆಲಸ ಮಾಡುತ್ತಿದ್ದ ಜನರೆಲ್ಲ ಮೈಕೈಗೆ ಮಣ್ಣು ಮೆತ್ತಿಕೊಂಡಿದ್ದರು. ಅವರು ಉಸಿರಾಡುವ ಗಾಳಿಯಲ್ಲಿ ಧೂಳಿನ ಹೊರತೂ ಬೇರೇನೂ ಇರಲು ಸಾಧ್ಯವಿರಲಿಲ್ಲ."[೬] –ಯಾವ ವಿವರಣೆಯ ಅಗತ್ಯವೂ ಇಲ್ಲದ ಬಳ್ಳಾರಿಯ ಗಣಿಗಾರಿಕೆಯ ಸ್ಥಿತಿಯಿದು. ಮನುಷ್ಯ ತನ್ನ ಲೋಭಕ್ಕಾಗಿ ಸಹಜೀವಿಗಳನ್ನು ಪ್ರಾಣಾಪಾಯಕ್ಕೆ ಸಿಲುಕಿಸಬಲ್ಲ. ಅವರ ಆರೋಗ್ಯವನ್ನು ಹದಗೆಡಿಸಬಲ್ಲ. ಅವರ ನೆಮ್ಮದಿಯನ್ನೂ ಕಸಿಯಬಲ್ಲ. ಹಣವಂತನಾಗಬೇಕೆಂಬ ದಾಹ ಏನೆಂಥ ಕ್ರೌರ್ಯವನ್ನೂ ನಡೆಯಿಸಬಲ್ಲದು. ಈ ಸ್ಥಿತಿಯನ್ನೇ ಬಸವಣ್ಣ–

ಹಾವ ತಿಂದವರ ನುಡಿಸಬಹುದು
ಗರ ಹೊಡೆದವರ ನುಡಿಸಬಹುದು
ಸಿರಿಗರ ಹೊಡೆದವರ ನುಡಿಸಲು ಬಾರದು ಕಂಡಯ್ಯಾ

ಎಂದು ಹೇಳಿದ್ದು. ಹಣದ ಮದ, ಮನುಷ್ಯರ ವಿವೇಚನಾ ಸಾಮರ್ಥ್ಯವನ್ನೇ ಕಸಿಯಬಲ್ಲದು. 'ಕೆಂಧೂಳಿ' ಕಥೆಯಲ್ಲಿ, ಪ್ರಾಯದ ಮಗನನ್ನು ಕಳೆದುಕೊಂಡಿರುವ ಕಕ್ಕಿಗೆ ಪದೇ ಪದೇ ಕೈ ತೊಳೆದುಕೊಳ್ಳುವ ಚಟ ಶುರುವಾಗಿಬಿಟ್ಟಿದೆ. ಅದು ಅವಳ ಗಮನಕ್ಕೂ ಬರುತ್ತದೆ. ಆದರೆ ಆ ಚಟವನ್ನವಳು ನಿಯಂತ್ರಿಸಲಾರಳು. ಊರಿಡೀ ಮೈನ್ಸ ಲಾರಿಗಳು ಹೊಕ್ಕಾಡಿ, ತಾಟಿಗೆ ಬಡಿಸಿಕೊಂಡ ಊಟ, ತುತ್ತಾಗುವಷ್ಟರಲ್ಲಿ ಒಂದು ಪೊರೆ ಧೂಳು ಬಂದು ಮೆತ್ತಿಕೊಳ್ಳುವಾಗ; ಎಲ್ಲಿ ಹೇಗೆ ಶುಚಿಗೊಳಿಸಿದರೂ ಕೈಯಿಟ್ಟಲ್ಲೆಲ್ಲ ಧೂಳೇ ಅಡರಿಕೊಳ್ಳುವಾಗ; ಅವುಗಳನ್ನಂತೂ ಶುಚಿಮಾಡಲಿಕ್ಕಾಗದು. ಕಡೆಗೆ ತನ್ನ ಕೈಯನ್ನೇ ಪದೇ ಪದೇ ಶುಚಿಮಾಡಿಕೊಳ್ಳುವ ಫೋಬಿಯಾಕ್ಕೆ ಒಳಗಾಗಿಬಿಟ್ಟಿದ್ದಳು. ಗಣಿಗಾರಿಕೆ, ಅದಕ್ಕೇನೂ ಸಂಬಂಧವೇ ಇಲ್ಲದ ಜನಸಾಮಾನ್ಯರ ಬದುಕನ್ನೂ ಹೇಗೆ ಈಡಾಡುತ್ತಿದೆ ಎನ್ನುವುದಕ್ಕೆ ಕೆಂಧೂಳಿಯ ಕಕ್ಕಿಯ ಪಾತ್ರ ಒಂದು ಉದಾಹರಣೆ.

ಕಥೆಯ ಕಟ್ಟಕಡೆಯ ಈ ಗಣಿ ಉದ್ಯಮದ ದಿಗ್ಭ್ರಾಂತ ಸ್ಥಿತಿಯಲ್ಲಿ –ಲೇಖಕರು ತಮ್ಮ ಬಾಲ್ಯದ ಸಹಪಾಠಿ ಕುಮಾರಸ್ವಾಮಿಯನ್ನು ಆಯಾಚಿತ್ ಭೇಟಿಯಾಗುತ್ತಾರೆ. ಲೇಖಕರು ಮತ್ತು ಅವರ ಗೆಳೆಯ ಆ ಗಣಿಗಾರಿಕೆಯ ಫೋಟೊ ತೆಗೆಯುತ್ತಿರುವ ಸಂದರ್ಭದಲ್ಲಿ, ಗೆಳೆಯ ಹೇಳಿದ 'ಏಳೆಡೆ ಸರ್ಪದ' ಹೋಲಿಕೆ ಲೇಖಕರಿಗೆ ಒಮ್ಮೆಲೆ ಬಾಲ್ಯದ ಈರಪ್ಪನನ್ನು ನೆನಪಿಸುತ್ತದೆ. ನಮ್ಮೂರಿನ ಭೂಮಿಯನ್ನೆಲ್ಲ ಆಕ್ರಮಿಸಿಕೊಂಡ ಸರ್ಪಗಳು, ಭೂಮಿಯ ಒಳಗಿರುವ ನಿಧಿಯನ್ನೆಲ್ಲ ಹೆಕ್ಕಿ ಹೆಕ್ಕಿ ತೆಗೆದು ಕಾಣದ ದೇಶಕ್ಕೆ ಕೊಟ್ಟು ಕಳಿಸುತ್ತಿವೆ. ಊರನ್ನು ಬರಿದು ಮಾಡುತ್ತಿವೆ. ಯಾರನ್ನೋ ದೇಶವನ್ನೇ ಕೊಳ್ಳುವಷ್ಟು ಶ್ರೀಮಂತರಾಗಿಸುತ್ತಿವೆ. ಉಳಿದವರನ್ನು ಮಣ್ಣು ತಿನ್ನುವ ಹೀನಾಯ ಸ್ಥಿತಿಗೆ ಇಳಿಸುತ್ತಿವೆ ಎಂದು ತೀವ್ರವಾಗಿ ಅನ್ನಿಸತೊಡಗಿತ್ತು.

ಆ ದೈತ್ಯಯಂತ್ರ ಚಾಲಿಸುವ ವ್ಯಕ್ತಿಯನ್ನು ಕೆಳಗಿಳಿಸಿ ಫೋಟೊ ತೆಗೆದು ಮಾತನಾಡಿಸಿದರೆ, ಆತ ಅದೇ ಕುಮಾರಸ್ವಾಮಿಯಾಗಿರುತ್ತಾನೆ. 'ನನ್ನ ಗೊತ್ತು ಹಿಡಿಲಿಲ್ಲೇನು ಧಣಿ? ಕುಮಾರಸ್ವಾಮಿ..... ಈರಪ್ಪನ ಮಗ ಧಣಿ" ಎಂದ. ಒಟ್ಟಿಗೇ ಓದಿದ್ದರೂ ಬಡ ಈರಪ್ಪನ ಮಗ ಕುಮಾರಸ್ವಾಮಿ, ಈಗ ಈ ಯಂತ್ರ ಓಡಿಸೋ ೩೦೦೦ ರೂಪಾಯಿ ಸಂಬಳದವ. ಅವನ ಹೆಂಡತಿಯೂ ಈ ಗಣಿಯಲ್ಲೇ ಕೆಲಸ ಮಾಡ್ತ ಮಕ್ಕಳನ್ನ ಇಂಗ್ಲೀಷ ಮೀಡಿಯಂ ಸ್ಕೂಲಲ್ಲಿ ಓದಿಸ್ತಿದೀನಿ –ಅಂತ ಹೆಮ್ಮೆಯಿಂದ ಹೇಳಿಕೊಂಡ. ಹೊಲ ಕೈ ತಪ್ಪಿದ ಮೇಲೆ ಈರಪ್ಪ ಬೇಗ ಸತ್ತ. ತಾಯಿ ಅದಾಳಿನ್ನು ಅಷ್ಟರಲ್ಲಿ ಹೆಲಿಕ್ಯಾಪ್ಟರ್ ಸದ್ದಾಗಿ,

ಕುಮಾರಸ್ವಾಮಿ ತಮ್ಮ ಧಣಿ ಬಂದ ಅಂತ ಲಗುಬಗೆಯಲಿ ಬೀಳ್ಕೊಂಡ. ಆ ಧಣಿ ಇಡೀ ರಾಜ್ಯವನ್ನೇ ಕೊಳ್ಳುವಷ್ಟು ಶ್ರೀಮಂತನಂತೆ. ೫ ಹೆಲಿಕ್ಯಾಪ್ಟರ್ ಇಟ್ಟುಕೊಂಡಿದ್ದಾನಂತೆ.

ಕಾರಿನ ಮೇಲೆ, ಹುಣಸೆ ಮರದ ಮೇಲೆ ಕೂತ ಕೆಂಪು ಕೆಂಪು ಹಕ್ಕಿಗಳು. ಆಶ್ಚರ್ಯ ಅನ್ನಿಸಿ ಕೇಳಿದರೆ, ಗೆಳೆಯ ನಕ್ಕು ಹೇಳಿದ "ಗಿಣೀನ್ನೋ ಮಾರಾಯ.... ಗೊತ್ತಾಗಲಿಲ್ಲೇನು? ಮೈನ್ಸ ಧೂಳು ಮೆತ್ತಿಕೊಂಡು ಕೆಂಪಗಾಗ್ಯವೆ ಅಷ್ಟೇ...." ಗಿಳಿ ಸ್ವಚ್ಛ ಪ್ರಾಣಿ. ಚೂರು ಕೊಳೆ ಮೆತ್ತಿದ್ರೂ ತೊಳಕೊಳ್ಳುತ್ತಲ್ಲಾ? ಎಂದು ಕೇಳಿದರೆ, ಗೆಳೆಯ ಹೇಳಿದ್ದ –"ಎಷ್ಟು ಅಂತ ಸ್ವಚ್ಛ ಮಾಡಿಕೊಳ್ಳಲಿಕ್ಕೆ ಆಗ್ತದ ಬಿಡು. ಬಿಸಿಲು ಸುರಿದಂಗೆ ಕೆಂಪು ಧೂಳು ಸುರೀತದೆ ಈ ಊರಾಗೆ. ನೀರಾಗ ಮುಳುಗಿ ತೊಳಕೊಳ್ಳೂದಕ್ಕ ಕೆರೀನೂ ಇಲ್ಲ ಈಗ. ಆ ಕೆರೀನೂ ಮೈನ್ಸ ಮಾಡಿ ತೋಡಿಬಿಟ್ಟಾರ. ಅಪರೂಪಕ್ಕ ಮಳೀ ಬಂದರೂ ಕೆಂಪು ನೀರು ಸುರೀತದ...." ನನ್ನೂರು ಊರಾಗಿ ಉಳಿದಿಲ್ಲ. ನರಕವೇ. ನರಕ ಎಂದರೆ ಇದೇ ಅನ್ನಿಸಿತ್ತು. ಅದೇ ಊರಿನಲ್ಲಿ ಕಳೆದ ಆ ಬಾಲ್ಯದ ಬೆಳಸು ನೆನಪಾಗುತ್ತಿತ್ತು. ಅಕ್ಕನಿಗೊಂದು ಮೆಸೇಜ್ ಟೈಪಿಸಿ ಕಳಿಸಿದ. "ಅಕ್ಕಾ, ಕೆಂಪು ಗಿಳಿಗಳನ್ನು ಇವತ್ತು ನೋಡಿದೆ. ಅವು ದಾಸವಾಳದ ಹೂಗಳಂತೆ ಕಾಣುವುದಿಲ್ಲ. ಚರ್ಮ ಸುಲಿದು ಅಂಗಡಿಯಲ್ಲಿ ನೇತುಹಾಕಿದ್ದ ಮಾಂಸದ ತುಂಡುಗಳಂತೆ ಕಾಣುತ್ತವೆ." ಮಾತು ಬೇಡವಾಗಿ ಮೊಬೈಲ್ ಆಫ್ ಮಾಡಿ ಕುಳಿತ.

ಊರಬಿಟ್ಟ ೨೦ ವರ್ಷ –ಎಂದು ಕಥೆಯ ನಾಯಕ ಜ್ಞಾಪಿಸಿಕೊಳ್ಳುವ ಅವಧಿಯನ್ನು ಜಾಗತೀಕರಣ ಪ್ರವೇಶವಾದ ೨೦ ವರ್ಷ ಎಂದು ಅರ್ಥೈಸಿಕೊಂಡು ಓದಬೇಕಾಗಿದೆ. ಈ ಅವಧಿಯಲ್ಲಿ ಬಂಡವಾಳವಾದದ ದಾಳಿಗೆ ಸಮಾಜ ತತ್ತರಿಸಿದೆ. ಯಾವಾತನೋ ಊರು ಆಳುವ ದೊಣ್ಣೆನಾಯಕನಾಗಬೇಕಿದೆ. ಅವನ ಅಧಿಕಾರದ ಜರ್ಬಿಗೆ ಸಾಮಾನ್ಯ ಬದುಕು ಹಳಸುತ್ತಿದೆ. ಗಿಳಿಯಂತಹ ನಿಷ್ಪಾಪ ಜೀವಿಗಳೂ ಹೀಗೆ ಗುರುತು ಕಳೆದುಕೊಂಡು, ಜೀವಂತ ಶವವಾಗಿರುವಾಗ, ಮನುಷ್ಯರ ಕಥೆಯೇನು? ಕುಮಾರಸ್ವಾಮಿಯಂಥವನಿಗೆ ಮಕ್ಕಳು ಇಂಗ್ಲೀಷ ಸಾಲಿ ಕಲ್ತರ ಮಾತ್ರ ಉದ್ಧಾರ ಎಂದು ಹೇಳಿದವರು ಯಾರು? ಕನ್ನಡ ಸಾಲೀಲಿ ಕಲ್ತವನು ಸಾಫ್ಟವೇರ್ ಇಂಜಿನಿಯರ್ ಆಗಿರುವುದು ಕಣ್ಮುಂದೆ ಇದ್ದರೂ ಅದನ್ನು ಮರೆಸುವ ಮಾಯಾಲೋಕ ಯಾವುದು? ವಿಷಕಾರುವ ಸರ್ಪಗಳಿಗೆ ಎಷ್ಟು ಹೆಡೆ? ಎಷ್ಟು ಮೈಯಿ? ಬದುಕನ್ನೇ ವಿಷಯುಕ್ತವಾಗಿಸುವ ಈ ನರಕದ ಬದುಕನ್ನು ತಂದಿರುವ ಬಂಡವಾಳವಾದಕ್ಕೆ ಅದೆಷ್ಟು ಮನ್ನಣೆಯನ್ನು ಕೊಡುತ್ತಿದ್ದೇವಲ್ಲವೇ? ಅರ್ಥಶಾಸ್ತ್ರಜ್ಞರೋ ರಾಜ್ಯಶಾಸ್ತ್ರಜ್ಞರೋ, ಬಂಡವಾಳವಾದದ ಎಂಜಲು

ನೆಕ್ಕುವ ಸಾರ್ಥಕತೆಯಲ್ಲಿ LPG ಯಿಂದ 'ಅಚ್ಛೇದಿನ್ ಆಯೇಗಾ' ಎಂದು ಬಾಯಿಪಾಠದ ಮಾತುಗಳನ್ನು ಹೇಳಬಹುದು. ಆದರೆ, ಸೃಜನಶೀಲತೆಯು ತನ್ನ ಸುತ್ತಲಿನ ಲೋಕಸತ್ಯಕ್ಕೆ ಅನ್ಯಾಯ ಮಾಡದು. ಸಂವೇದನಾಶೀಲ ಪ್ರಜ್ಞೆಗೆ ಮಾತ್ರ ಸತ್ಯವನ್ನು ಹೇಳುವ, ಸತ್ಯವನ್ನು ದಿಟ್ಟವಾಗಿ ಹೇಳುವ, ಅಪ್ರಿಯವಾದ ಸತ್ಯವನ್ನೂ ಪ್ರಿಯವಾಗಿ ಹೇಳುವ ತ್ರಾಣವಿರುತ್ತದೆ. ಕನ್ನಡ ಕಥೆ ಈ ಸಾಧ್ಯತೆಯನ್ನು ತನ್ನದಾಗಿಸಿಕೊಂಡಿದೆ.

ಬಿ. ಶ್ರೀನಿವಾಸ ಅವರ 'ಕಾಣದಾಯಿತೋ ಊರುಕೇರಿ' ಎಂಬ ಕಥೆಯು ತನ್ನ ಶೀರ್ಷಿಕೆಯಲ್ಲಿಯೆ ಗ್ರಾಮಸಮುದಾಯದ ಅಸ್ಥಿರತೆಯನ್ನು ಪ್ರದರ್ಶಿಸುತ್ತದೆ. ಗಣಿಗಾರಿಕೆಯಂತಹ ಕಾಮಗಾರಿಗಳು ಗ್ರಾಮ ಬದುಕಿನ ಮೇಲೆ ಯಾವ ಬಗೆಯ ಪರಿಣಾಮಗಳನ್ನು ಉಂಟುಮಾಡುತ್ತಿವೆ? ಎಂಬ ವಿಷಯವನ್ನು ಈ ಕಥೆಯು ತನ್ನ ಮುಖ್ಯ ಉದ್ದೇಶವನ್ನಾಗಿರಿಸಿಕೊಂಡಿದೆ. ಇಲ್ಲಿ ಮೂಡಿ ಬಂದಿರುವ ಗ್ರಾಮ, ಅಲ್ಲಿನ ಜನರ ಜೀವನ ಪದ್ಧತಿ, ಹಾಗೂ ಪರಿಸರದಲ್ಲಾದ ಪಲ್ಲಟಗಳು ಜಾಗತೀಕರಣದ ಪ್ರಭಾವದಿಂದ ರೂಪಗೊಂಡಿರುವಂತವುಗಳು. ದೇಸೀಯ ಬದುಕಿನಲ್ಲಿ ಆದಂತಹ ಬದಲಾವಣೆಗಳು ಗ್ರಾಮ ಬದುಕಿಗೆ ವ್ಯತಿರಿಕ್ತ ವಾತಾವರಣವನ್ನು ನಿರ್ಮಿಸಿಕೊಟ್ಟಿವೆ. ಇದನ್ನು ಅಲ್ಲಿನ ಜನಸಾಮಾನ್ಯರು ಅರಗಿಸಿಕೊಳ್ಳಲು ಸಾಧ್ಯವೆ? ಅದೆಂದೂ ಸಾಧ್ಯವಿಲ್ಲವೆಂಬುದನ್ನು ಕಥೆಯೊಳಗಿನ ಚಿತ್ರಣಗಳು ನಿರೂಪಿಸುತ್ತವೆ. ಅಂಥದ್ದೊಂದು ದುಸ್ಥಿತಿಗೆ ಗ್ರಾಮೀಣ ಬದುಕು ಒಳಗಾಗಿರುವ ಸನ್ನಿವೇಶಗಳು ವಿವಿಧ ಕಡೆಗಳಲ್ಲಿ ಇಂದು ಕಾಣಸಿಗುತ್ತವೆ. ಅಂತಹ ಗ್ರಾಮವೊಂದನ್ನು ಮುಖ್ಯವಾಗಿರಿಸಿಕೊಂಡು ಅಲ್ಲಿ ನಡೆದ ಗಣಿಗಾರಿಕೆಯು ಆ ಪ್ರದೇಶದ ಮೇಲೆ ಹೇಗೆ ಅತಿಕ್ರಮಣ ಮಾಡಿತೆಂಬುದನ್ನು ಈ ಕತೆಯು ಎಳೆ ಎಳೆಯಾಗಿ ತಿಳಿಸುತ್ತದೆ.

ಗಣಿಧಣಿಗಳನ್ನು ಮಹಾರಾಜರಂತೆ ಬಿಂಬಿಸುವ ಕತೆಯು ಸಾಮಾನ್ಯನ ಬದುಕಿನಲ್ಲಿ ಅವರಾಡುವ ಆಟಗಳನ್ನು ಬಹಳ ಮಾರ್ಮಿಕವಾಗಿ ತೋರ್ಪಡಿಸುತ್ತದೆ. ಜೊತೆಗೆ ಈ ಕಥಾವಸ್ತು ಇಂದಿನ ಸಮಾಜಕ್ಕೆ ಬಹಳ ಹತ್ತಿರದ ಸಂಬಂಧವನ್ನು ಹೊಂದಿದೆ. ಪ್ರಸ್ತುತ ದಿನಮಾನದಲ್ಲಿ ಗಣಿಗಾರಿಕೆಯಂತಹ ಚಟುವಟಿಕೆಗಳು ನಿರಾತಂಕವಾಗಿ ನಡೆಯುತ್ತಿವೆ. ಈ ಮೊದಲು ಗ್ರಾಮೀಣ ಪ್ರದೇಶದಲ್ಲಿ ಕಾಣಿಸಿಕೊಂಡಿದ್ದ ಜೀತಪದ್ಧತಿಯಂತಹ ಮತ್ತೊಬ್ಬರ ಅಧೀನತ್ವಕ್ಕೆ ಒಳಗಾಗುವ ಚಟುವಟಿಕೆಗಳು ಮತ್ತೆ ಸಮಾಜದಲ್ಲಿ ತಮ್ಮ ಅಸ್ತಿತ್ವವನ್ನು ಸ್ಥಾಪಿಸಲು ಪ್ರಯತ್ನಿಸುತ್ತಿವೆ. ಇದಕ್ಕೆ ಗಣಿಗಾರಿಕೆಯಂತಹ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುವ ಕಾರ್ಮಿಕವರ್ಗವು ನಿದರ್ಶನವಾಗಿ ನಿಲ್ಲುತ್ತದೆ. ಅಷ್ಟೇ ಅಲ್ಲದೆ ಗಣಿಗಾರಿಕೆಗೆ ಒಳಪಟ್ಟ ಪ್ರದೇಶ,

ಸುತ್ತಮುತ್ತಲಿನ ಗ್ರಾಮಗಳು ಮತ್ತು ಅಲ್ಲಿನ ಜನಸಮುದಾಯ ಬಹಳಷ್ಟು ಸಮಸ್ಯೆಗಳನ್ನು ಎದುರಿಸಬೇಕಾಗಿದೆ. ಸ್ವತಂತ್ರ ಬದುಕನ್ನು ಕಿತ್ತುಕೊಂಡು ಗುಲಾಮಗಿರಿಗೆ ಬಲವಂತವಾಗಿ ನೂಕುತ್ತಿರುವ ವ್ಯವಸ್ಥೆಯೊಂದು ಗ್ರಾಮಗಳಲ್ಲಿ ನಿರ್ಮಾಣವಾಗುತ್ತಿದೆ. ಜಗತ್ತಿಗೆ ಅನ್ನ ನೀಡುವ ರೈತ ಇಂದು ಅನ್ನಕ್ಕಾಗಿ ಮತ್ತೊಬ್ಬರ ಮುಂದೆ ಕೈ ಚಾಚಿ ನಿಲ್ಲುವಂತಾಗಿದೆ. ಸುಂದರವಾದ ಪರಿಸರದ ಮಧ್ಯೆ ನೆಮ್ಮದಿಯ ಜೀವನ ಕಟ್ಟಿಕೊಟ್ಟಿದ್ದ ಗ್ರಾಮಗಳ ಸ್ಥಿತಿ ಇಂದು ವ್ಯತಿರಿಕ್ತವಾಗಿದೆ. ಅಷ್ಟೇ ಅಲ್ಲದೆ ಜನರ ನಡುವಿನ ಸಂಬಂಧದ ಸೇತುವೆ ನೆಲಕಚ್ಚುತ್ತಿದೆ. ಜೊತೆಗೆ ಗಣಿಗಾರಿಕೆಯ ಧೂಳು ಇಡೀ ಪರಿಸರವನ್ನೇ ನುಂಗಿ ಹಾಕುತ್ತಿರುವುದಲ್ಲದೆ ಜನರ ಆರೋಗ್ಯದ ಮೇಲೆಯೂ ಬಹಳ ಪರಿಣಾಮವನ್ನುಂಟುಮಾಡುತ್ತಿದೆ. ಇಂತಹ ವಿಚಾರಗಳು ಸಂಪೂರ್ಣವಾಗಿ ಕತೆಯನ್ನು ಆವರಿಸಿಕೊಂಡಿವೆ. ಇದನ್ನು ಗಮನಿಸಿದಾಗ ಗಣಿಗಾರಿಕೆಯಂತಹ ಚಟುವಟಿಕೆಗಳು ಗ್ರಾಮ ಬದುಕಿಗೆ ವಿನಾಶಕಾರಿಯಾದ ವಾತಾವರಣವನ್ನು ಸೃಷ್ಟಿಸುತ್ತಿರುವುದು ಸ್ಪಷ್ಟವಾಗುತ್ತದೆ.

ಭರಮಣ್ಣನದು, ಹೆಂಡತಿ ಚಂದ್ರಿ, ಮಗ ನರಸಿಂಹನನ್ನು ಒಳಗೊಂಡ ಒಂದು ಸಣ್ಣ ಕುಟುಂಬ. ರೈತಾಪಿ ವರ್ಗಕ್ಕೆ ಸೇರಿದ ಈ ಕುಟುಂಬವು ಗ್ರಾಮವೊಂದರಲ್ಲಿ ವಾಸವಾಗಿರುತ್ತದೆ. ಕಾಲಾನಂತರದಲ್ಲಿ ಉಳುವ ಭೂಮಿಯನ್ನು ಕಳೆದುಕೊಂಡು ಅದೇ ಊರಿನಲ್ಲಿ ಪರಕೀಯರಂತೆ ಜೀವನವನ್ನು ಸಾಗಿಸಬೇಕಾಗುತ್ತದೆ. ಇಂತಹ ಸ್ಥಿತಿಯನ್ನು ಆತ ತಲುಪಲು ಅಲ್ಲಿ ಪ್ರಾರಂಭವಾದ ಗಣಿಗಾರಿಕೆಯೇ ಮೂಲ ಕಾರಣವಾಗುತ್ತದೆ. ಇದರಿಂದಾಗಿ ಬರೀ ಆ ಕುಟುಂಬ ಮಾತ್ರವಲ್ಲ ಇಡೀ ಊರಿನ ಸಂಪೂರ್ಣ ಚಿತ್ರಣವೆ ಬದಲಾಗುತ್ತದೆ. ಭರಮಣ್ಣ, ಬಾಲ್ಯದಲ್ಲಿ ಕಂಡಿದ್ದ ಕಾಡು–ಮೇಡು, ಅಲ್ಲಿನ ಹಣ್ಣು ಹಂಪಲಗಳು, ಅಂಜಿಕೆ ಹುಟ್ಟಿಸುವಷ್ಟು ಕಗ್ಗಂಟಾಗಿ ಬೆಳೆದ ಗಿಡಮರ, ಕಾಡಿನಿಂದ ಹೊರಸೂಸುವ ಹಸುರಿನ ಗಮಗಮ ವಾಸನೆ ಇವೆಲ್ಲವು ಈಗ ಆತನಿಗೆ ಕನಸು ಮಾತ್ರ, ಏಕೆಂದರೆ ಆ ಪ್ರದೇಶದಲ್ಲಿ ನಡೆಸಲಾದ ಗಣಿಗಾರಿಕೆ ಇವೆಲ್ಲವನ್ನು ಮುಚ್ಚಿಹಾಕಿಬಿಟ್ಟಿದೆ. ಇದರಿಂದ ಜರ್ಜಿತನಾದ ಆತ "ಅರೇ! ನಾನೇನು ಯೋಚಿಸುತ್ತಿದ್ದೆ? ನಾನು ಎಲ್ಲಿದ್ದೇನೆ ನಾನು ಅದೇ ಜಾಗದಲ್ಲಿಯೇ ಇದ್ದೇನೆ. ಹಚ್ಚ ಹಸಿರು ಕಾಡು ಸುಡಗಾಡು ಆದ ಜಾಗದಲ್ಲೇ ನಿಂತಿದ್ದೇನೆ."[೭] ಎಂದು ದಿಗ್ಭ್ರಾಂತನಾಗುವಷ್ಟು ಬದಲಾವಣೆಗಳನ್ನು ಗಣಿಗಾರಿಕೆ ಹೊತ್ತು ತಂದಿದೆ. ಕಳೆದುಹೋಗಿದ್ದನ್ನು ಮತ್ತೆ ಪಡೆಯಲಾಗದು ಎಂದು ತಿಳಿದು, ಹಳೆಯ ನೆನಪುಗಳನ್ನು ಕೆದಕುವುದು ಬೇಡವೆಂದೂ ಎಷ್ಟೇ ಪ್ರಯತ್ನಿಸಿದರೂ ಅವನಿಂದ ಅದು ಸಾಧ್ಯವಾಗುವುದಿಲ್ಲ. ಯೋಚಿಸಿದಂತೆಲ್ಲ ಆತನಿಗೆ ಒಳಗೊಳಗೆ ಆತಂಕ ಹೆಚ್ಚುತ್ತಾ ಹೋಗುತ್ತದೆ. "ಕೆಂಪು ಕಲ್ಲು–ಕೆಂಪು ಮಣ್ಣು, ಕೆಂಪು

ಜನರು–ಗೂರಲು ಕೆಮ್ಮುತ್ತ, ಮಲಗಿದ ಮುದುಕರು–ಪಾರ್ಶ್ವರೋಗಪೀಡಿತರಾಗಿ ನಡೆದಾಡಲೂ ಆಗದೇ ಹಾಸಿಗೆಯಲ್ಲಿಯೇ ಒದ್ದಾಡುವ ಒಂದು ಕಾಲದ ಲಾರಿ ಟಿಪ್ಪರ್‌ಗಳ ಡ್ರೈವರುಗಳು, ಜೀವಗಳ ಲೆಕ್ಕಿಸದ ಸುಡಗಾಡು ಪ್ರಪಂಚವೊಂದರ ಚಕ್ರವ್ಯೂಹದಲ್ಲಿ ತಾನಿದ್ದೇನೆಂಬ ಭಾಸವಾಗುತ್ತದೆ."[೮] ಇದು ಆತನ ಆತಂಕಕ್ಕೆ ಕಾರಣವಾದ ಮುಖ್ಯ ಅಂಶವೆಂದೇ ಹೇಳಬಹುದಾಗಿದೆ. ಇಂದಿನ ಗ್ರಾಮೀಣ ಜನರ ಬದುಕಿನಲ್ಲಿಯೂ ಇಂತಹ ಆತಂಕಗಳು ಸಹಜವಾಗಿಯೆ ಕಂಡುಬರುತ್ತಿವೆ.

ಆ ಊರಿನ ಮತ್ತು ಸುತ್ತಮುತ್ತಲಿನ ಹಳ್ಳಿಗಳ ಜನರ ಆರಾಧ್ಯ ದೇವರಾದ ಗಂಡಿ ನರಸಿಂಹ ದೇವಸ್ಥಾನವು ನಾರಿಹಳ್ಳದ ದಂಡೆಯಲ್ಲಿತ್ತು. ಭರಮಣ್ಣನ ಹೊಲವು ಅದಕ್ಕೆ ಹೊಂದಿಕೊಂಡೆ ಇತ್ತು. ಗಂಡಿ ನರಸಿಂಹ ಆತನ ಮನೆಯ ದೇವರು ಹಾಗೂ ಆರಾಧ್ಯ ದೈವವು ಆಗಿತ್ತು. ಇದರ ಜಾತ್ರೆ ಎಂದರೆ ಭರಮಣ್ಣನಿಗೆ ಎಲ್ಲಿಲ್ಲದ ಹುಮ್ಮಸ್ಸು. ಈತನಿಗಷ್ಟೇ ಅಲ್ಲದೆ ಆ ಊರಿನ ಸಾಮಾನ್ಯ ಜನರಿಗೂ ಮತ್ತು ಮಹಾರಾಜರೆನಿಸಿಕೊಂಡಿದ್ದ ಶ್ರೀಮಂತರಿಗೂ ಅದೇ ಭಾವನೆ ಇತ್ತು. ಹೀಗಾಗಿ ಮೂರು ದಿನಗಳವರೆಗೆ ನಡೆಯುವ ಈ ಜಾತ್ರೆ ಬಹಳ ವಿಜ್ರಂಭಣೆಯಿಂದ ನಡೆಯುತ್ತಿತ್ತು. ಈ ಜಾತ್ರೆಯ ವಿಶೇಷವೇನೆಂದರೆ ಇದು ಬಂಧು–ಬಾಂಧವರ ನಡುವೆ ಸಂಬಂಧವನ್ನು ಗಟ್ಟಿಗೊಳಿಸಲು ಪೂರಕವಾಗಿತ್ತು. ಆದರೆ ಈಗ ಅದನ್ನೆಲ್ಲವನ್ನು ಗಣಿಗಾರಿಕೆಯು ಹೊಡೆದು ಉರುಳಿಸಿದೆ. ಹೀಗಾಗಿ ಊರಿನಲ್ಲಿದ್ದ ಆ ಸಂಭ್ರಮದ ವಾತಾವರಣ ಆತನ ಕಣ್ಣಿಗೆ ಕಾಣಸಿಗುತ್ತಿಲ್ಲ. ಆತನಿಗೆ ಎಲ್ಲವು ಅಯೋಮಯವಾಗಿ ಭಾಸವಾಗುತ್ತಿದೆ. ಜೊತೆಗೆ ಕೇರಿಯ ಜನರ ಬದುಕಿನಲ್ಲಿಯೂ ಸಾಕಷ್ಟು ಬದಲಾವಣೆಗಳಾಗಿರುವುದನ್ನು ಆತ ನೆನಪಿಸಿಕೊಳ್ಳುತ್ತಾನೆ. ಹೊಲದಲ್ಲಿ ಕೆಲಸಮಾಡುತ್ತಿದ್ದ ಸಂದರ್ಭದಲ್ಲಿ ಕಷ್ಟಸುಖಗಳನ್ನು ಹಂಚಿಕೊಳ್ಳಲು ಸಾಯಂಕಾಲ ಒಂದು ಕಡೆ ಜಮಾಯಿಸುತ್ತಿದ್ದ ಜನರ ಗುಂಪು ಕಣ್ಮರೆಯಾಗಿದೆ. ಆ ಜಾಗದಲ್ಲಿ ಟಿ.ವ್ಹಿ. ಮಾಧ್ಯಮ ಕಾಣಿಸಿಕೊಳ್ಳುತ್ತಿದೆ. ಜನರು ಹೊಲಗಳಲ್ಲಿ ಕೆಲಸ ಮಾಡುವುದನ್ನು ನಿಲ್ಲಿಸಿ, ಭೂಮಿಯನ್ನು ಅಗೆಯುವ ಗಣಿಗಾರಿಕೆಯಲ್ಲಿ ತೊಡಗಿಕೊಂಡಿದ್ದಾರೆ. ಇದರಿಂದಾಗಿ ಕೇರಿಯ ಹುಡುಗರು ಹಾಡುಹೇಳುತ್ತ ಕುಣಿದು ಕುಪ್ಪಳಿಸುವುದು, ಜನರ ಮಾತಿನ ಸಪ್ಪಳ, ಪಕ್ಷಿಗಳ ಚಿಲಿಪಿಲಿ ನಾದ ನಿಂತಿದೆ. ಜೊತೆಗೆ ಹಳ್ಳಿಗಳ ಮಧ್ಯೆ ನಡೆದು ಹೋಗುವ ದಾರಿ, ಗಿಡ–ಮರ ಬಳ್ಳಿಗಳು ಕಾಣೆಯಾಗಿವೆ. ಊರುಗಳೆನಿಸಿಕೊಂಡಿದ್ದ ಹಳ್ಳಿಗಳು ಇಂದು ಮೈನ್ಸ್ ಕೆಲಸಕ್ಕೆಂದು ಬಂದವರ ತಾಣಗಳಾಗಿ ಮಾರ್ಪಟ್ಟಿವೆ. ಮೈನ್ಸ್ ಕೆಲಸದಲ್ಲಿ ದುಡಿದು ರಾತ್ರಿ ಮನೆಗೆ ಬರುವಾಗ ಮಾಂಸ–ಹೆಂಡಗಳನ್ನು ತರುತ್ತಿದ್ದಾರೆ. ಮಾಂಸದ ಅಡುಗೆ ಮಾಡಲು ಹೆಂಡತಿಗೆ ಸಹಾಯ

ಮಾಡುವ ಸಂದರ್ಭದಲ್ಲಿನ ಚಹರೆಗಳು ಹೆಂಡ ಕುಡಿದ ಮೇಲೆ ಇಲ್ಲವಾಗಿವೆ. ಇದರಿಂದಾಗಿ ಅಶಾಂತಿ ಕೇರಿಯಲ್ಲಿ ನೆಲೆಯೂರುತ್ತಿದೆ. ಇಂತಹ ಹತ್ತು ಹಲವಾರು ವಿಷಯಗಳು ಆತನನ್ನು ಎಡಬಿಡದೆ ಕಾಡಲಾರಂಭಿಸುತ್ತವೆ. ಇದು ಪ್ರಾದೇಶಿಕ ವಿಶಿಷ್ಟತೆಗಳನ್ನು ಹೊಡೆದುರುಳಿಸುವಲ್ಲಿ ಗಣಿಗಾರಿಕೆಯಂತಹ ಚಟುವಟಿಕೆಗಳು ಮುಂದಾಗಿವೆ ಎಂಬುದನ್ನು ಸ್ಪಷ್ಟಪಡಿಸುತ್ತದೆ. ಜೊತೆಗೆ ಗಣಿಗಾರಿಕೆ ಎಂಬುದು ಇಲ್ಲಿ ಒಂದು ಬುಲ್ಡೋಜರ್‌ನಂತೆ ಕೆಲಸ ನಿರ್ವಹಿಸುತ್ತಿದೆಯೆ ಎಂಬ ಅನುಮಾನ ಹುಟ್ಟಿಕೊಳ್ಳುತ್ತದೆ. ಸಂಸ್ಕೃತಿ, ದೇಸೀಯತೆ ಮತ್ತು ಪ್ರಾದೇಶಿಕತೆಯ ಮಹತ್ವವನ್ನು ಅಲ್ಪಾವಧಿಯಲ್ಲಿಯೆ ಹೊಡೆದುರುಳಿಸುವ ಇಂತಹ ದೈತ್ಯಶಕ್ತಿಯನ್ನು ಬುಲ್ಡೋಜರ್ ಅನ್ನದೆ ಬೇರೇನು ಅನ್ನಲು ಸಾಧ್ಯ? ಹೀಗೆ ಮುಂದುವರೆದಿದ್ದೇ ಆದರೆ ಗ್ರಾಮಗಳ ಅಳಿವು-ಉಳಿವಿನ ಪ್ರಶ್ನೆಗಳು ತಲೆಯೆತ್ತದೆ ಇರಲಾರವು. ಇದು ಒಂದು ಗ್ರಾಮಕ್ಕೆ ಮಾತ್ರ ಸಂಬಂಧಿಸಿದ್ದಲ್ಲ. ಗಣಿಗಾರಿಕೆಗೆ ಒಳಪಟ್ಟ ಪ್ರತಿಯೊಂದು ಗ್ರಾಮಕ್ಕೂ ಬದಗಿಬಂದ ದುಸ್ಥಿತಿ. ಗಣಿಗಾರಿಕೆ ನೀಡಿದ ಹೊಡೆತದಿಂದ ಗ್ರಾಮಗಳು ಮತ್ತೆಂದೂ ಚೇತರಿಸಿಕೊಳ್ಳಲಾರದಂತಾಗಿವೆ.

ಇಂತಹದ್ದರ ಮಧ್ಯೆ ಗ್ರಾಮೀಣ ಜನರ ಬದುಕು ಅತಂತ್ರ ಸ್ಥಿತಿ ತಲುಪಿರುವುದು ಬಹಳ ನೋವುಂಟುಮಾಡುವಂತದ್ದು. ಫಲವತ್ತಾದ ಭೂಮಿಯನ್ನು ಗಣಿಧಣಿಗಳಿಗೆ ಮಾರಿಕೊಳ್ಳುವ ಮೂಲಕ ಇಂತಹ ದುಸ್ಥಿತಿಯನ್ನು ತಲುಪಿದ್ದಾರೆ. ಗಣಿಗಾರಿಕೆಯ ಆರಂಭದಲ್ಲಿ ಗಣಿಮಾಲೀಕರು ಭೂಮಿಯನ್ನು ಕೊಳ್ಳಲು ಜನರಿಗೆ ಹಣದ ಆಮಿಷವನ್ನು ಒಡ್ಡಲಾರಂಭಿಸಿದ್ದರು. ಅದಕ್ಕೆ ಮನಸೋತ ಎಷ್ಟೋ ರೈತರು ಜಮೀನುಗಳನ್ನು ಮೈನ್ಸ್ ಮಾಲೀಕರಿಗೆ ಮಾರತೊಡಗಿದರು. ಇದರಿಂದ ಅವರಿಗೆ ಕೈತುಂಬ ಹಣವು ಸಿಕ್ಕಿತು. ಆದರೆ ಅದರ ಸದುಪಯೋಗವನ್ನು ಮಾಡಿಕೊಳ್ಳಲಾಗದ ಅವರು ಆಕರ್ಷಣೀಯ ಬದುಕಿನ ಕಡೆಗೆ ವಾಲತೊಡಗಿದರು. ಬೈಕು, ಹೊಸಮನೆ ಎಂದು ಹಣವನ್ನು ವ್ಯಯಮಾಡಲಾರಂಭಿಸಿದರು. ಇಂಥದ್ದರ ಮಧ್ಯೆ ಕೆಲ ರೈತರು ಯಾವ ಕಾರಣಕ್ಕೂ ತಮ್ಮ ಹೊಲವನ್ನು ಮಾರಿಕೊಳ್ಳಲು ಸಿದ್ಧವಿಲ್ಲವೆಂದು ಗಟ್ಟಿತನವನ್ನು ಪ್ರದರ್ಶಿಸಿದ್ದುವುಂಟು. ಆದರೆ, ಗಣಿಮಾಲೀಕರ ಹಣದ ಬಲ, ದಬ್ಬಾಳಿಕೆಯ ಮುಂದೆ ಅವರು ಸಹ ತಲೆಬಾಗಲೇಬೇಕಾಯಿತು. ಅದನ್ನು ಭರಮಣ್ಣನ ಪಾತ್ರದ ಮುಖಾಂತರ ಕಥೆಯು ನಿರೂಪಿಸುತ್ತದೆ. ಭರಮಣ್ಣ ಹೊಲವನ್ನು ಗಣಿಮಾಲೀಕರಿಗೆ ನೀಡಲು ನಿರಾಕರಿಸಿದಾಗ ಕೆಲವರು ಈತನಿಗೆ ಗೊತ್ತಿಲ್ಲದಂತೆ ಹೊಲವನ್ನು ಕಬಳಿಸಿದ್ದರು. ಇನ್ನೂ ಕೆಲವರು ಭರಮಣ್ಣನನ್ನು ಮತ್ತು ಅವನ ಕುಟುಂಬದವರನ್ನು ಸಾಯಿಸುವುದಾಗಿ ಹೇಳಿ ಬಲವಂತದಿಂದ ಜಮೀನನ್ನು ಕಸಿದುಕೊಳ್ಳಲಾರಂಭಿಸಿದರು. ಆಗ ಅನಿವಾರ್ಯವಾಗಿ ಭರಮಣ್ಣ ತನ್ನ ಹೊಲದಿಂದ ದೂರ ಉಳಿಯಬೇಕಾಯಿತು. ಅಲ್ಲಿಂದ ಆತ ಮತ್ತು ಆತನ

ಹೆಂಡತಿ ಮೈನ್ಸ್ ಕೆಲಸವನ್ನು ಸೇರಿಕೊಳ್ಳುತ್ತಾರೆ. ಇದು ರೈತನೊಬ್ಬನ ಸ್ವತಂತ್ರ ಬದುಕನ್ನು ಕಸಿದುಕೊಳ್ಳುವ ಬಂಡವಾಳಶಾಹಿಗಳ ಬಲವಂತಿಕೆಯ ನಡೆಯನ್ನು ಪ್ರದರ್ಶಿಸುತ್ತದೆ. ಜೊತೆಗೆ ಬಂಡವಾಳಶಾಹಿಗಳು ಹಳ್ಳಿಗಳಲ್ಲಿನ ರೈತಾಪಿ ಬದುಕಿಗೆ ಕುತ್ತನ್ನು ತಂದೊಡ್ಡುತ್ತಿದ್ದಾರೆಂದೇ ಹೇಳಬಹುದಾಗಿದೆ.

ಗಣಿಗಾರಿಕೆಯಲ್ಲಿ ಕೆಲಸವನ್ನು ಹುಡುಕಿಕೊಂಡು ಹೋಗುವ ಜನರ ಗೋಳು ಹೇಳತೀರದು. ಗಣಿಮಾಲೀಕರು ಕೆಲಸವನ್ನು ಅರಸಿಕೊಂಡು ಬಂದವರಲ್ಲಿ ಕೆಲವರನ್ನು ಮೈನ್ಸ್‌ನಲ್ಲಿ ದುಡಿಸಿಕೊಂಡರೆ, ಕೆಲವರನ್ನು ತಮ್ಮ ಮನೆಯ ಕೆಲಸದಲ್ಲಿ ತೊಡಗಿಸಿಕೊಳ್ಳುತ್ತಾರೆ. ಇದನ್ನು ಕಥೆಯು ಹೀಗೆ ವಿವರಿಸುತ್ತದೆ. ಭರಮಣ್ಣ ಮೈನ್ಸ್‌ನಲ್ಲಿ ದುಡಿದರೆ, ಆತನ ಹೆಂಡತಿ ಚಂದ್ರಿ ಮೈನ್ಸ್‌ನ ಮ್ಯಾನೇಜರ್ ಮನೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಳು. ಸೌಂದರ್ಯವತಿಯಾದ ಚಂದ್ರಿಯನ್ನು ಕಂಡ ಮ್ಯಾನೇಜರ್ ಆಕೆಯನ್ನು ರಾತ್ರಿಯಾದರೂ ಮನೆಗೆ ಕಳುಹಿಸುತ್ತಿರಲಿಲ್ಲ. ಎಲ್ಲಿಯೂ ಹೋಗದೆ ಇಲ್ಲಿಯೇ ಇದ್ದು ಕೆಲಸ ಮಾಡಬೇಕೆಂದು ಬಲವಂತವಾಗಿ ಕಟ್ಟಿ ಹಾಕಿಕೊಂಡಿದ್ದನು. ಇದನ್ನು ಕೇಳಲು ಹೋದ ಭರಮಣ್ಣನಿಗೆ ಹಬ್ಬಹರಿದಿನಗಳಲ್ಲಿ ಮಾತ್ರ ಒಂದೆರಡು ದಿನ ಕಳುಹಿಸುವುದಾಗಿ ಗದರಿಸಿ ಕಳುಹಿಸಿದ್ದನು. ಚಂದ್ರಿಯನ್ನು ತನ್ನಲ್ಲಿ ಉಳಿಸಿಕೊಂಡ ಮ್ಯಾನೇಜರ್ ಆಕೆಯ ತಲೆಯಲ್ಲಿ ಭ್ರಮೆಯನ್ನು ಹುಟ್ಟಿಸಿದ್ದ. ರಾತ್ರಿ ತನಗೆ ಬೇಕಾದವರ ಬಳಿಗೆ ಆಕೆಯನ್ನು ಕಳುಹಿಸಿ ತನ್ನ ಕೆಲಸಕ್ಕೆ ಅನುಕೂಲವಾಗುವಂತೆ ನಡೆಸಿಕೊಳ್ಳತೊಡಗಿದ್ದ. ಇದು ಭರಮಣ್ಣನಿಗೆ ಗೊತ್ತಾಗಿದ್ದರೂ ತನ್ನ ಹೆಂಡತಿಯನ್ನು ಮನೆಗೆ ಕರೆತರಲು ಸಾಧ್ಯವಾಗುವುದಿಲ್ಲ. ಇದು ಮೈನ್ಸವೊಂದರಲ್ಲಿ ಸರಳವಾಗಿ ನಡೆದುಹೋಗುವ ದೌರ್ಜನ್ಯವೆಂದೇ ಹೇಳಬಹುದಾಗಿದೆ. ಮಾಲೀಕನ ನಿಯಂತ್ರಣಕ್ಕೊಳಗಾದ ವ್ಯಕ್ತಿ ಆತನ ಮಾತಿಗೆ ಎದುರಾಡುವಂತಿಲ್ಲ. ಇಲ್ಲಿ ಆತ ಹೇಳಿದ್ದೇ ಕಾನೂನು. ಇದನ್ನು ಎದುರಿಸಲು ಪ್ರಯತ್ನಿಸಿದ್ದೇ ಆದರೆ ಆತನ ಪ್ರಾಣಕ್ಕೆ ಕಂಟಕವಾಗುವ ಸಾಧ್ಯತೆ ಹೆಚ್ಚಾಗಿರುತ್ತದೆ. ಏಕೆಂದರೆ ಭರಮಣ್ಣನಂತಹ ವಿಚಾರವಂತರು ಅದನ್ನು ಸಮರ್ಥವಾಗಿ ಎದುರಿಸಲು ಸಾಧ್ಯವಾಗುತ್ತಿಲ್ಲವೆಂದರೆ, ಅದರ ಹಿಂದಿರುವ ದುಗುಡವಾದರು ಏನು? ಪ್ರಾಣ ಭಯ, ಹಣದ ದಬ್ಬಾಳಿಕೆ, ಕುಟುಂಬದ ದಿವಾಳಿತನದಂತಹ ವಿಚಾರಗಳು ಆತನಿಗೆ ಭಯ ಹುಟ್ಟಿಸದಿದ್ದರೆ, ಆತ ಮ್ಯಾನೇಜರನಂತಹವರನ್ನು ಸುಲಭವಾಗಿ ಎದುರಿಸಲು ಸಾಧ್ಯವಾಗುತ್ತಿತ್ತು. ಆದರೆ ಆತನನ್ನು ಎದುರಿಸಲು ಆತನಿಗೆ ಸಾಧ್ಯವಾಗುತ್ತಿಲ್ಲವೆಂದ ಮೇಲೆ ಇದು ಜೀವ ಬೆದರಿಕೆಯಲ್ಲದೆ ಮತ್ತೇನೂ ಆಗಲಿಕ್ಕೆ ಸಾಧ್ಯವಿಲ್ಲ. ಇದನ್ನು, ಮ್ಯಾನೇಜರ್ ಹಾಗೂ ಭರಮಣ್ಣನ ಮಧ್ಯೆ ನಡೆದ ಮಾತಿನ ಚಕಮಕಿಯಲ್ಲಿ ಗುರುತಿಸಬಹುದಾಗಿದೆ.

"ಏನೋ ಭರಮ? ದೂರ ಬಂದೀಯಾ?" ಎಂದು ಮ್ಯಾನೇಜರ್ ದರ್ಪದಿಂದಲೇ ಕೇಳುತ್ತಾನೆ. ಆಗ ಭರಮಣ್ಣ ಅಂಜಿಕೆಯಿಂದಲೇ ತಾನು ಬಂದ ಕೆಲಸವನ್ನು ತಿಳಿಸುತ್ತಾನೆ. ಆಗ ಆತ ಕಳುಹಿಸಲು ಸಾಧ್ಯವಿಲ್ಲ. ಬೇಕೆಂದರೆ ಇನ್ನಷ್ಟು ಹಣವನ್ನು ಕೊಡುತ್ತೇನೆ ತೆಗೆದುಕೊಂಡು ಹೋಗು ಎಂದು ಗದರಿಸುತ್ತಾನೆ. ಇದನ್ನೆಲ್ಲ ನೋಡುತ್ತಿದ್ದ ನರಸಿಂಹನಿಗೆ ಆತನ ಮಾತುಗಳನ್ನು ಕೇಳಿ ರೋಷ ಉಕ್ಕುತ್ತದೆ. ತಾಯಿಯಿಂದ ತನ್ನನ್ನು ದೂರ ಮಾಡಿ ತಬ್ಬಲಿಯನ್ನಾಗಿ ಮಾಡುತ್ತಿರುವುದು ಆತನಿಗೆ ಬಹಳ ನೋವನ್ನು ಉಂಟು ಮಾಡುತ್ತದೆ. ತಂದೆ ಎಷ್ಟೇ ಬೇಡಿಕೊಂಡರೂ ಮ್ಯಾನೇಜರ್ ಒಪ್ಪುವುದಿಲ್ಲ. ಕೊನೆಗೆ ಭರಮಣ್ಣ ತನ್ನ ಹೆಂಡತಿಯನ್ನು ಇವತ್ತೊಂದಿನ ಕಳುಹಿಸಿಕೊಡಿ ರಾತ್ರಿ ಹೊತ್ತಿಗೆಂದರೆ ಮರಳಿ ತಂದು ಬಿಡುತ್ತೇನೆ ಎಂದು ಕೇಳುತ್ತಾನೆ. "ಏನೋ ನಿನ್ನ ಹೆಂಡ್ತಿ...? ಎಂದು ಅರ್ಥದಲ್ಲಿ ಗದರಿಸಿದ ಮ್ಯಾನೇಜರ್ ವಿಕೃತವಾಗಿ ನಕ್ಕ, ನರಸಿಂಹ ಬುಸುಗುಡುತ್ತಿದ್ದ." ಭರಮಣ್ಣನಲ್ಲಿ ಕಾಣಿಸಿಕೊಳ್ಳುವ ಹಿಂಜರಿಕೆಯ ಮಾತುಗಳು ಶ್ರೀಮಂತಿಕೆಯ ಮುಂದೆ ಬಡವನ ಶಕ್ತಿಯು ಹಿನ್ನಡೆಯನ್ನನುಭವಿಸುತ್ತಿರುವುದರ ದಾಖಲೆಯಂತಿದೆ. ಅಂದರೆ ಬಡತನವನ್ನು ಬದುಕುತ್ತಿರುವ ಪ್ರತಿಯೊಂದು ಕುಟುಂಬ, ಗ್ರಾಮ, ಸಮುದಾಯಗಳು ಶ್ರೀಮಂತಿಕೆಯ ಮುಂದೆ ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳುತ್ತಿವೆ ಎಂದೇ ಅರ್ಥ.

ಇತ್ತೀಚಿನ ದಿನಮಾನದಲ್ಲಿ ಹಲವಾರು ಹೊಸ ಹೊಸ ರೋಗಗಳು ಕಾಣಿಸಿಕೊಳ್ಳಲಾರಂಭಿಸಿವೆ. ಗಣಿಗಾರಿಕೆಗೆ ಒಳಪಟ್ಟ ಗ್ರಾಮಗಳಲ್ಲಿ ಇದರ ಸಂಖ್ಯೆ ಹೆಚ್ಚಾಗಿದೆ. ಗಣಿಗಾರಿಕೆಯಲ್ಲಿ ಕೆಲಸ ನಿರ್ವಹಿಸುವವರಿಂದ ಹಿಡಿದು ಉಳಿದವರ ಬದುಕಿನಲ್ಲಿಯೂ ಸಾಕಷ್ಟು ಗಂಭೀರ ಪರಿಣಾಮವನ್ನು ಉಂಟುಮಾಡು ರೋಗಗಳು ಕಾಣಿಸಿಕೊಳ್ಳುತ್ತಿವೆ. ಕಾರಣ ಗಣಿಗಾರಿಕೆಯ ಕಾರ್ಯ ಪ್ರಾರಂಭವಾಗುವ ಹಂತದಿಂದ ಹಿಡಿದು ಅದರ ಸರಕು-ಸಾಗಾಣಿಕೆಯ ಹಂತದವರೆಗೂ ಏಳುವ ಧೂಳಿನ ಕಣಗಳು ಮಾನವನ ದೇಹವನ್ನು ಸುಲಭವಾಗಿ ಪ್ರವೇಶಿಸುತ್ತಿವೆ. ಖನಿಜದಿಂದ ಕೂಡಿದ ಆ ಕಣಗಳು ಮಾನವನ ದೇಹದಲ್ಲಿ ಸಾಕಷ್ಟು ತೊಂದರೆಗಳನ್ನು ಒಡ್ಡುತ್ತಿವೆ. ಇದರಿಂದ ತಪ್ಪಿಸಿಕೊಳ್ಳಲಾರದಷ್ಟು ನಿರಂತರವಾಗಿ ಧೂಳೆಬ್ಬಿಸುವ ಕಾರ್ಯದಲ್ಲಿ ಗಣಿಗಾರಿಕೆಗಳು ತೊಡಗಿಕೊಂಡಿವೆ. "ಮುಂಜಾನೆ ಕಣ್ಣು ತೆರೆದಾಗ ತೊನ್ನು ಹತ್ತಿದ ಮುದುಕರಂತೆ ಯಾವುದೋ ನಿಗೂಢ ರೋಗಕ್ಕೆ ತುತ್ತಾದವರಂತೆ ತೋರುವ ಗುಡ್ಡಗಳು, ಡಾಕ್ಟರಿಗೆ ತೋರಿಸಿ ಆರೈಕೆ ಮಾಡಿಸಿಕೊಳ್ಳಲು ಮಕ್ಕಳಿಲ್ಲದೆ ಅನಾಥರಂತೆ ರೋಧಿಸುತ್ತಾ ಕುಳಿತವರಂತೆ ತೋರುತ್ತಿದ್ದವು. ಅತ್ತಿಂದಿತ್ತ ಓಡಾಡುವ ಕಾರು-ಜೀಪು-ಟಿಪ್ಪರಗಳು ಎಬ್ಬಿಸುವ ಧೂಳಿನಲ್ಲಿ ತಂದೆ ಮಗ ಇಬ್ಬರೂ ಕಾಣದಾದರೂ."[೬] ಅಷ್ಟೆ

ಅಲ್ಲದೆ "ಆಗೊಮ್ಮೆ ಈಗೊಮ್ಮೆ ಬೀಸುವ ಗಾಳಿಗೆ ಏಳುವ ಕೆಂಪು ಧೂಳು ಉಸಿರಾಡುವ ಗಾಳಿ ಕೂಡಾ ಕೆಂಪಾಗಿತ್ತು." ಎನ್ನುವ ಮಾತುಗಳು ಗಣಿಗಾರಿಕೆ ಪ್ರದೇಶದ ನೈಜ ಚಿತ್ರಣವನ್ನು ಬಿಚ್ಚಿಡುತ್ತವೆ. ಮಳೆಯ ಆರ್ಭಟಕ್ಕೆ ಊರೊಂದು ಜಲಸಮಾಧಿಯಾಗುವಂತೆ ಗಣಿಗಾರಿಕೆಯು ಊರುಕೇರಿಯನ್ನು ಕಾಣದಂತೆ ಮಾಡುತ್ತಿದೆಯೆ?

ಗಣಿಗಾರಿಕೆಯನ್ನು ಮುಖ್ಯವಾಗಿರಿಸಿಕೊಂಡು ಹೆಣೆಯಲಾದ ಈ ಕಥೆಯು ಗ್ರಾಮ ಬದುಕಿನ ವಿನಾಶದ ಮುನ್ಸೂಚನೆಯನ್ನು ನೀಡುತ್ತದೆ. ಸಮಾಜದಲ್ಲಿನ ಪರಿಸರವನ್ನು ಹಾಳು ಮಾಡುವ, ಪರರ ಜೀವನದ ಮೇಲೆ ಅತಿಕ್ರಮಿಸುವ ಸ್ವಾರ್ಥಿಗಳ ಹಿತಾಸಕ್ತಿಯ ಅಟ್ಟಹಾಸವನ್ನು ಇಲ್ಲಿ ಕಾಣುತ್ತೇವೆ. ಗಣಿಗಾರಿಕೆಯಿಂದ ಸಾಮಾನ್ಯನ ಆರೋಗ್ಯವು ಚಿಂತಾಜನಕ ಸ್ಥಿತಿಗೆ ಬಂದು ತಲುಪುತ್ತಿದೆ ಎಂದೆನಿಸುತ್ತದೆ. ಉಸಿರಾಡಲು ಇರುವ ಸ್ವಚ್ಛಂದವಾದ ಗಾಳಿ ಇಂದು ಕಣ್ಮರೆಯಾಗುತ್ತಿರುವಂತಿದೆ. ಎಲ್ಲಿ ನೋಡಿದರಲ್ಲಿ ಹಸಿರಿನಿಂದ ಕಂಗೊಳಿಸಬೇಕಾಗಿದ್ದ ಭೂಮಿ ಬರಡಾಗಿ ಬಿಕೋ ಅನ್ನಿಸುವ ವಾತಾವರಣ ಸೃಷ್ಟಿಗೊಂಡಂತಿದೆ. ಇಂತಹ ಚಿತ್ರಣಗಳು ಈ ಕಥೆಯ ಉದ್ದಕ್ಕೂ ಹರಡಿಕೊಂಡಿವೆ. ಇದು ಪರಿಸರ ಮತ್ತು ಗ್ರಾಮ ಸಮುದಾಯಗಳ ರಕ್ಷಣೆಯಲ್ಲಿ ಮುಂದಾಗುವಂತೆ ಪ್ರೇರೇಪಿಸುವುದಲ್ಲದೆ, ಅವುಗಳನ್ನು ಉಳಿಸಿಕೊಳ್ಳಲೇಬೇಕಾದ ಅನಿವಾರ್ಯತೆ ಇಂದಿನ ಸಮಾಜಕ್ಕೆ ಎದುರಾಗಿದೆ ಎಂಬ ಸಂದೇಶವನ್ನು ನೀಡುತ್ತದೆ.

**೫.೨. ಅಂಚಿನಲ್ಲಿರುವ ಅರೆಜೀವಗಳು:**

ಜಾಗತೀಕರಣ, ಉದಾರೀಕರಣ, ಖಾಸಗೀಕರಣಗಳು ಆರ್ಥಿಕತೆಯ ನಿರ್ಧಾರಕ ಸಂಗತಿಗಳು ನಿಜ. ಆದರೆ ಅವು ಸಾಮಾಜಿಕ ಬದುಕಿನ ಮೇಲೆ ಉಂಟುಮಾಡಿದ ಪರಿಣಾಮ ಮಾತ್ರ ಅಗಾಧವಾದದ್ದು. ಜಾತಿ, ಧರ್ಮ, ವರ್ಗ, ಲಿಂಗಗಳ ಅಸಮಾನತೆಯ ಹುದುಲಿನಿಂದ ಅದು ಹೇಗೋ ಕಷ್ಟಪಟ್ಟು ಮೇಲೇಳುತ್ತ, ಕಾಲೂರುವ ಪ್ರಯತ್ನದಲ್ಲಿದ್ದ ಭಾರತೀಯ ಸಮಾಜ ಈ ಭೀಕರ ಅಘಾತದಿಂದ ತತ್ತರಿಸಿಹೋಯಿತು. ಜಾಗತೀಕರಣ ನೆತ್ತಿಯನ್ನು ಕುಕ್ಕಿದ ಹದ್ದಾದರೂ ಅದರ ಪರಿಣಾಮ ಸಂಭವಿಸಿದ್ದು ಮಾತ್ರ ಸಮಾಜದ ಅಂಚಿನಲ್ಲಿರುವ ಬದುಕುಗಳಿಗೆ. ಕಳೆದ ಮೂರು ದಶಕಗಳಲ್ಲಿಯ ಭಾರತದ ಆರ್ಥಿಕತೆಯ ಅಂಕಿ-ಅಂಶವನ್ನು ಗಮನಿಸಿದರೆ ಅದರ ಸೂಚ್ಯಂಕವೇ ಅಸಮಾನ ಭಾರತದ ನಕ್ಷೆಯಾಗುತ್ತದೆ. ಜಗತ್ತಿನ ಮಿಲೇನಿಯರ್ಸ್ ಹಾಗೂ ಬಿಲೇನಿಯರ್ಸ್‌ಗಳ ಪಟ್ಟಿಯಲ್ಲಿ ಭಾರತದ ಶ್ರೀಮಂತರು ಸೇರ್ಪಡೆಗೊಳ್ಳುತ್ತಿದ್ದಾರೆ. ಜಗತ್ತಿನ ಅತ್ಯಂತ ಶ್ರೀಮಂತರ ಪಟ್ಟಿಯಲ್ಲಿ

ಭಾರತೀಯರ ಹೆಸರು ಸೇರುತ್ತಿದೆ. ಅದೇ ಕಾಲದಲ್ಲಿ ಹಸಿವಿನಿಂದ ಒಂದು ಹೊತ್ತಿನ ಅನ್ನದ ಗತಿಯಿಲ್ಲದೆ ಸಾಯುವವರ ಸಂಖ್ಯೆ ಹೆಚ್ಚುತ್ತಿದೆ. ರೈತರು, ರೈತ ಕಾರ್ಮಿಕರು, ಸಣ್ಣ ಅತಿಸಣ್ಣ ವ್ಯಾಪಾರಿಗಳು, ಕಾರ್ಮಿಕರು ಆತ್ಮಹತ್ಯೆಮಾಡಿಕೊಳ್ಳುತ್ತಿದ್ದಾರೆ. 2019–20ರ ಅವಧಿಯಲ್ಲಿ ದೇಶ ಅತಿದೊಡ್ಡ ಆರ್ಥಿಕ ಮುಗ್ಗಟ್ಟನ್ನು ಎದುರಿಸುತ್ತಿದೆ. ಬಹುಕಾಲದಿಂದ ದೇಶದ ಆರ್ಥಿಕ ಭದ್ರತೆಯನ್ನು ಉಡಕಚ್ಚಿದಂತೆ ಕಚ್ಚಿ ಹಿಡಿದಿದ್ದ ಕಂಪನಿಗಳು ತಮ್ಮ ಆರ್ಥಿಕ ಕುಸಿತವನ್ನು ಬಹಿರಂಗಪಡಿಸುತ್ತಿವೆ. ಜವಳಿ ಉದ್ಯಮ, ಟೀ ಉದ್ಯಮ, ಪಾರ್ಲೆಜಿ ಕಂಪನಿ ಮೊದಲಾದವು ತಮ್ಮ ಉದ್ಯೋಗಿಗಳ ಸಂಖ್ಯೆಯನ್ನು ಕಡಿತಮಾಡುತ್ತಿವೆ. ಬೆಂಗಳೂರಿನ ಕಾರ್ಮಿಕ ವಲಯ ಪೀಣ್ಯ ಒಂದರಲ್ಲಿಯೇ ಹತ್ತು ಸಾವಿರಕ್ಕೂ ಹೆಚ್ಚು ಕಾರ್ಮಿಕರು ಕೆಲಸ ಕಳೆದುಕೊಂಡಿದ್ದಾರೆ. ಜಗತ್ತಿನಲ್ಲಿಯೇ ಅತಿದೊಡ್ಡ ಸಂಖ್ಯೆಯ ಯುವ ಜನರನ್ನು ಹೊಂದಿರುವ ದೇಶವು; ಸ್ವಾತಂತ್ರ್ಯಾನಂತರದಲ್ಲಿಯೇ ಈ ಮುಂಚೆ ಎಂದೂ ಕಂಡಿರದಷ್ಟು ನಿರುದ್ಯೋಗದ ಸಮಸ್ಯೆಯನ್ನು ತಂದುಹಾಕಿಕೊಂಡಿದೆ. ಆರ್ಥಿಕ ಅಸಮತೋಲನದ ದುರಂತವು ಭಾರತದ ಸಾಮಾಜಿಕ ಬದುಕನ್ನು ಸಾವಿರ ಹೋಳುಗಳನ್ನಾಗಿ ಛಿದ್ರಿಸಿದೆ. ಆರ್ಥಿಕ ಅಸಮತೋಲನವು ಭಾರತಕ್ಕೆ ಅಪರಿಚಿತವಾದುದಲ್ಲ. ಅಸಮಾನತೆಯ ತಳಹದಿಯ ಮೇಲೆಯೇ ನಿಂತಿರುವ ಸಮಾಜಿಕ ರಚನೆಯಿದು. ಆದರೆ ಮುಕ್ತ ಮಾರುಕಟ್ಟೆಯ ವಿದ್ಯಮಾನಗಳಿಗೆ ಭಾರತವು ತೆರೆದುಕೊಂಡ ಹಾಗೆ, ಈ ಅಸಮಾನತೆಯು ತನ್ನ ಅತ್ಯಂತಿಕ ಸ್ಥಿತಿಯನ್ನೂ ತಲುಪಿತು. ಗ್ರಾಮಭಾರತವು ಭೌಗೋಲಿಕವಾಗಿ ಮಾತ್ರ ಗ್ರಾಮದ ಚಹರೆಯ ಪಳೆಯುಳಿಕೆಗಳನ್ನು ಉಳಿಸಿಕೊಂಡು, ತನ್ನ ಆಲೋಚನಾ ಸ್ತರದಲ್ಲಿ ನಗರದ ಬಂಡವಾಳಶಾಹಿ ಮನೋಧರ್ಮವನ್ನೇ ಹೊಂದಿತ್ತು. ಇದರ ಪರಿಣಾಮವನ್ನು ಚಿತ್ರಿಸುವ ಹಲವು ಕಥನಗಳು ಈ ಅವಧಿಯಲ್ಲಿ ಬರೆಯಲ್ಪಟ್ಟಿವೆ.

ವಾಸ್ತವದಲ್ಲಿ, ಕಳೆದ ಮೂರು ದಶಕಗಳ ಈ ಅವಧಿಯು ಕನ್ನಡ ಸಂವೇದನೆಯ ಚರಿತ್ರೆಯಲ್ಲಿ ಅಂಚಿನ ಸ್ತರಗಳು ಅಭಿವ್ಯಕ್ತಗೊಂಡ ಕಾಲವಾಗಿದೆ. ದಲಿತ–ಬಂಡಾಯ ಸಾಹಿತ್ಯ ಸಂದರ್ಭದ 80ರ ದಶಕ ಮತ್ತು ಚಳುವಳಿಗಳ ಕಾಲ ಎಂದು ದಾಖಲಾದ 70ರ ದಶಕದಲ್ಲಿ ಸಮಾಜದ ಕೆಳಸ್ತರಗಳು, ದುರ್ಬಲ ವರ್ಗಗಳು ತಮ್ಮ ಅನುಭವವನ್ನು ಅಭಿವ್ಯಕ್ತಿಸಿದ್ದು ನಿಜ. ಆದರೆ ಒಟ್ಟಾರೆ ಮಹಿಳಾ ಸಂವೇದನೆ ಎನ್ನುವುದಕ್ಕೂ, ದಲಿತ ಮಹಿಳಾ ಸಂವೇದನೆ ಎನ್ನುವುದಕ್ಕೂ ವ್ಯತ್ಯಾಸವಿದೆ. ದಲಿತ ಮಹಿಳಾ ಸಂವೇದನೆಯಲ್ಲಿಯೂ, ಈಗಲೂ ತನ್ನ ಮೂಲಭೂತ ಹಕ್ಕಿನಿಂದ ವಂಚಿತವಾದ ಮಹಿಳಾ ಧ್ವನಿಗೂ ವ್ಯತ್ಯಾಸ ಇದ್ದೇ ಇದೆ. ಅಂಬೇಡ್ಕರ ಹೇಳುತ್ತಿದ್ದ, ಸಮಾಜದ ಕಟ್ಟ ಕಡೆಯ ವ್ಯಕ್ತಿ ಎಂಬ ಐಡೆಂಟಿಟಿಯು

ದಾಖಲಾಗತೊಡಗಿದ್ದು ಈ ಕಾಲದಲ್ಲಿ. ಸ್ವಾತಂತ್ರ್ಯ ನಂತರದ 50 ವರ್ಷಗಳ ನಂತರ ಶಿಕ್ಷಣದ ಮತ್ತು ನಾಗರಿಕ ಹಕ್ಕಿನ ಅವಕಾಶ ನಿಧಾನಕ್ಕೆ ತೆವಳುತ್ತ ಆ ಅಂಚಿನ ಅಧೋಲೋಕವನ್ನು ಕಾಣಿಸಿತ್ತು. ಹಾಗಾಗಿ ಪ್ರಬಂಧಗಳಲ್ಲಿ, ಅಂಕಣಗಳಲ್ಲಿ, ಆತ್ಮಕಥನಗಳಲ್ಲಿ ಇಂತಹ ಬರಹಗಳ ಹಾಜರಾತಿಯನ್ನು ಕಾಣುತ್ತೇವೆ. ಟಿ.ಎಸ್.ಗೊರವರ ಅವರ 'ಆಡುಕಾಯುವ ಹುಡುಗನ ದಿನಚರಿ', ಟಿ.ಕೆ.ದಯಾನಂದ ಅವರ 'ರಸ್ತೆ ನಕ್ಷತ್ರ' ಈ ಮಾದರಿಯ ಬರಹಕ್ಕೆ ಉದಾಹರಣೆಗಳು. ಕೇರಳದ ಪ್ರಸಿದ್ಧ ಕಥೆಗಾರ ಟಿ.ಎನ್.ವಾಸುದೇವನ್ ಅವರ ಕಥೆಗಳು ಕನ್ನಡಕ್ಕೆ ಅನುವಾದಗೊಂಡವು. ಎಲ್ಲ ವಿಧದ ದಮನಿತ ಧ್ವನಿಗಳಿಗೆ ಜೀವ ಬಂದ ಹಾಗೆ, ತೃತೀಯ ಲಿಂಗಿಗಳ ಅನುಭವಗಳೂ ಆತ್ಮಕಥನ, ಕವಿತೆ ಮತ್ತು ಕಥೆಗಳಾಗಿ ಅಭಿವ್ಯಕ್ತಗೊಳ್ಳತೊಡಗಿತು. ಇಂತಹ, ಇದುವರೆಗೂ ಸಾಹಿತ್ಯದಲ್ಲಿ ಬಿಟ್ಟು ಉಳಿದುಹೋದ ಪದಗಳಂತಿರುವವರ ಚರಿತ್ರೆಯನ್ನು ಒಳಗೊಳ್ಳುವ ಸಂವೇದನಾ ಸೂಕ್ಷ್ಮತೆ ಕಂಡುಬಂದಿದ್ದು ಈ ಕಾಲಘಟ್ಟದ ಮುಖ್ಯ ಲಕ್ಷಣಗಳಲ್ಲಿ ಒಂದಾಗಿದೆ.

'ಕರ್ಕಿಬೇರು' ಎಂಬ ಕಥೆ ಗ್ರಾಮದ ಅಂಚಿನಿಂದ ನಗರದ ಅಂಚಿಗೆ ಸಿಡಿದು ಬಿದ್ದ ಹೆಣ್ಣು ಬದುಕಿನ ಕಥಾನಕವಾಗಿದೆ. ಕಥೆಯ ವಸ್ತು, ಹೆಣ್ಣಿನ ದೇಹ ಬಿಕರಿಯ ಅದೇ ಹಳೆಯ ವಿಷಯವೇ ಆದರೂ, ಬದಲಾದ ಕಾಲಕ್ಕನುಗುಣವಾಗಿ ಈ ಬಿಕರಿಗಿಡುವ, ಕೊಳ್ಳುವ, ಭೋಗಿಸುವ ವಿಧಾನಗಳು ಮಾತ್ರ ಬೇರೆಯಾಗುತ್ತ ಬಂದುದರಿಂದ, ಬದುಕಿನ ವಾಸ್ತವದಲ್ಲಿ ಅದೇ ಯಾತನೆಯೇ ಹೊಸದಾಗುತ್ತಿರುವುದರಿಂದ ಕಥೆಗದು ಅನಿವಾರ್ಯವಾದ ಭಿತ್ತಿಯೂ ಆಗುತ್ತದೆ. ಈ ಕಥೆ ಪ್ರಾರಂಭವಾಗುವುದು ಮಹಾನಗರವೊಂದರ ಸ್ಲಂ ಏರಿಯಾದ ಜೋಪಡಪಟ್ಟಿಯ ಅಸಹಾಯಕ ಮೂರು ಜೀವಗಳಿಂದ ಮುದುಕಿ ತುಳಸಮ್ಮ ಮತ್ತು ಅವಳ ಮೊಮ್ಮಕ್ಕಳು ರೇಣಿ ಮತ್ತು ಹನುಮ್ಯಾರಿಂದ. ಕಿತ್ತು ಬಿಸಾಡಿದ ಗಿಡಗಳಂತಿರುವ, ಅಂಟಿರುವ ತಟಕು ಮಣ್ಣಿನಿಂದ ಮರಳಿ ಜೀವಪಡೆದೇನು ಎಂಬ ತಳಮಳದಲ್ಲಿರುವ ಪಡಿಪಾಟಲ ಜೀವಗಳವು. ಸದ್ಯಕ್ಕೆ ರೇಣಿ ಮತ್ತು ಹನುಮ್ಯಾ ಹೆಗಲಿಗೆ ಪಾಟಿಚೀಲ ಹಾಕಿಕೊಂಡು ಶಾಲೆಗೆಂದು ಹೊರಟಿವೆ.

ಈ ತುಳಸಮ್ಮ ಅದೆಂದೋ ತನ್ನ ಯೌವನದಲ್ಲಿ ಬಳೆ, ಪೌಡರು ಮಾರುತ್ತಿದ್ದ ಪಕ್ರುಸಾಬನ ಬೆನ್ನ ಹಿಂದೆ ಬಂದು ಈ ಸ್ಲಂ ಬದುಕಿಗೆ ಸೇರಿದವಳು. ಮೊದಲೆಲ್ಲ ಪಕ್ರುಸಾಬ ಅವಳ ಮೇಲೆ ಪ್ರೀತಿಯಿಂದ ವರ್ತಿಸುತ್ತಿದ್ದ. ತುಳಸಿಯ ಹೊಟ್ಟೆಯಲ್ಲಿ ಮೂಕಿ ಮಾದೇವಿ ಹುಟ್ಟಿದಳು. ಪಕ್ರುಸಾಬನಿಗೆ ತುಳಸಿಯ ಮೇಲಿನ ಮೋಹ ಬರಬರುತ್ತ ಕಡಿಮೆಯಾಯಿತು.

ಕುಡಿತವೂ ಹೆಚ್ಚಾಯಿತು. ಕಡೆಗೊಂದು ದಿನ ಬರುವುದು ನಿಂತೇ ಹೋಯಿತು. ತುಳಸಿ ಹೆಸರಿಗೆ, ಸ್ಲಂ ಹುಡುಗಿಯರ ಸ್ನೋ ಪೌಡರ್ ಮಾರತೊಡಗಿದ್ದಳು. ಅಲ್ಲೇ ರೇಲ್ವೆ ಸ್ಟೇಷನ್‌ನಲ್ಲಿ ಹೋಗಿ ಬಂದು ಮಾಡಿ, ಅಂದರೆ ಮೈಮಾರಿ ಮಗಳನ್ನು ಸಾಕುವ ಧೈರ್ಯ ಮಾಡಿದಳು. ದಿನಗಳು ಕಳೆದು ಮೂಕಿ ಮಾದೇವಿ ತಾಯಾಗಲಿದ್ದಳು. ಮಾದೇವಿಗೆ ಏನನ್ನಿಸಿತು, ತುಳಸಮ್ಮನಿಗೆ ಏನನ್ನಿಸಿತು ಹೇಳುವುದು ಯಾರಿಗೆ? ಮಾದೇವಿ ಅವಳಿ ಮಕ್ಕಳನ್ನು ಹಡೆದಳು. ತುಳಸಮ್ಮ ಮಕ್ಕಳನ್ನು ಜೋಪಾನ ಮಾಡತೊಡಗಿದಳು. ಮಾದೇವಿ ಸಂಪಾದನೆಯ ಹಾದಿ ಹಿಡಿದಳು. ಕೆಲವೇ ಕಾಲ. ಅದೇನಾಯ್ತೋ, ಮಾದೇವಿ ಸುಟ್ಟ ರಕ್ತ ಸಿಕ್ತ ದೇಹದಿಂದ ಸಿಕ್ಕಳು. ಉಪಚಾರ ಫಲಿಸದೆ ಸತ್ತಳು. ಎಳೆಯ ಮಕ್ಕಳಿಗಾಗಿ ತುಳಸಮ್ಮ, ಮಗಳು ಮಾದೇವಿಯ ಟ್ರಂಕು ತೆಗೆದು ಅವಳ ರವಿಕೆ, ಸೀರೆ, ಪೌಡರು ಉಪಯೋಗಿಸಿ ಇಳಿಸಂಜೆಗೆ ರೇಲ್ವೆ ಸ್ಟೇಷನ್ನಿನ ಹಾದಿ ಹಿಡಿದಳು. ಕೆಲವೇ ಕಾಲ. ಒಂದಿನ ಮುದುಕಿ ತುಳಸಮ್ಮ ಬಸವೇಶ್ವರ ಲಾಡ್ಜಿನ ಶವವಾಗಿದ್ದಳು. "ಮುದುಕಿಗೆ ಹಗ್ಗ ತಿನ್ನೋ ಹೊಲಸು ಚಾಳಿ...." ಎಂದು ಜನ ಮಾತನಾಡಿಕೊಂಡರು. ಮರುದಿನದಿಂದಲೇ ರೇಣಿ ಮತ್ತು ಹನುಮ್ಯಾರ ಹೆಗಲಿಗೆ, ಪಾಟಿಚೀಲದ ಬದಲಿಗೆ ಹೇರಪಿನ್ನು-ರಿಬ್ಬನ್ನುಗಳ ಭಾರದ ಚೀಲ ಬಿತ್ತು.

ಬಡ ಹೆಣ್ಣುಗಳ ಮೈಮಾರುವ ಬದುಕಿನ ದುರಂತವನ್ನು ಹೇಳುವ ಅಗಣಿತ ಕಥೆಗಳ ಕೊಂಡಿಗೆ ಇದೊಂದು ಸೇರ್ಪಡೆ ಮಾತ್ರವಾಗಿ ಮೇಲ್ನೋಟಕ್ಕೆ ಕಾಣುತ್ತದೆ. ಆದರೆ ಈ ಕಥೆ ಬರೆಯಲ್ಪಟ್ಟ ಕಾಲ. ಈ ಕಾಲದಲ್ಲಿ ಸರ್ಕಾರಗಳು ಘೋಷಣೆ ಮಾಡಿದ್ದ ಜಾರಿಗೆ ತಂದಿದ್ದ ಯೋಜನೆಗಳು, ಈ ಯೋಜನೆಗಳಿಗಾಗಿ ವ್ಯಯವಾದ ಕೋಟ್ಯಂತರ ರೂಪಾಯಿಗಳು, ಕಡತಗಳಲ್ಲಿ ಇದರ ಫಲಾನುಭವಿಗಳಾಗಿದ್ದಾರೆ ಎಂದು ದಾಖಲಾದ ಅಸಹಾಯಕ ಹೆಣ್ಣುಗಳ ಅಂಕಿ-ಸಂಖ್ಯೆಗಳು ಮತ್ತು ಕಟ್ಟಕಡೆಯ ಮನುಷ್ಯರ ಅಸಹನೀಯ ವಾಸ್ತವಗಳ ತೌಲನಿಕ ನೋಟವನ್ನು ಕೊಡುವ ಕಾರಣಕ್ಕಾಗಿ ಕಥೆ ಮುಖ್ಯವೆನಿಸುತ್ತದೆ. ಅಭಿವೃದ್ಧಿಯ ಪಥದಲ್ಲಿ ಮುಂಚಲಿಸುತ್ತಿರುವ ಭಾರತದಲ್ಲಿ ಉಳಿಗಮಾನ್ಯ ವ್ಯವಸ್ಥೆಯಿಂದ ಬಂಡವಾಳಶಾಹಿ ವ್ಯವಸ್ಥೆಗೆ ಬಂದರೂ ಹೆಣ್ಣುಗಳನ್ನು ಬರಿಯ ದೇಹವೆಂದು ನೋಡುವ ; ಅವರ ಪ್ರೀತಿಯ ನಂಬಿಕೆಗೆ ಬೆನ್ನು ತಿರುವುವ ಪರಂಪರೆಯೇನು ನಿಂತಿಲ್ಲ. ಅದು ಭಾರತದ ಸಂಸ್ಕೃತಿಯೇ ಅನ್ನಿಸುವಷ್ಟು ಬದುಕಿನೊಂದಿಗೆ ಅಂಟಿಹೋಗಿದೆ. ಭಾರತ ಬದಲಾಗುತ್ತಿದೆ. ರೈಲುಗಳು ಫಾಸ್ಟನಿಂದ ಸೂಪರ್ ಫಾಸ್ಟಗೆ ಬದಲಾಗಿವೆ. ಮೆಟ್ರೋ ಬಂದಾಗಿದೆ. ಆದರೆ ರೇಲ್ವೆ ಸ್ಟೇಷನ್ನುಗಳ ಸಂಜೆಗಳಲ್ಲಿ ಹೊಟ್ಟೆಹೊರೆಯಲಿಕ್ಕಾಗಿ ಮೈ ಚಾಚುವ ಹೆಂಗಸರ ದುರವಸ್ಥೆ ಮಾತ್ರ

ಬದಲಾಗಲಿಲ್ಲ. ಭಾರತೀಯರ ಶಿಕ್ಷಣದ ಮಟ್ಟ, ನಾಗರೀಕತೆಯ ರೇಶ್ಯೂ, ತಲಾ ಆದಾಯ ಏನೇ ಬದಲಾದೀತು. ಆದರೆ ಮನುಷ್ಯರು ಮನುಷ್ಯರನ್ನು ಬಳಕೆಯ ಪದಾರ್ಥಗಳಾಗಿಸಿಕೊಳ್ಳುವ ಸಾಂಕ್ರಾಮಿಕ ರೋಗಕ್ಕೆ ಮಾತ್ರ ಮುಕ್ತಾಯವಿಲ್ಲ. ಲೈಂಗಿಕ ಪದಾರ್ಥಗಳಾಗಿ ಬಳಕೆಗೊಳ್ಳುವ, ಬದುಕಿನ ವಿದ್ರಾವಕ ಅಗೌರವದ ಅಂತ್ಯ ಕಾಣುವ ಹೆಣ್ಣುಗಳ ಸ್ಥಿತಿ ಎಷ್ಟು ಕಿತ್ತರೂ ಮತ್ತೆ ಚಿಗುರುವ ಕರಕಿಯ ಕುಡಿಯಾಗಿದೆ ಎಂಬ ವಿಷಾದ ವ್ಯಂಗ್ಯವನ್ನು ಕರ್ಕಿಬೇರು ಕಥೆಯು ನಿರೂಪಿಸುತ್ತದೆ.

ಡ್ರೈಡನ್ ಎಂಬ ವಿಮರ್ಶಕ ಹೇಳುತ್ತಾನೆ. "ಜೀವನ ಚರಿತ್ರೆ ಯಾವ ಕಲ್ಪಕತೆಗಿಂತಲೂ ದಟ್ಟವಾದದ್ದು" ಜಯಂತ್ ಕಾಯ್ಕಿಣಿಯವರ ಕಥೆಗಳನ್ನು ಓದುವಾಗ ಈ ಮಾತು ನೆನಪಾಗುತ್ತದೆ. ಯಾಕೆಂದರೆ, ಜಯಂತ್ ಬದುಕಿನ ವಾಸ್ತವದಲ್ಲಿ ಅದ್ದಿ ತೆಗೆದಂತಹ ಕಥೆಗಳನ್ನು ಕೊಟ್ಟಿದ್ದಾರೆ. ನಮ್ಮ ಸುತ್ತಲೇ ಇರುವ, ಆದರೆ ನಮ್ಮ ಪ್ರಜ್ಞೆಯಿಂದ ಮರೆಯಾಗಿರುವ ಬದುಕುಗಳನ್ನು ಅವುಗಳ ಗಹನ ಅಸ್ಮಿತೆಯೊಂದಿಗೆ ಕಣ್ಣೆದುರು ಜೀವಂತಗೊಳಿಸುವ ಶಕ್ತಿ ಜಯಂತರ ಕಥೆಗಳಿಗಿದೆ. ಇಡೀ ಜೀವನ ವಿನ್ಯಾಸವು ಅಧಿಕಾರ ಕೇಂದ್ರದ ಕಡೆಗೆ, ಸಾಂಸ್ಕೃತಿಕ ಕೇಂದ್ರದ ಕಡೆಗೆ, ಧಾರ್ಮಿಕ ಕೇಂದ್ರದ ಕಡೆಗೆ ತನ್ನ ದೃಷ್ಟಿಯನ್ನು ಕೇಂದ್ರೀಕರಿಸಿರುತ್ತದೆ. ಇದರ ಒತ್ತಡದಿಂದ ಸಿಡಿದು ಅಂಚಿಗೆ ಬಿದ್ದ ಜೀವಜಾತರೆಯನ್ನು ಗಮನಿಸುವುದಿಲ್ಲ. ಆದರೆ ಜಯಂತ್, ಅಂಚಿನಲ್ಲಿ ನಿಂತು, ಅಂಚಿನ ಬದುಕನ್ನು ಕಂಡುಕೊಳ್ಳುವ ಮೂಲಕ ಕೇಂದ್ರವನ್ನು ಸ್ಪಷ್ಟೀಕರಿಸಿಕೊಳ್ಳುವ ದಾರಿಯನ್ನು ಹಿಡಿಯುತ್ತಾರೆ.

ಕಳೆದ ಮೂರು ದಶಕಗಳ ಭಾರತದ ಸಾಂಸ್ಕೃತಿಕ ಜಗತ್ತನ್ನು ಆಳಿದ್ದು ದೃಶ್ಯ ಮಾಧ್ಯಮ. ಸಿನಿಮಾ ಲೋಕದ ಹಿರೋ ಹಿರೋಯಿನ್‌ಗಳು ಜನಸಮೂಹದ ಆಕರ್ಷಣೆಯ ಕೇಂದ್ರವಾದರು. ಸಿನಿಮಾಗಳ ಅಭಿನಯಕ್ಕೂ ಅವರ ನಿಜವಾದ ವ್ಯಕ್ತಿತ್ವಕ್ಕೂ ವ್ಯತ್ಯಾಸ ಇರಬಹುದು ಎಂಬುದನ್ನೂ ಒಪ್ಪಿಕೊಳ್ಳಲಾಗದ ಮಟ್ಟಿಗಿನ ಜನರ ಮಂಕುತನವಂತೂ ಅಪ್ರಮೇಯವೆನಿಸಿತ್ತು. ಬಂಡವಾಳವಾದ ಕೂಡ ಇಂತಹ ನಾಯಕ-ನಾಯಕಿಯರನ್ನು ಬಳಸಿಕೊಂಡು ಜನರನ್ನು ಗಿರಾಕಿಗಳನ್ನಾಗಿ ಬೆಳೆಸುತ್ತದೆ. 'ತೂಫಾನ್ ಮೇಲ್' ಕಥೆ, ಸಿನಿಮಾದ ಸ್ಟಂಟ್ ಕಲಾವಿದ ತೂಫಾನ್ 'ತನ್ನ ಕಥೆಯನ್ನು, ತನ್ನಂತೆಯೇ ಡಾನ್ಸಿನ ಸೈಡ್‌ವಿಂಗ್ ಕಲಾವಿದೆಯಾದ ಮಧುವಂತಿಯ ಮುಂದೆ ಅಯಾಚಿತವಾಗಿ ಹೇಳಿಬಿಡುತ್ತಾನೆ. ಇದು ಕಥೆಯ ಆರಂಭ. ತೂಫಾನ್‌ನ ಬದುಕಿನ ಆ ಮುಚ್ಚಿಟ್ಟ ಗಾಯವನ್ನು ಅಷ್ಟೊಂದು

ಅಚಾನಕ್ಕಾಗಿ ಅವನು ಯಾಕೆ ತೆರೆದನೆಂಬುದೇ ಅವನಿಗೆ ಗೊತ್ತಿಲ್ಲ. ದಂಡೆಯಿಂದ ದೂರದಲ್ಲಿರುವ ಹಡಗಿನಲ್ಲಿ ಯೂನಿಟ್ ಹುಡುಗರು ಗಾಜಿನ ಸೆಟ್ ರೆಡಿ ಮಾಡುತ್ತಿರುವ ಮಧ್ಯಂತರದ ವಿರಾಮದಲ್ಲಿ ತೂಪಾನ್‌ನಿಗೆ, ಈಗ ಬಿಟ್ಟರೆ ಇನ್ನೆಂದೂ ಹೇಳಲು ಸಾಧ್ಯವಿಲ್ಲ ಎಂಬ ಒತ್ತಡದಲ್ಲಿ ತಾನು ಯಾಕೆ ತನ್ನ ಕಥೆ ಹೇಳಿಕೊಂಡೆ ಎಂದು ಕೇಳಿದರೆ: ಬಹುಶಃ ಉತ್ತರ ಇರಲಿಲ್ಲ. ಮಧುವಂತಿಗೆ ಆ ಕಥೆಯನ್ನು ಕೇಳಿ ಉಂಟಾದ ದಿಗ್ಭ್ರಮೆಯಲ್ಲಿ ಮಾತೂ ಹುಟ್ಟಲಿಲ್ಲ– ಮುಂಬೈಯ ತೇಲಿಗಲ್ಲಿಯಲ್ಲಿ ಮಾ ಮತ್ತು ಇವನು ಇಬ್ಬರೇ ಇರುವ ಖೋಲಿ ಎಂಬ ಮನೆ. ವಾರದ ಒಂದು ನಿರ್ಧಿಷ್ಟ ದಿನದ ನಸುಕಿನಲ್ಲಿ ಸದ್ದಾಗದಂತೆ ಮನೆಯಿಂದ ಬರಿಗಾಲಲ್ಲಿ ಓಡುನಡಿಗೆಯಲ್ಲಿ ಹೋಗಿ, ಮುಖ್ಯರಸ್ತೆಗೆ ಬಂದು ಕೈಯಲ್ಲಿದ್ದ ಚಪ್ಪಲಿ ಹಾಕಿಕೊಂಡು ಅಲ್ಲಿಂದ ಅಂಧೇರಿ ಸ್ಟೇಷನ್ನಿಗೆ ಓಡಿ, ಅಲ್ಲಿಂದ ಟಿಕೆಟ್ ತಗೊಂಡು ಮೊದಲ ಲೋಕಲ್ ಟ್ರೇನ್ ಹಿಡಿದು ಥೈಸರ್ ಸ್ಟೇಷನ್ನಿನಲ್ಲಿ ಇಳಿಯುವುದು. ಅಲ್ಲಿ ಒಂದು ನಿರ್ಧಿಷ್ಟ ಮೂಲೆಯಲ್ಲಿ ಮಾ ಪದೇ ಪದೇ ಶ್ ಶ್ ಎಂದು ವಿನಾಕಾರಣ ತನ್ನನ್ನೋ ಜಗತ್ತನ್ನೋ ಸುಮ್ಮನಿರಿಸಲು ಯತ್ನಿಸುತ್ತಿರುವುದನ್ನು ನೋಡುತ್ತ ನಿಲ್ಲುವುದು. ನಸುಕಿನ ನಾಲ್ಕೂ ಕಾಲು ಆಗಲು ಬಂದಂತೆ ಇಬ್ಬರೂ ಅಧೀರರಾಗುವುದು. ಅದೀಗ ಉತ್ತರದ ಕಡೆಯಿಂದ ಬರುವ 'ತೂಫಾನ್ ಮೇಲ್' ಶರವೇಗದಲ್ಲಿ ಬರುತ್ತದೆ. ಅದರ ರಭಸಕ್ಕೆ ನಿಲ್ದಾಣದ ಕಸಕಡ್ಡಿಗಳೆಲ್ಲ ಹಾರಿಹೋಗುತ್ತವೆ. ಅಂತಹ ಟ್ರೈನ್‌ನಿಂದ ಹೊಟ್ಟೆಗೊಂದು ಪೊಟ್ಟಣವನ್ನು ಕಟ್ಟಿಕೊಂಡಿರುವ ಅಪ್ಪ ಜಿಗಿಯುತ್ತಾನೆ. ಪ್ರಾಣಾಂತಿಕವಾಗಿ ಉರುಳಿ ಹೇಗೆ ಹೇಗೋ ಸಂಭಾಳಿಸಿಕೊಂಡು, ನಿಧಾನ ಕುಂಟುತ್ತ ಎದ್ದು ಕೈಲಿದ್ದ ಚೀಲವನ್ನು ಇವರ ಕಡೆ ಎಸೆದು, ಹೊಟ್ಟೆಗೆ ಕಟ್ಟಿದ ಪೊಟ್ಟಣದೊಂದಿಗೇ ತನಗಾಗಿ ಕಾದಿರುವ ಇಬ್ಬರನ್ನು ಸೇರಿಕೊಂಡು ಮರೆಯಾಗಿಬಿಡುತ್ತಿದ್ದ. ಒಂದರ್ಧ ನಿಮಿಷ ಇವರತ್ತ ನೋಡಿ ಕೈಬೀಸಿ ಮರೆಯಾದ ಅಪ್ಪನ ಮುಖವನ್ನು ಮರೆಯುವುದು ಆಗುತ್ತಿರಲಿಲ್ಲ. ಮನೆಗೆ ಬಂದ ಚೀಲದಲ್ಲಿ ಬಟ್ಟೆ, ಆಟಿಗೆ, ತಿಂಡಿ ಕೆಲವೊಮ್ಮೆ ಹಣದ ಗಂಟು ಇರುತ್ತಿತ್ತು. ಕ್ರಮೇಣ ಹೀಗೆ ಅಪ್ಪ ಜಿಗಿಯಲೇ ಇಲ್ಲ. ಮಾ ಹೋಗಿ ಹೋಗಿ ಬಂದು, ಕೊನೆಗೊಂದು ದಿನ ಅವಳೂ ಇಲ್ಲವಾದಳು. ಆದರೆ ತೂಫಾನ್ ಮೇಲ್ ಮಾತ್ರ ನಿಗೂಢವಾಗಿ ಬದುಕನ್ನು ಸೀಳಿ ಹೋಗುತ್ತಲೇ ಇತ್ತು. ಹಾಗಾಗಿ, ಮುನ್ನಾ ಅಂತಿದ್ದ ನನ್ನ ಹೆಸರನ್ನು ತೂಫಾನ್ ಅಂತ ಬದಲಿಸಿಕೊಂಡೆ. ಅಸೀಮ ಸಾಹಸಿ ಅಪ್ಪ ಮತ್ತು ನಿರ್ಭೀತಿಯಿಂದ ನನ್ನನ್ನು ಬೆಳೆಸಿದ ಮಾ ಇಬ್ಬರು ನನ್ನೊಂದಿಗೆ ಇದ್ದಾರೆ ಅನ್ನಿಸಿತ್ತು.– ಇದು ತೋಫಾನನ ಕಥೆ.

ತೂಫಾನನ ಬದುಕಿನಲ್ಲಿ ಅಸ್ಪಷ್ಟ ಆಕೃತಿಯಾಗಿ, ನೋವಿನ ಕೈಬೀಸಿನ ನೆನಪಾಗಿ ಉಳಿದುಬಿಟ್ಟ ಅಪ್ಪ ; ಮೌನ ಮತ್ತು ತಹತಹದಲ್ಲಿಯೇ ಬದುಕನ್ನು ಅರ್ಧ ವಿರಾಮವಾಗಿಸಿ ಹೊರಟು ಹೋದ ಮಾ- ಈ ನೆನಪನ್ನು ಬಿಟ್ಟರೆ ಅಷ್ಟು ಗಿಜಿಗುಡುವ ಮುಂಬೈಯಲ್ಲಿ ಅವನು ಒಬ್ಬಂಟಿ. ಅಪ್ಪನ ಸಾಹಸದ ನೆನಪಿಗೆಂಬಂತೆ, ಆ ನೆನಪೇ ಸ್ಫೂರ್ತಿಯೆಂಬಂತೆ ಅವನೀಗ ಸ್ಟಂಟ ಕಲಾವಿದ. ಮಧುವಂತಿಯ ಮುಂದೆ ಅವನು ತನ್ನ ನೆನಪನ್ನು ಹೇಳಿಕೊಳ್ಳುತ್ತಾನಾದರೂ ಅವಳು ಅವನಿಗೆ ತೀರ ಹತ್ತಿರದವಳೇನೂ ಅಲ್ಲ. ಶೂಟಿಂಗ್‌ನ ಒಂದೇ ಲೋಕೇಶನ್ನಿನಲ್ಲಿ ಆಕಸ್ಮಿಕವಾಗಿ ಭೇಟಿಯಾಗುವ ಸೈಡ್‌ವಿಂಗ್ ಕಲಾವಿದರು ಅವರು. ತೂಫಾನ್ ಸ್ಟಂಟ ದೃಶ್ಯಗಳಿಗೆ ಮತ್ತು ಗ್ಲಾಸ್ ಬ್ರೇಕಿಂಗ್ ದೃಶ್ಯಗಳಿಗೆ, ಕೆಲವೊಮ್ಮೆ ಸಿನೆಮಾದ ಹಿರೋಗಳ ಡ್ಯೂಪ್ ಆಗಿ ಕೆಲಸ ಮಾಡುತ್ತಾನೆ. ಆದರೆ ಅವನ ಪ್ರಾಣಕ್ಕೆ ರಕ್ಷಣೆ ಕೊಡಬಲ್ಲ, ಸರಿಯಾದ ವ್ಯವಸ್ಥೆಯನ್ನು ಸಿನಿಮಾ ಸೆಟ್‌ಗಳ ಲೋಕೇಶನ್‌ಗಳಲ್ಲಿ ಮಾಡಲಾಗಿರುವುದಿಲ್ಲ. ಪ್ರತಿಯೊಂದು ಸಿನಿಮಾದ ಒಂದೊಂದು ಶೂಟಿಂಗ್ ದೃಶ್ಯಗಳೂ, ತೂಫಾನನ ಅಪ್ಪ ತೂಫಾನ್ ಮೇಲ್‌ನಿಂದ ಜಿಗಿಯುತ್ತಿದ್ದ ದೃಶ್ಯಗಳಷ್ಟೇ ಅಪಾಯಕಾರಿಗಳು. ಇನ್ಸೂರನ್ಸ್, ಮೆಡಿಕಲ್ಲು ಇಂತಹ ಯಾವ ಮುಂಜಾಗ್ರತೆಯನ್ನೂ ಸಿನಿಮಾ ನಿರ್ದೇಶಕರು ನಿರ್ವಹಿಸುವುದಿಲ್ಲ. ಹಾಗಾಗಿಯೇ ಹೆಂಡತಿ ಮಗಳು ಎಂದು ಸಂಸಾರದ ರುಚಿ ಹತ್ತಿರುವ ಮಧುವಂತಿಯ ಗಂಡ ಬಲದೇವ್ ಫೈಟಿಂಗ್ ದೃಶ್ಯಗಳಿಗೆ ಕರೆ ಬಂದರೂ, ಹೋಗದೇ ಮನೆ ಹಿಡಿದಿದ್ದಾನಂತೆ.

ಇನ್ನು ಮಧುವಂತಿ, ಮಧ್ಯವಯಸ್ಸಿನ ದೇಹ ಹೊತ್ತುಕೊಂಡು, ಸಂಸಾರ ನಡೆಸುವ ತಾಪತ್ರಯದ ಕಾರಣಕ್ಕಾಗಿ, ಎಲ್ಲಾ ರಾಜಿ ಸಂಧಾನಕ್ಕೂ ಒಪ್ಪಿಕೊಂಡು ಸೈಡ್‌ವಿಂಗ್ ಆರ್ಟಿಸ್ಟ ಆಗಿ ದುಡೀತಿರುವವಳು. 'ಲಂಚಲ್ಲಿ ನಾನ್‌ವೆಜ್ ತಗೋ, ನೀ ತಿನ್ನೋದಿಲ್ಲ ಗೊತ್ತು. ಆದರೆ ನಾನು ಪ್ಯಾಕ್ ಮಾಡಿಕೊಂಡು ಹೋಗ್ತೇನೆ. ಸೋನಿಗೆ ಯೂನಿಟ್‌ನ ನಾನ್‌ವೆಜ್ ಅಂದ್ರೆ ಪಂಚ ಪ್ರಾಣ" ಅಂತ ಮಧುವಂತಿ ತೂಫಾನ್‌ಗೆ ಕೇಳುತ್ತಾಳೆ. ಒಂದು ಊಟದ ಪ್ಯಾಕ್‌ಗಾಗಿ ಇಷ್ಟೆಲ್ಲ ಪರಿತಪಿಸಬೇಕಾದ ಸ್ಥಿತಿಯಲ್ಲಿ ಅಂಚಿನ ಕಲಾವಿದರಿರುತ್ತಾರೆ. ಸಿನೆಮಾ ಕೋಟ್ಯಂತರ ರೂಪಾಯಿಗಳ ಹೂಡಿಕೆಯಲ್ಲಿ ನಿರ್ಮಾಣವಾಗಿರುತ್ತದೆ. ಸಿನೆಮಾದ ನಾಯಕ-ನಾಯಕಿಯರಿಗಾಗಿ ಲಕ್ಷಾಂತರ ರೂಪಾಯಿಗಳನ್ನು ವ್ಯಯಿಸಲಾಗಿರುತ್ತದೆ. ಆದರೆ ಅಂಚಿನ ಕಲಾವಿದರ ಪರಿಸ್ಥಿತಿ ಮಾತ್ರ ನಾಯಿಪಾಡೇ. ತುಂಬ ಕಠಿಣ ಗ್ಲಾಸ್‌ಬ್ರೇಕ್ ಶಾಟ್‌ಗೆ ಕೂಡ ತನ್ನ ಎಂದಿನ ಅದೇ 70 ಸಾವಿರ ಪಡೆವ ತೂಫಾನ್‌ನ ದಡ್ಡತನವನ್ನು ತಿದ್ದುವ, ಎರಡು ಪಟ್ಟು ಕೇಳು ಎಂದು ಹೇಳುವ ಮೇಕಪ್ ಮಹಾಲೆಯ ಮಾತನ್ನು ತೂಫಾನ್ ಸರಿಸಿಬಿಟ್ಟು,

ನಿಯತ್ತಿನ ಮಾತನಾಡುತ್ತಾನೆ. ಪ್ರತಿಯೊಂದು ಸ್ಟಂಟ ನಂತರವೂ ಅಂಬ್ಯುಲೆನ್ಸ್, ಸ್ಟ್ರೆಚರು, ಗಾಯ, ಆಸ್ಪತ್ರೆ, ಅಜ್ಞಾತವಾಸಗಳು ಇರುವುದೇ. ಸ್ಟಂಟ ದೃಶ್ಯದ ಮೊದಲಿನ ವಿಚಿತ್ರ ಶೂನ್ಯ, ಆ ನಂತರದ ಹಗೂರ ಭಾವ, ಏನೂ ಯೋಚನೆಗೆ ಅವಕಾಶವಿಲ್ಲದೆ ನಡೆದುಹೋಗುವ ಶಾಟ್ ಇವುಗಳಲ್ಲಿ ಅಸಲೀ ಮಜಾ ಯಾವುದು ಎಂಬ ಭಾವ ಕಾಡುತ್ತಿದ್ದಂತೆ ತೂಫಾನನ ಕಣ್ಣುಗಳಲ್ಲಿ ಮೂಡಿ ದೇಹ ಹೊಕ್ಕಂತಾಗುವುದು ಅದೇ ತೂಫಾನ್ ಮೇಲ್.

ಮಧುವಂತಿ, ಮನೆಯಲ್ಲಿ ತನ್ನೊಂದಿಗೆ ಹೆಂಡತಿಯಾಗಿರುವಾಗ ನಾಚುತ್ತಾಳೆ ಎನ್ನುವ ನೆಪ ಇಟ್ಟುಕೊಂಡು, ಸಿನಿಮಾದ ಶಾಟ್‌ನಲ್ಲಿ ಅವಳ ವರ್ತನೆ ಹೇಗಿರುತ್ತದೆ ಎನ್ನುವುದನ್ನು ಕದ್ದು ನೋಡಲು ಬಂದು ಕೂತ ಬಲದೇವ್ ಮತ್ತು ಮಧುವಂತಿಯ ಜಗಳ, ತೂಫಾನ್‌ವರೆಗೂ ಬರುತ್ತದೆ. ಬಲದೇವ್, ಮಧುವಂತಿಯನ್ನು ಹೊಡೆಯಲು ಅಟ್ಟಿಸಿಕೊಂಡು ಬರುತ್ತಾನೆ. ಹಾಗಿದ್ದರೆ, ಬಲದೇವ್‌ಗೆ ಬೇಕಿರುವುದೇನು? ಅವನಿಗೇ ಸ್ಪಷ್ಟವಿಲ್ಲ. ಬಲದೇವ್ ಮಧುವಂತಿಯನ್ನು ಮದುವೆಯಾಗುವಾಗಲೂ ಅವಳು ಇದೇ ಕೆಲಸ ಮಾಡುತ್ತಿದ್ದಳು. ಈಗಲೂ ಮಾಡುತ್ತಿದ್ದಾಳೆ. ಅವಳು ಹಾಗೆ ಮೈ ಕುಣಿಸುವುದು ಬೇಡ ಎಂದಾದರೆ ಆ ಕೆಲಸವೂ ಇರದು. ಊಟವೂ ಇರದು. ಹಾಗಂತ ಅವಳನ್ನು ಹಾಗೆ ನೋಡುವುದು ಬಲದೇವ್‌ನಿಗೆ ಕಿರಿಕಿರಿಯಾಗುತ್ತಿದೆ. ಬಡತನದ ಅಸಹಾಯಕತೆ ಮತ್ತು ಭಯ ತಂದು ಒಟ್ಟುವ ಅಸ್ವಸ್ಥತೆಯದು. ಫೈಟಿಂಗ್ ಆ್ಯಕ್ಟರ್ ಬಲದೇವ್, ತೂಫಾನ್‌ನ ಹೆಗಲ ಮೇಲೆ ತಲೆಯಿಟ್ಟು ಬಿಕ್ಕುತ್ತಾನೆ. ಆ ಕ್ಷಣಕ್ಕೆ ಗಂಡ–ಹೆಂಡಿರ ಜಗಳ ನಿಂತಂತಾಗುತ್ತದೆ. ತೂಫಾನ್‌ನ ಶಾಟ್ ರೆಡಿಯಾಗುತ್ತದೆ. ಆ ಗಳಿಗೆಯಲ್ಲಿ ತೂಫಾನ್‌ನಿಗೆ ಗುಡಲಕ್ ಹೇಳಿ, ಭಾರದ ಹೆಜ್ಜೆಯೂರತ್ತ ಹೋದ ಮಧುವಂತಿಯನ್ನು ನೋಡುವಾಗ ; ತೂಫಾನ್‌ಗೆ ತನ್ನ ಗತಿಸಿ ಹೋದ ಮಾ ನೆನಪಾಗುತ್ತಾಳೆ. ಅವಳೂ ಹೀಗೆ ಅಪಮಾನದ ಲಜ್ಜೆಯ ಭಯದಿಂದ ಕುಗ್ಗಿಹೋಗುತ್ತಿದ್ದಳು ಎನಿಸುತ್ತದೆ. ಆಗ ಮಾ ಕೂಡ ಈಗಿನ ಮಧುವಂತಿಯ ವಯಸ್ಸಿನವಳು. ಅವಳು ಮತ್ತೆ ಮತ್ತೆ ಉಸುರುತ್ತಿದ್ದ ಶ್‌ಶ್‌ಶ್. ಲಜ್ಜೆಯ ಸ್ವರವಾಗಿತ್ತೇ? ಅಪಮಾನವನ್ನು ಮೀರುವ ಆಸರೆಯಾಗಿತ್ತೇ? – ಎಂಬ ಪ್ರಶ್ನೆ ಕಲಕುತ್ತದೆ.

ತನ್ನೊಳಗಿನ ಈ ಎಲ್ಲ ಸದ್ದುಗಳನ್ನೂ ಧ್ವನಿಗಳನ್ನೂ ಅಡಗಿಸಿ, ತದೇಕ ಚಿತ್ತದಿಂದ ತೂಫಾನ್, ಆ ಭಯಂಕರ ರಿಸ್ಕಿನ ಶಾಟ್‌ಗೆ ತಯಾರಾಗುತ್ತಾನೆ. ಅವನೊಳಗೆ ತೂಫಾನ್ ಮೇಲ್‌ನ ಆ ಸದ್ದು ಮಾತ್ರವೇ ಹೊಕ್ಕತೊಡಗುತ್ತದೆ.

ಈ ಕಥೆ, ಮನರಂಜನೆಯ ಉದ್ಯಮದಲ್ಲಿ ಮನುಷ್ಯ ಜೀವಗಳು ಅದೆಷ್ಟು ಚೀಫ್ ಆಗಿವೆ ಎಂಬುದನ್ನು ಕಾಣಿಸುತ್ತದೆ. ಇತ್ತೀಚಿನ ವರ್ಷಗಳಲ್ಲಿ ಇಂತಹ ಸಾಹಸ ಶಾಟ್‌ಗಳಲ್ಲಿ ಸರಿಯಾದ ಜೀವಭದ್ರತೆಯ ಮುಂಜಾಗ್ರತೆಗಳನ್ನು ತೆಗೆದುಕೊಳ್ಳದ ಕಾರಣಕ್ಕಾಗಿ, ಪ್ರಾಣ ಕಳೆದುಕೊಂಡ ಕಲಾವಿದರನ್ನು ನೆನಪಿಸಿಕೊಂಡಾಗ; ಕಥೆಯು ಮುಂದಿಡುವ ಪ್ರಶ್ನೆಯು ಅರ್ಥವಾಗುತ್ತದೆ. ಹೊಟ್ಟೆಗೇನೋ ಪೆಟ್ಟಿಗೆ ಕಟ್ಟಿಕೊಂಡು ತೂಫಾನ್ ಮೇಲ್ ಜಿಗಿಯುವ ಅಪ್ಪ, ಮೈ ತುಂಬ ಕವಚ ಧರಿಸಿ ಗಂಡಾಂತರದ ಶಾಟ್‌ಗೆ ನುಗ್ಗುವ ತೂಫಾನ್.... ಅದೇ ಸ್ಥಿತಿ. ಸಂದರ್ಭ–ಸನ್ನಿವೇಷಗಳು ಮಾತ್ರ ಬದಲಿ ಆಗಿವೆ. ಯಾವುದೋ ಅದೃಶ್ಯ ಬಂಡವಾಳಶಾಹಿಗಳ ಕೋಟ್ಯಂತರದ ಲಾಭದ ವ್ಯವಹಾರದಲ್ಲಿ ನುಗ್ಗಾಗುವವರು ಬಡ ಶ್ರಮಿಕರು. ಒಂದು ಹೊತ್ತಿನ ಅನ್ನಕ್ಕಾಗಿ, ಸಂಸಾರ ಪ್ರೀತಿ–ಮಮತೆ ಎಲ್ಲದರಿಂದಲೂ ವಂಚಿತರಾದವರು. ಆದರೂ ಅವರ ಮನಸ್ಸುಗಳು ವಿಕಾರವಾಗಿಲ್ಲ. ಒರಟಾಗಿಲ್ಲ. ತೂಫಾನನಿಗೆ ಮಧುವಂತಿಯಲ್ಲಿ ಮಾ ನೆನಪಾಗುತ್ತಾಳೆ. ಮಧುವಂತಿಯಂತಹ ಅದೆಷ್ಟೋ ಎಕ್ಸಟ್ರಾ ಕಲಾವಿದೆಯರು, ಯಾವುದೋ ಒಂದು ಕ್ಷಣದ ಹಾಡಿನ ದೃಶ್ಯಕ್ಕೆ ತಮ್ಮ ದೇಹವನ್ನು ಕುಣಿಸಬೇಕು. ಬಡವರು, ಹೆಂಗಸರಿರಲಿ ಗಂಡಸರಿರಲಿ ಅವರು ತಮ್ಮ ದೇಹವನ್ನೂ ಮೀರಬೇಕು. ಅದನ್ನು ಬಂಡವಾಳವಾದ ಯಾಜಮಾನ್ಯ ಹೇಗೆ ಸೂಚಿಸುತ್ತದೆಯೋ ಹಾಗೆ, ಮಣಿಸಬೇಕು– ಇದು ಅನ್ಯಾಯ ಎಂದು ಯಾರಿಗೂ ಅನ್ನಿಸದಷ್ಟು ಸಂಭಾಳಿಕೆಯಿಂದ ನಡೆಯುತ್ತದೆ. ಬದುಕಿನ ತೀರಾ ಅತಂತ್ರ ಸ್ಥಿತಿಯಲ್ಲೂ ಹತಾಶರಾಗದ, ಬದುಕನ್ನು ಸಲಹುವ ಧಾತು ಯಾವುದು? ಸಮಾಜದ ಪ್ರಧಾನ ಸ್ತರದಲ್ಲಿ, ವರ್ಗ, ಜಾತಿ, ಧರ್ಮ, ಕುಲಗಳೆಲ್ಲ ಮುಖ್ಯಾತಿಮುಖ್ಯವಾಗುತ್ತಿರುವಾಗ; ಈ ಅಂಚಿನ ಬದುಕುಗಳಿಗೆ ಇದ್ಯಾವುದೂ ಲೆಕ್ಕಕ್ಕೂ ಮುಖ್ಯವಾಗುವುದಿಲ್ಲ. ಪರಸ್ಪರರ ಸಂಬಂಧಗಳಿಗೆ ಹೆಸರು ಕೊಡಲೂ ಸಾಧ್ಯವಿಲ್ಲದ, ಹೆಸರಿಡಲೂ ಆಗದ ಮಾನವೀಯತೆಯ ಸೆಲೆಯೇ ಈ ಜೀವಗಳನ್ನು ಪೋಷಿಸುವ, ಸಲಹುವ ಶಕ್ತಿಮೂಲ ಅನ್ನಿಸುತ್ತದೆ. ಬಂಡವಾಳವಾದದ ಒತ್ತಡದಲ್ಲಿ ಅಂಚಿನ ಜೀವಗಳು ಅನುಭವಿಸುತ್ತಿರುವ ವಿಷಾದವನ್ನು ಆರ್ದ್ರವಾಗಿ ಮುಂದಿಡುವ ಕಥೆಯಿದು.

“ನಮ್ಮ ಕಣ್ಣ ಮುಂದೆ ನಮ್ಮ ಸಮಾಜದಲ್ಲಿ, ನಮ್ಮ ಪರಿಸರದಲ್ಲಿ ಬೇಕಾದಷ್ಟು ಸಮಸ್ಯೆಗಳು, ಬಿಕ್ಕಟ್ಟುಗಳು, ತಲ್ಲಣಗಳು ನಮಗೆ ಎದುರಾಗುತ್ತವೆ. ಅವುಗಳನ್ನು ನೋಡುವ ರಾಜಕೀಯ ಪ್ರಜ್ಞೆಯನ್ನು ಕಳೆದುಕೊಳ್ಳದಿದ್ದರೆ ಅವು ನಮ್ಮನ್ನು ಕಾಡುತ್ತವೆ. ಶಿಕ್ಷಣದ ವ್ಯಾಪಾರ, ರೈತರ ಸಾವು, ಗಣಿಗಾರಿಕೆ, ವಲಸೆ ಮುಳುಗಡೆ, ಕೃಷಿಯ ದಿವಾಳಿತನ, ಕೋಮುವಾದ, ಹಣದ ದಾಹ, ಭಯೋತ್ಪಾದನೆ, ಹಿಂಸೆ, ಜಾಗತೀಕರಣ, ಉದಾರೀಕರಣ,

ಖಾಸಗೀಕರಣದಿಂದ ಆಗುತ್ತಿರುವ ಪರಿಣಾಮಗಳು ಬರಹಗಾರರನ್ನು ಕಾಡಲೇಬೇಕು. ಇವೆಲ್ಲವುಗಳನ್ನು ವಿರೋಧಿಸಿ ಧ್ವಜ ಹಿಡಿದು, ಬೀದಿಯಲ್ಲಿ ಘೋಷಣೆ ಕೂಗುವ ಸಂದರ್ಭಗಳು ಕಮ್ಮಿಯಾಗಿರಬಹುದು. ಚಳುವಳಿಯ ರೂಪ ಬಂದಿಲ್ಲದಿರಬಹುದು. ಆದರೂ ಬಿಕ್ಕಟ್ಟುಗಳಿವೆ. ಬರಹಗಾರನಿಗೆ ಇನ್ನೇನು ಬೇಕು? ಇಷ್ಟಾಗಿಯೂ ಸಾಹಿತ್ಯ ಏನನ್ನು ಹೇಗೆ ಬಿಂಬಿಸಬೇಕು ಎನ್ನುವ ತಾತ್ವಿಕ ಪ್ರಶ್ನೆ ಬರಹಗಾರನಿಗೆ ಬಿಟ್ಟ ವಿಷಯ" – ಎಂದು ಹೇಳುವ ಅಮರೇಶ ನುಗಡೋಣಿಯವರು ಕನ್ನಡದ ಮಹತ್ವದ ಕಥೆಗಾರರು. ದಟ್ಟವಾದ ರಾಜಕೀಯ ಪ್ರಜ್ಞೆಯಿಂದ ಕಥೆಗಳನ್ನು ಬರೆದವರು. ಬರಹ ಕೂಡ ಚಳುವಳಿಯೇ ಎಂಬ ಸೈದ್ಧಾಂತಿಕ ಎಚ್ಚರದಿಂದ ಬರೆದವರು. ಸಮಕಾಲೀನವನ್ನು ಕಥೆಯ ಸೃಜನಶೀಲತೆಯಲ್ಲಿ ಅದ್ದಿ ತೆಗೆವ ಬರವಣಿಗೆಯ ಕುಶಲತೆಯನ್ನು ಪಡೆದವರು. ಇವರ 'ತಮಂಧದ ಕೇಡು' ಎಂಬ ಕಥಾ ಸಂಕಲನದ 'ಧರೆ ಉರಿದರೆ' ಎಂಬ ಕಥೆಯನ್ನು ಇಲ್ಲಿ ವಿಶ್ಲೇಷಣೆಗೆ ಆಯ್ದುಕೊಂಡಿದೆ. ಕನ್ನಡದ ಹಿರಿಯ ವಿಮರ್ಶಕರಾದ ಡಾ. ಎಚ್.ಎಸ್. ರಾಘವೇಂದ್ರರಾವ್ ಅವರು ಗುರ್ತಿಸುವಂತೆ– ನುಗಡೋಣಿಯವರ ಪ್ರಜ್ಞೆಯು ಸುತ್ತಲ ಬದುಕನ್ನೇ ಸೃಜನಶೀಲತೆಯ ಆದ್ಯತೆಯಾಗಿಸಿಕೊಂಡಿರುವುದು. ಅವರ ಸಂವೇದನೆಯಲ್ಲಿ ಆಳದ ನೋವಿದೆ. ಆ ನೋವು, ಕಲ್ಯಾಣ ಕರ್ನಾಟಕದ ಕನಸುಗಳು ಅದೆಲ್ಲಿ ಕಳೆದುಹೋದವು ಎಂಬ ಅನ್ವೇಷಕನ ನೋವು. ಆದರೆ ಕಥೆಯ ನಿರೂಪಣೆಯಲ್ಲಿ ಆ ನೋವಿನ ಖಾಸಗಿ ಎಳೆ ಹಾಯಿಸದೆ. ಕಥೆ ಹೇಳಬಲ್ಲ ನಿಪುಣತೆಯನ್ನೂ ಸಿದ್ಧಿಸಿಕೊಂಡವರು.

'ಧರೆ ಉರಿದರೆ' ಕಥೆಯು 'ಮನುಷ್ಯನಿಗೆ ಯಾವುದೂ ಸಾಲವಲ್ತು' ಎಂಬ ಭೋಗಸ್ಥಿತಿಯ ನೀಚಾತಿನೀಚ ಸ್ತರವನ್ನು ಎಳೆಎಳೆಯಾಗಿ ನಿರೂಪಿಸುತ್ತದೆ. ಇಡೀ ಕಥೆಯು ಹೈದ್ರಾಬಾದ್ ಕರ್ನಾಟಕದ ಗ್ರಾಮೀಣ ಬದುಕನ್ನು ಕಚ್ಚಾಸ್ಥಿತಿಯಲ್ಲಿಯೇ ಹಗೂರ ಧಾಟಿಯಲ್ಲಿ ವಿವರಿಸುತ್ತದೆ. ಆದರೆ ಮೇಲ್ನೋಟದ ಭಾಷಿಕ ಹಗೂರತನವು ಅದರ ಆಳದ ಗಾಂಭೀರ್ಯವನ್ನು ಜತನವಾಗಿಡುವ ಒಂದು ತಂತ್ರವಾಗಿ ಕಾಣುತ್ತದೆ. "ಊರುಕೇರಿ ಯಾವಾಗನ್ನ ನೋಡು ಒಂದಲ್ಲ ಒಂದು ಗದ್ದಲದಾಗ ಮುಳುಗಿರುತ್ತಿತ್ತು" ಎಂದು ಪ್ರಾರಂಭವಾಗುವ ಕಥೆಯು ಮನುಷ್ಯರ ನೀಚತನದ ಪರಮಾವಧಿಯನ್ನು ಕಾಣಿಸುತ್ತದೆ. ಈ ಕಥೆಯ ಮುಖ್ಯ ಪಾತ್ರ ಪರಕ್ಕ, ಬುದ್ಧಿಮಾಂದ್ಯ ಜನ್ಮವಾದ ಪರಕ್ಕನ ಅನಾಥ ಸ್ಥಿತಿ, ಆ ಅನಾಥತೆಯನ್ನು ಸಂಭಾಳಿಸಲು ಹೊರಡುವ ಸುಲ್ತಾನಮ್ಮನಂತಹ ಜೀವ, ಇಂತಹದೊಂದು ಪರಕ್ಕನ ದೇಹವನ್ನೂ ಕಬಳಿಸಿದ ಕ್ರೌರ್ಯ ಅದಕ್ಕಂಟಿಕೊಂಡು ಮಂಡಲ ಪಂಚಾಯ್ತಿ

ರಾಜಕಾರಣ, ದಲಿತ–ಮೇಲ್ಜಾತಿ ರಾಜಕಾರಣ, ಪೋಲಿಸ್ ರಾಜಕಾರಣ, ಊರ ಗೌಡ ಮಲ್ಕರಡ್ಡೆಪ್ಪನ ಮನೆತನದ ರಾಜಕಾರಣಗಳ ನೂರೊಂದು ಸಂಕೀರ್ಣ ಆಯಾಮಗಳು ಸೇರಿ ಈ ಕಥೆಯು ಮನುಷ್ಯ ಬದುಕಿನ ಸರಿ–ತಪ್ಪುಗಳ ಜಿಜ್ಞಾಸೆಗೆ ತೊಡಗಿಸುತ್ತದೆ.

ನಮ್ಮ ಸಾಮಾಜಿಕ ಸಂರಚನೆಯ ಯಾವುದೇ ಸ್ತರದಲ್ಲಿಯೂ ಹೆಣ್ಣು ಅಂಚಿನಲ್ಲಿರುವ ವಸ್ತು. ಅದರಲ್ಲೂ ಬುದ್ಧಿಮಾಂದ್ಯ ಸ್ಥಿತಿಯಲ್ಲಿ, ತಾಯಿಯಿಲ್ಲದ ಅನಾಥ ಸ್ಥಿತಿಯಲ್ಲಿ ಇದ್ದರಂತೂ ಅವಳು ಪಿತೃಪ್ರಾಧಾನ್ಯತೆಯ ಕಾಲೊರೆಸುವ ಬಟ್ಟೆಯಂತಾಗಿರುತ್ತಾಳೆ. ಇಂತಹ ವಿದ್ಯಮಾನವು ಜಾಗತೀಕರಣದ ವರ್ತಮಾನದಲ್ಲಿ ಇನ್ನಷ್ಟು ಅಮಾನವೀಯ ಸ್ವರೂಪವನ್ನು ಪಡೆದಿದೆ– ಎನ್ನುವುದನ್ನು ಈ ಕಥನವು ನಿರೂಪಿಸುತ್ತದೆ. ಪರಕ್ಕ, ಮಲ್ಕರಡ್ಡೆಪ್ಪನ ಮನೆಯ ದನ ಕಾಯೋ ದಗದದಲ್ಲಿರೋ ಹೆಣ್ಣು, ವಾಂತಿ ಮಾಡಿಕೋತ ಬಂದು ಸುಲ್ತಾನಮ್ಮನ ಮನೆಗೆ ಬಂದು ಬಿದ್ದುಕೊಂಡಿತು. ಪರಕ್ಕ ಬಸುರಾಗಿದ್ದಾಳೆ ಎಂಬ ವಿಷಯ ತಿಳಿದು ದಿಕ್ಕೆಟ್ಟ ಸುಲ್ತಾನಮ್ಮ ಅವಳನ್ನು ಬಡಿದುಬಿಟ್ಟಳು. ಏನು, ಯಾಕೆ ಎಂದೇನೂ ತಿಳಿಯದ, ಬುದ್ಧಿಮಾಂದ್ಯ ಜೀವ ಪರಕ್ಕ ಮತ್ತೆ ವಾಲಾಡುತ್ತ ಮಲ್ಕರೆಡ್ಡಪ್ಪನ ಮನಿ ಸೆಡ್ಡಿಗೆ ಬಂದು ಬಿದ್ದುಕೊಂಡಿತ್ತು. ಆದರೆ ಇಂಥ ಸುದ್ದಿ ಊರ ಹೆಂಗಸರ, ಪರಕ್ಕನ ಜೊತೆ ಕೂಡಿ ಆಡುತ್ತಿದ್ದ ದನಕಾಯೋ ಸಣ್ಣ ಸಣ್ಣ ಮಕ್ಕಳ ಬಯಲಾಟದ ನಗಿಯ ಸುದ್ದಿಯಾಗಿ; ಕಡೆಗದು ಊರಿನ ದಲಿತ ಯುವಕರು 'ಅನ್ಯಾಯ ಆಗಿದೆ' ಎಂದು ಮೈಮೇಲೆ ತಣ್ಣೀರು ಬಿದ್ದವರಂತೆ ಎಚ್ಚರಾಗಿ, ಮಲ್ಕರಡ್ಡೆಪ್ಪನ ಮಂಡಲ್ ಪಂಚಾಯಿತಿಯ ಅಧ್ಯಕ್ಷ ಪಟ್ಟದ ಕನಸನ್ನು ಕಸಿಯಲು ಉಪಾಯವನ್ನು ಮಾಡುತ್ತಾರೆ.

ಕಥೆಯಲ್ಲಿ, ಪರಕ್ಕನ ಜೊತೆಗೇ ದನ ಕಾಯುತ್ತಿದ್ದ, ಅವಳ ಮಂದಬುದ್ಧಿಯ ಮೌನದ ಒಡನಾಟದಲ್ಲಿದ್ದ ಹೈಕಳು, ಪರಕ್ಕ ಬಸಿರಿಯಾಗಿದ್ದಾಳೆ ಎಂಬ ಸುದ್ದಿಗೆ ನೋಯದೆ, ಅದನ್ನೊಂದು ನಗೆಯ ಸುದ್ದಿಯಾಗಿ ತಗೊಂಡು, ಗಂಡು–ಹೆಣ್ಣಿನ ಸಂಬಂಧದ ಬಗೆಗಿನ ತಮ್ಮ ಅರೆಬರೆ ಕೇಳಿಕೆಗಳನ್ನೇ ಬಯಲಾಟ ಮಾಡಿ ನಗುವುದು – ಹೆಣ್ಣಿಗೆ ಸಂಬಂಧಿಸಿದ ನೋವಿನ, ಅಪಮಾನದ ವಿಷಯಗಳು ಮನರಂಜನೆಯ ಸರಕಾಗಿಬಿಡುವ ದುರಂತದ ಸ್ಥಿತಿಯಿದೆ. ಪರಕ್ಕಗೆ ಏನೂ ತಿಳಿಯದು, ಯಾವ ಅರಿವೂ ಇಲ್ಲದ್ದು, ಮೈ ಮೇಲೆ ಲಂಗ–ಚೋಳಿ ಮ್ಯಾಲೆ ಸೀರೆ, ಅದರ ಮೇಲೆ ಗೋಣಿತಾಟು ಸುತ್ತಿಕೊಂಡು ಕೆದರಿದ ತಲೆಯಲ್ಲಿ ನಡೆದಾಡೋ ಕಸದ ರಾಶಿಯ ಹಂಗೆ ಕಾಲೆಳೆದುಕೊಂಡು ಹೋಗುವವಳು– ಎಂದು ಗೊತ್ತಿದ್ದೂ; ಅವಳಿಗಾಗಿ ಮಿಡಿವ ಒಂದೇ ಒಂದು ಜೀವ ಸುಲ್ತಾನಮ್ಮ ಸಿಟ್ಟಿನಿಂದ ಬಯ್ದು

ಪರಕ್ಕನನ್ನು ಚೆನ್ನಾಗಿ ಚಚ್ಚಿಬಿಡುವುದು ಪರಕ್ಕನ ಕಟ್ಟಕಡೆಯ ದೈನೇಸಿ ಸ್ಥಿತಿಯನ್ನು ಹೇಳುತ್ತದೆ. ಊರ ಗೌಡ ಮಲ್ಕರಡ್ಡೆಪ್ಪ, ತನ್ನ ದನಕರು ಕಾದು ಬಿದ್ದಿರಲು ಸುಲ್ತಾನಮ್ಮನ ಬೇಡಿಕೆಯಂತೆ ಪರಕ್ಕಗೆ ಅನುವು ಕೊಟ್ಟಿದ್ದಾನೆ. ಅವನಿಗೆ ಪರಕ್ಕಳ ಬಗ್ಗೆ ಒಳಿತು-ಕೆಡಕು ಯಾವ ಭಾವನೆಯೂ ಇಲ್ಲ. ಆದರೆ, ತನ್ನ ರಾಜಕೀಯ ವರ್ಚಸ್ಸಿಗೆ ಈ ಯಕಃಶ್ಚಿತ್ ಜೀವದಿಂದ ತೊಂದರೆಯಾಗುತ್ತದೆ ಎನ್ನುವುದಾದರೆ; ಅವಳನ್ನು ಎಲ್ಲಾದರೂ ದೂರ ಸಾಗಿಸಿ, ಅವಳ ಅಪ್ಪ ಕಜ್ಜಿ ಚೆನ್ನಯ್ಯನ ಬಳಿ ಹೇಳಿ ಸಾಗಹಾಕಲು ಯೋಚಿಸುವುದು- ಪರಕ್ಕ ನ್ಯಾಯ ಕೇಳುವ ಜೀವವಾಗಿಯೂ ಪರಿಗಣನೆಗೆ ಒಳಗಾಗದಿರುವ ಸ್ಥಿತಿಯ ಸೂಚಕವಾಗಿದೆ. ಮಲ್ಕರೆಡ್ಡಪ್ಪ ತನ್ನ ಆಳುಗಳಾದ ಹುಲುಗಯ್ಯಾ ಮತ್ತು ಲಿಂಗೇಶರಿಗೆ, ಆ ಕೆಲಸ ವಹಿಸಿಬಿಡುತ್ತಾನೆ. ಪರಕ್ಕಳನ್ನು ಸೆಡ್ಡಿನಿಂದ ಹೊರಗೆ ಎಳೆದು ಹಾಕಲು ಹೋದ ಅವರ ವರ್ತನೆಯಲ್ಲಿರುವ ಕುಚೋದ್ಯ, ಲಿಂಗೇಶನಂತೂ ಅವಳ ದೇಹದ ಮೇಲೆ ಕೈಯಾಡಿಸುವ ಅಸಭ್ಯತೆ, ಪರಕ್ಕಳಿಂದ ಬಡಿಸಿಕೊಂಡು ಹೆದರಿ ಬರುವುದು – ಅನಾಥ ಬುದ್ಧಿಮಾಂದ್ಯ ಹೆಣ್ಣು ಬರೀ ದೇಹವಾಗಿ ಕಾಣುವ, ಪುರುಷ ದೃಷ್ಟಿಯನ್ನು ಸೂಚಿಸುತ್ತದೆ. ಹುಲುಗಯ್ಯ ಮತ್ತು ಲಿಂಗೇಶರಿಗೆ ತಮ್ಮ ವರ್ತನೆ ಅಸಭ್ಯ, ಅನೈತಿಕ ಎನ್ನಿಸುವುದಿಲ್ಲ. ತಾಯಿಯ ನೆನಪಾಗುವುದಿಲ್ಲ. ಹೆಂಡತಿ ಮಕ್ಕಳೊಂದಿಗರೆಂಬುದೂ ಬೇಕಿರುವುದಿಲ್ಲ. ಅವರು ಕೆಟ್ಟವರೂ ಅಲ್ಲ. ಆದರೂ ಪರಕ್ಕನ ದೇಹದಾಸೆಯಿಂದ ಅವರು ಹಿಮ್ಮೆಟ್ಟುವುದು ಪರಕ್ಕನ ಕ್ರೂರ ಪ್ರತಿರೋಧಕ್ಕೆ ಮತ್ತು ಪೋಲಿಸರು ಬರುವವರಿದ್ದಾರೆ ಎಂಬ ಸುದ್ದಿಗೆ. ಆಧುನಿಕತೆಯಿಂದ ಅತ್ಯಾಧುನಿಕ ಕಾಲಕ್ಕೆ ಸರಿಯುತ್ತಿರುವಾಗಲೂ ಹೆಣ್ಣಿನ ಬದುಕು ಇನ್ನೂ ಇಕ್ಕಟ್ಟಿನದಾಗುತ್ತಿರುವುದನ್ನು ಕಥೆ ಸೂಚಿಸುತ್ತದೆ.

ಪೋಲಿಸರ ವಿಚಾರಣೆಯ ಸನ್ನಿವೇಶವಂತೂ ಮಾನವೀಯತೆಯ ಸ್ಪರ್ಶವೇ ಇಲ್ಲದ ವರ್ತನೆಗೆ ಸಾಕ್ಷಿಯಂತಿದೆ. ಪೋಲಿಸರಿಗೆ ಪರಕ್ಕನ ಹಿತಾಹಿತ ಮುಖ್ಯವಲ್ಲ. ಅತ್ಯಾಚಾರದಂತಹ ವಿಚಾರಣೆ ಅಪಾಪೋಲಿ ಹೇಳಿಕೆ-ಕೇಳಿಕೆಗಳಿಂದ ಗಿಜಿಗುಟ್ಟುತ್ತದೆ. ಸ್ವತಂತ್ರ ಭಾರತದಲ್ಲಿ ಪರಕ್ಕನಂತಹ ಅಸಹಾಯಕ ಹೆಣ್ಣಿನ ಬಗ್ಗೆ ನ್ಯಾಯಾಂಗಕ್ಕಿರುವ ಕಾನೂನಿಗಿರುವ ನಿಷ್ಕರುಣೆಯ ಉದಾಹರಣೆಯಾಗುತ್ತದೆ. ಊರಿನ ತಾಯಂದಿರಿಗೆಲ್ಲ, ತಮ್ಮ ತಮ್ಮ ಮಕ್ಕಳನ್ನು ಪೋಲಿಸರ ವಿಚಾರಣೆಯ ಸುಪರ್ದಿಯಿಂದ ಬಿಡಿಸಿಕೊಳ್ಳುವ ತುರ್ತು ಕಾಡುತ್ತದೆ. ಆದರೆ, ತಾಯಿಯೂ ತೊರೆದು ಹೋದ ಆ ಹೆಣ್ಣುಜೀವದ ಸ್ಥಿತಿ ಬಾಧಿಸುವುದಿಲ್ಲ. ಹಾಗಂತ ಅವರ್‍ಯಾರೂ ಕೆಡುಕು ಮನಸ್ಸಿನವರಲ್ಲ. ಆದರೂ ಇದೆಲ್ಲ ನಡೆಯುವುದು ಹೀಗೆಯೇ. ಊರಿಗೆ,

ಪರಕ್ಕನ ಬಸಿರಿಗೆ ಕಾರಣರು ಯಾರು ಎಂಬ ಕುತೂಹಲ ಮುಖ್ಯವಾಗುತ್ತದೆಯೇ ಹೊರತೂ, ಪರಕ್ಕನ ಸ್ಥಿತಿಯನ್ನು ಯಾರೂ ಆಳವಾಗಿ ಭಾವಿಸಿಕೊಳ್ಳುವುದೇ ಇಲ್ಲ.

ಕಥೆಯಿಡೀ, ಗಂಡು-ಹೆಣ್ಣಿನ ಸಂಬಂಧದ ರಾಯಚೂರು ಸೀಮೆಯ ಅಸಭ್ಯ ಮಾತುಕತೆಗಳು ತುಂಬಿವೆ. ಆದರೆ, ಕಥೆ ಓದಿ ಮುಗಿಸಿದ ಮೇಲೆ ಮರೆಯಲಾಗದಂತೆ ನೆನಪಿನಲ್ಲಿ ಉಳಿಯುವುದು- ಪರಕ್ಕ ಎಂಬ ಜೀವದ ಹುಟ್ಟಿಗೆ ಕಾರಣನಾದ ತಂದೆ ಕಜ್ಜಿ ಚಿನ್ನಯ್ಯ, ತಂದೆಯಾಗಿ ಯಾವ ಕರ್ತವ್ಯವನ್ನೂ ಮಾಡದೆ; ಅವಳ ಮೊದ್ದುತನದಿಂದ ದೇವಿಮಾಡಿ ಹಣಗಳಿಸೋ ಉಪಾಯ ಮಾಡಿ, ಕುಡ್ದು ತಿಂದು ಇರಲು ನೋಡುವುದು. ಅವಳ ದೇಹವನ್ನು ತನ್ನ ತೀಟೆಗೆ ಬಳಸಿಕೊಳ್ಳುವುದು. ಪರಕ್ಕ, ಕಜ್ಜಿ ಚಿನ್ನಯ್ಯನನ್ನು ಕಂಡರೆ ಸೇರದೆ, ಅವನು ಮಾಡಿದ ಆ ಹಟ್ಟಿಯಲ್ಲಿರಲು ಕಿರಿಕಿರಿ ಮಾಡಿಕೊಂಡು. ಸುಲ್ತಾನಮ್ಮನ ಗುಡಿಸಲಿಗೆ ಹೋಗಿ, ಈಗ ಮನೆತುಂಬ ಮಕ್ಕಳಾಗಿರುವ ಅವಳ ಗುಡಿಸಲಲ್ಲೂ ತಾವಿಲ್ಲದೆ; ಮಲ್ಕರಡ್ಡೆಪ್ಪನ ದನದ ಹಕ್ಕೆಯ ತನ್ನ ಜಾಗೆಯಲ್ಲಿ ಬಂದು ಮಲಗಲು ನೋಡುವ ಪರಕ್ಕನ ಯಾತನೆಯ ಪಯಣ. ಮಾತಿಲ್ಲದ ಮಂದಬುದ್ಧಿಯ ಆ ದೇಹವನ್ನು ಅತಿಕ್ರಮಿಸುವ ಕ್ರೂರಿ ಚಿನ್ನಯ್ಯ ಕಡೆಗೂ ಅವಳನ್ನು ಹಟ್ಟಿಯೊಳಗೆ ಕೂಡಿಹಾಕಿ ಹಟ್ಟಿಗೇ ಬೆಂಕಿಯಿಡುತ್ತಾನೆ ಎನ್ನುವುದು; ಚಿನ್ನಯ್ಯನ ಈ ಕ್ರೌರ್ಯದ ಬಗ್ಗೆ ಊರು ಗುಣುಗುಣು ಅಂತಿದ್ದರೂ ಅದರ ಮೂಲ ಕೆದಕಹೋಗದೆ ಗೌಡ, ಆ ಪ್ರಕರಣದಲ್ಲಿ ತನ್ನ ಮನೆತನದ ವ್ಯಾಜ್ಯವನ್ನು ಪರಿಹರಿಸಿಕೊಳ್ಳಲು ಯತ್ನಿಸುವುದು.... ಹೆಣ್ಣು ಬಳಕೆಯ ಪದಾರ್ಥವಾಗುವ, ಕಾಲೊರೆಸುವ ವಸ್ತ್ರದಂತಾಗುವ ಬದುಕಿನ ಸತ್ಯವನ್ನು ಅತ್ಯಂತ ದಟ್ಟವಾಗಿ ಕಟ್ಟಿಕೊಡುವ ಕಥೆಯಿದು.

ಬಂಡವಾಳದ ಹರಿವು, ಅಧಿಕಾರ-ರಾಜಕಾರಣ, ಉಪಭೋಗದ ತೆವಲು ದಿನದಿನಕ್ಕೂ ಹೆಚ್ಚುತ್ತಿದೆ. ಅದರ ಪರಿಣಾಮವಾಗಿ ಅಂಚಿನ ಜೀವಗಳು ಮತ್ತೂ ಮತ್ತೂ ಅಂಚಿಗೆ, ಅಂಚಿನಾಚೆಯ ಆ ತಮಂಧದ ಪ್ರಪಾತಕ್ಕೆ ಸಿಲುಕುತ್ತಿದ್ದಾರೆ. ಕಾಪಾಡಬೇಕಾದವರೇ ಬೆಂಕಿಯಿಡುತ್ತಿದ್ದಾರೆ. ಎಂಬ ವಾಸ್ತವವನ್ನು ಈ ಕಥನಗಳು ಮುಂದಿಡುತ್ತವೆ. ಈ ಕಥನಗಳು ಕೊಡುವ ಕಲ್ಪಿತಗಳನ್ನು, ನಮ್ಮ ದಿನನಿತ್ಯದ ಸುದ್ದಿಗಳ ವಿವರಗಳೊಂದಿಗೆ ಇಟ್ಟು ನೋಡಿದಾಗ; ಆ ಅಂಕಿ-ಅಂಶಗಳನ್ನು ಒಂದು ಕ್ಷಣ ಕಣ್ಣೆದುರು ತಂದುಕೊಂಡಾಗ ಅಲ್ಲಿರುವ ವಿದ್ಯಮಾನಗಳನ್ನೇ ಈ ಕಥನಗಳು ಪ್ರತಿಫಲಿಸುತ್ತ- ಮರು ವಸಾಹತೀಕರಣಕ್ಕೆ ಒಳಗಾದ ಭಾರತದ ಜನಕಥನವನ್ನು ಬರೆಯುತ್ತಿವೆ ಅನ್ನಿಸುತ್ತದೆ.

### ೫.೩. ಮಾರುಕಟ್ಟೆಯಲ್ಲಿ ತೂಗುವ ಸಂಬಂಧಗಳು:

'ಸಂಬಂಜ ಅನ್ನಾದು ದೊಡ್ಡದು ಕನಾ' ಇದು ದೇವನೂರು ಮಹಾದೇವ ಅವರ ಕಥೆಯಲ್ಲಿಯ ಒಂದು ವಾಕ್ಯ. ಮನುಷ್ಯ ಸಂಬಂಧವನ್ನು ಅದರೆಲ್ಲ ಘನತೆಯಲ್ಲಿ ಅನುಭವಿಸಿದ್ದೇ ಮನುಷ್ಯ ಸಂಸ್ಕೃತಿಯ ಚರಿತ್ರೆ. ಪ್ರಾಚೀನ ಕನ್ನಡದಲ್ಲಿ ಮೊದಲ ಗದ್ಯಕೃತಿ ವಡ್ಡಾರಾಧನೆಯು ಈ ಜನ್ಮದ ಮನುಷ್ಯ ಸಂಬಂಧಗಳಿಗೆ ಪೂರ್ವಜನ್ಮದ ಸ್ಮೃತಿಯನ್ನು ಲಗತ್ತಿಸಿತ್ತು. ಹಳೆಯ ರಕ್ತಸಂಬಂಧವು ಜನ್ಮಾಂತರಗಳಲ್ಲಿ ಹೊಸದಾಗುತ್ತದೆಂಬ ಧಾರ್ಮಿಕ ನಂಬಿಕೆಯನ್ನು ಬೆಳೆಸಿತ್ತು. ಧರ್ಮ ಹಿತಾಸಕ್ತವಾದ ಇಂತಹ ನಂಬಿಕೆಗಳು ಬಲುಕಾಲ ಬಾಳಲಿಲ್ಲ. ಹತ್ತನೆಯ ಶತಮಾನದ ಯುದ್ಧ ಕಾಲವು, ಮನುಷ್ಯ ಸಂಬಂಧಗಳಿಗೆ ರಾಜಕಾರಣದ ಲಾಭ ಮತ್ತು ಹಿತಾಸಕ್ತಿಗಳ ಸೋಂಕನ್ನು ತಗುಲಿಸಿತು. ದುರ್ಯೋಧನನು ಕರ್ಣನಿಗೆ ಅಷ್ಟೊಂದು ಆದರವನ್ನು, ಅಂಗರಾಜ್ಯದ ಅಧಿಕಾರವನ್ನು ಕೊಡುವುದಕ್ಕೆ ಕಾರಣ ಅವನು ಸಾಂದೀಪನೀ ಮುನಿಗಳಿಂದ ತಿಳಿದುಕೊಂಡಿದ್ದ ಕರ್ಣನ ಜನ್ಮರಹಸ್ಯ. ಮುಳ್ಳನ್ನು ಮುಳ್ಳಿನಿಂದ ತೆಗೆಯುವ ತಂತ್ರ ಅವನದಾಗಿತ್ತು ಎನ್ನಲಾಯಿತು. ಆದರೆ ಈ ಎಲ್ಲ ಕಲ್ಪಿತಗಳ ಆಚೆಯಲ್ಲೂ ಕರ್ಣ ದುರ್ಯೋಧನರ ಮೈತ್ರಿ ಮನುಷ್ಯ ಪ್ರಜ್ಞೆಯಲ್ಲಿ ಶಾಶ್ವತವಾಗಿ ಉಳಿದಿದೆ. ಕಾಡಿನಲ್ಲಿ ಅನಾಥೆಯಾಗಿದ್ದ ಸೀತೆಯನ್ನು ಆ ಸ್ಥಿತಿಯಲ್ಲಿ ವಾಲ್ಮೀಕಿಗಳು ತಮ್ಮ ಆಶ್ರಮಕ್ಕೆ ಕರೆದೊಯ್ದು ಪೊರೆಯುವುದು, ಅವಳು ಜನಕರಾಜನ ಕುವರಿ. ತಾವು ಜನಕರಾಜನ ಸ್ನೇಹಿತರು ಎಂಬ ಕಾರಣದಿಂದ ಮಾತ್ರವೇ ಅಲ್ಲ. ಮನುಷ್ಯ ಬದುಕಿನ ಚೆಲುವು ಅಡಗಿರುವುದೇ ಅಕಾರಣ ಮತ್ತು ಅನಪೇಕ್ಷಿತ ಸಂಬಂಧಗಳಲ್ಲಿ. ಕೆರೆಗೆ ಹಾರದ ಜನಪದ ಲಾವಣಿಯಲ್ಲಿ ಭಾಗೀರಥಿಯು ತನ್ನ ಗೆಳತಿಯನ್ನು ಭೇಟಿಮಾಡಿ, ವಿಷಯವನ್ನು ತಿಳಿಸಿದ್ದರಿಂದಲೇ ಅವಳ ಮೇಲೆ ಬಂದು ಎರಗಬಹುದಾದ ಅನುಮಾನದ ನೋಟಕ್ಕೆ ಅವಕಾಶವಿಲ್ಲವಾಗುತ್ತದೆ.

ಆಧುನಿಕ ಕನ್ನಡ ಸಾಹಿತ್ಯವಂತೂ ಈ ಮಾನವೀಯತೆಯ ಶೋಧನೆಯಲ್ಲಿ, ಅಂತಃಕರಣದ ಹುಡುಕಾಟದಲ್ಲಿ ಹೆಚ್ಚು ಮುತುವರ್ಜಿಯಿಂದ ತೊಡಗಿಸಿಕೊಂಡಿದೆ. ರಕ್ತ ಸಂಬಂಧದ ಚೌಕಟ್ಟುಗಳನ್ನೂ ಮೀರಿ, ಮನುಷ್ಯ ಬದುಕು ಬೆಸೆದಿದೆ. ಅದು ಈ ಬಾಳನ್ನು ಕಾಯುವ ದೈವತ್ವ, ಹೆಸರಿಲ್ಲದ, ಗುರುತಿನ ಹಂಗಿಲ್ಲದ ಮನುಷ್ಯತ್ವದ ಬೆಸುಗೆಯನ್ನು ಮಾನವೀಯತೆಯ ಉಪಾಸನೆಯನ್ನು ಸಾಹಿತ್ಯ ಸಂಸ್ಕಾರ ಕಲಿಸುತ್ತ ಬಂದಿದೆ. ಹೊಸಗನ್ನಡ ಸಾಹಿತ್ಯ ಜನಸಾಮಾನ್ಯರ ಬದುಕಿನ ಕಥನ. ಅಷ್ಟೇಅಲ್ಲ ಜನಸಾಮಾನ್ಯರ ಬದುಕಿನೊಳಗಿನ

ಮಾನವೀಯ ವಿಕಾಸದ ಕಥನ. ಕಥೆ ಅಂಕುರಿಸುವುದೇ ಜೀವ ಜೀವಗಳ ಸಖ್ಯತತ್ವದಲ್ಲಿ. ಮನುಷ್ಯ ಚರಿತ್ರೆಯು ಹಲವು ಅವಸ್ಥಾಂತರಗಳನ್ನು ದಾಟಿಬಂದರೂ, ಹಲವೆಂಟು ಏಳುಬೀಳುಗಳನ್ನು ಕಂಡರೂ ಮಾನವೀಯ ಘನತೆಯ ಕುರಿತು ಇರುವ ಸೆಳೆತ ದೂರವಾಗಲಿಲ್ಲ. ಜನಾಂಗೀಯ ಹಲ್ಲೆ, ಯುದ್ಧಗಳು ನಡೆದದ್ದು ಕಡಿಮೆಯೇನಲ್ಲ. ಕಲ್ಲನ್ನು ಆಯುಧವಾಗಿ ಬಳಸುತ್ತಿದ್ದ ಮನುಷ್ಯ ಅಣುಬಾಂಬನ್ನು ಕಂಡುಹಿಡಿದಾಗಿದೆ. ಯುದ್ಧಕೋರತನವನ್ನು ಲೂಟಿತನವನ್ನು ಹಿಂಗಿಸಲು ಜಗತ್ತಿನ ಯಾವ ಧರ್ಮಗಳೂ ಯಶಸ್ವಿಯಾಗಲಿಲ್ಲ. ಆದರೆ ಅದೇ ವೇಳೆಗೆ, ಪ್ರತಿಯೊಂದು ರಾಕ್ಷಸೀಯ ವರ್ತನೆಯೂ ಮತ್ತೊಂದು ಮಾನವೀಯ ವರ್ತನೆಯ ನಿದರ್ಶನವನ್ನು ಉಳಿಸುತ್ತ; ಮನುಷ್ಯ ಕುಲವನ್ನು ಪ್ರಾಣಿನೆಲೆಯಿಂದ ಎತ್ತರಿಸಿಕೊಂಡೇ ಬಂದಿದೆ.

ಮನುಷ್ಯ ಸಮಾಜದ ಏಳ್ಗೆಯ ರಹಸ್ಯವೇ ಈ ಸಹಕಾರ ತತ್ತ್ವ ಸಹಯಾನದ ಮಹತ್ವ. ಸಂಸ್ಕೃತಿ ಎಂದು ಯಾವುದನ್ನು ಕರೆಯಲಾಗಿದೆಯೋ ಅದು ಈ ತತ್ತ್ವದ ಜೀವಾಳದಿಂದಲೇ ರೂಪುಗೊಂಡಿರುವುದು. ಕೃಷಿಯೇ ಬದುಕಾಗಿದ್ದ ಕಾಲದಲ್ಲಿ ಉತ್ತರ ಕರ್ನಾಟಕದ ಹಳ್ಳಿಗಳಲ್ಲಿ ರೈತರು ಬಿತ್ತನೆಗೆ ಹೊರಡುವಾಗ ಬೀಜದ ಬುಟ್ಟಿಗಳನ್ನು ಊರ ದೇವಿಯ ಗುಡಿಗೆ ಒಯ್ದು ಪೂಜೆ ಮಾಡಿಕೊಂಡು, ಒಂದೊಂದು ಬೊಗಸೆಯಷ್ಟು ಬೀಜವನ್ನು ದೇವಿಯ ಎದುರು ಹಾಕಿಟ್ಟು ಹೋಗುವುದನ್ನು ಸಂಪ್ರದಾಯ ಮಾಡಿಕೊಂಡಿದ್ದರು. ಅದು ಬಿತ್ತನೆಯ ಬೀಜಗಳನ್ನು ರೈತರೇ ಸಿದ್ಧಪಡಿಸಿಕೊಳ್ಳುತ್ತಿದ್ದ ಕಾಲ. ಹೀಗೆ ಬೀಜ ಹಾಕಿ ಹೋಗುತ್ತಿದ್ದ ರಾಶಿಯೇ ಒಂದೊಂದು ಬುಟ್ಟಿಯಷ್ಟು ಆಗುತ್ತಿತ್ತು. ಆ ಬೀಜದ ಹಕ್ಕು, ಯಾವುದೋ ಕೌಟುಂಬಿಕ-ಪ್ರಾಕೃತಿಕ ಅನಾನುಕೂಲದಿಂದ ಬೀಜಹಿಡಿಯಲು ಸಾಧ್ಯವಾಗದೇ ಇದ್ದ ರೈತನ ಕುಟುಂಬದ್ದಾಗಿರುತ್ತಿತ್ತು. ಕೊಟ್ಟವರಿಗೆ ಕೊಟ್ಟಿದ್ದೇನೆ ಎಂಬ ಅಹಂಕಾರವಿರಲಿಲ್ಲ. ಯಾಕೆಂದರೆ ಅವರು ತಮ್ಮ ಕೃಷಿಯ ಫಲವನ್ನು ಕೋರಿ ದೇವರಿಗೆ ತೆಗೆದಿರಿಸಿದ ಮೀಸಲು ಅದು. ತೆಗೆದುಕೊಂಡವನು ಅವಮಾನದಿಂದ ಸಿಗ್ಗಾಗಬೇಕಿರಲಿಲ್ಲ. ಯಾಕೆಂದರೆ ಆತ, ಊರ ದೇವಿಯು ಕೊಟ್ಟ ಪ್ರಸಾದವನ್ನು ತೆಗೆದುಕೊಂಡಿದ್ದ. 'ಕೊಟ್ಟಿದ್ದು ತನಗೆ, ಬಚ್ಚಿಟ್ಟಿದ್ದು ಪರರಿಗೆ' ಎಂಬುದು ಬದುಕಿನ ನೀತಿಯಾಗಿದ್ದ ಕಾಲವನ್ನು ದಾಟಿ ಬಂದಾಗಿದೆ. ದುಡಿದು ಉಣ್ಣುವ, ಹಂಚಿ ತಿನ್ನುವ ಸೌಖ್ಯದ ರುಚಿಯನ್ನೂ ಮನುಷ್ಯ ಸಮಾಜ ಕಂಡಿದೆ. 'ಉಂಡು ಉಪವಾಸಿ, ಬಳಸಿ ಬ್ರಹ್ಮಚಾರಿ' ಎಂಬ 'ಪದ್ಮಪತ್ರಮಿವ ಅಂಬಸಿ' ಎಂಬ ನೀತಿಯನ್ನು, ತಾತ್ತ್ವಿಕ ಎತ್ತರವನ್ನು ಮರಮರಳಿ ಶೋಧಿಸಿದೆ. ಕಾಯಕ-ದಾಸೋಹದ ಚಿಂತನೆಯನ್ನು ಜಗತ್ತಿಗೆ ಧಾರೆಯೆರೆದ ಕನ್ನಡ ನಾಡು ಇದು. ಯಾರೂ

ಅಪಹರಿಸಲಾಗದ ಸಂಪತ್ತಿನ ಬಗ್ಗೆ, ಯಾರೂ ಕಸಿದುಕೊಳ್ಳಲಾಗದ ಸ್ಥಾನದ ಬಗ್ಗೆ ಇರುವ ಅನನ್ಯ ಗೌರವವನ್ನು ಹೃದಯದುಂಬಿ ನೋಡಿದ ಚರಿತ್ರೆಯಿದೆ. ಆಧುನಿಕ ಭಾರತ ಗಾಂಧೀಜಿಯಂತಹ ಮಾನವೀಯತೆಯ ಎತ್ತರವನ್ನು, ನೆಹರೂರಂತಹ ವಿಚಾರವಾದಿಯನ್ನು, ಶಾಸ್ತ್ರಿಯಂತಹ ಸಜ್ಜನಿಕೆಯನ್ನು, ಅಂಬೇಡ್ಕರರಂತಹ ಪ್ರಗಲ್ಭಮತಿಯನ್ನು, ಲೋಹಿಯಾರಂತಹ ಸಮಸಮಾಜದ ಕನಸನ್ನು ಕಂಡಿದೆ. ಮದರ್ ತೆರೆಸಾ, ಬಾಬಾ ಆಮ್ಟೆ ಇದೇ ಭೂಮಿಯಲ್ಲಿ ಬದುಕಿ ಹೋದವರು. ಇವರುಗಳೆಲ್ಲ ಯುಗಾಂತರಗಳ ಹಿಂದಿನವರಲ್ಲ. ಗಾಂಧೀಜಿಯ ಸರ್ವೋದಯದ ಕನಸನ್ನು ಅಸಮಾನ ಭಾರತದಲ್ಲಿ ನೆಲೆಗೊಳಿಸುವುದು ಹೇಗೆ ಎಂಬ ಅನ್ವೇಷಣೆಯಲ್ಲಿಯೇ ಈ ದೇಶದ ಕಲೆ-ಸಾಹಿತ್ಯದ ಸೃಷ್ಟಿಶೀಲತೆಯಿದೆ.

ವಸಾಹತುಶಾಹಿ ಆಳ್ವಿಕೆಯ ಸಂದರ್ಭದಲ್ಲಿ ಭಾರತ, ತನ್ನೆಲ್ಲ ಅಸಮಾನತೆಗಳನ್ನು ಮೆಟ್ಟಿನಿಂತು ಅದ್ವಿತೀಯವಾದ ಒಂದುತನವನ್ನು ದಾಖಲಿಸಿದೆ. ಈ ದೇಶ ಬಹು ಜಾತಿ-ಧರ್ಮ-ಸಂಸ್ಕೃತಿಗಳ ಕೂಡಿಕೆ ಎಂದು ಸಾಬೀತುಪಡಿಸಿದೆ. ಆದರೆ ನವವಸಾಹತುಶಾಹಿಯ ಬದುಕು, ಅದು ತನ್ನೊಂದಿಗೆ ತಂದು ಬೀಸಿದ ಮಾರುಕಟ್ಟೆ ನೀತಿಯ ಬಲೆಯು ಭಾರತೀಯರ ಬಹುಸಾಂಸ್ಕೃತಿಕ ನೆಲೆಗಳನ್ನು ಹಲ್ಲೆಗೀಡುಮಾಡಿದೆ. ಮಾನವೀಯ ಸಂಬಂಧಗಳ ಮೂಲಶಕ್ತಿಯನ್ನೇ ಘಾಸಿಗೊಳಿಸಿದೆ. ಆಧುನಿಕ ಭಾರತವು ಕಂಡುಕೊಂಡಿದ್ದ ಜೀವನಮೌಲ್ಯಗಳು, ಜಾಗತೀಕರಣದ ಭಾರತಕ್ಕೆ ಅಪಥ್ಯವಾಗಿ ಕಾಣುತ್ತಿದೆ. ಮನುಷ್ಯರೀಗ ಏಕಕೋಶ ಜೀವಿಗಳಂತಾಡುತ್ತಿದ್ದಾರೆ. ಹಣ-ಸಂಪತ್ತಿನ ಸಂಗ್ರಹ ಮಾತ್ರವೇ ಬದುಕಿನ ಗೆಲುವು ಎಂಬ ತಪ್ಪು ತೀರ್ಮಾನಕ್ಕೆ ಬಂದು ತಲುಪುತ್ತಿದ್ದಾರೆ. ಭೋಗ ಪ್ರಧಾನತೆ ಬೆಳೆದಂತೆ, ನೂರಾರು ವರ್ಷಗಳ ಮನುಷ್ಯ ವಿವೇಕವು ತಿದ್ದಿ ತೀಡಿದ ಚಿಂತನಾ ಧಾರೆಗಳು ಕಣ್ಮರೆಯಾಗುತ್ತಿವೆ. ಬಂಡವಾಳಮುಖಿ ಬದುಕು ಸಂಪನ್ಮೂಲವನ್ನು ಮಾತ್ರ ಮಾರಿಕೊಂಡಿಲ್ಲ. ಮನುಷ್ಯ ಬದುಕಿನ ಆದರ್ಶ-ಮೌಲ್ಯಗಳನ್ನು ಮಾರಿಕೊಳ್ಳುತ್ತಿದೆ. ಗಣಿಗಾರಿಕೆಯಿಂದ ಭೂಮಿ ಟೊಳ್ಳಾಗುತ್ತಿದೆ. ತಾತ್ತ್ವಿಕ ಜೀವನ ದರ್ಶನಗಳಿಲ್ಲದೆ ಮನುಷ್ಯ ಪ್ರಜ್ಞೆ ಟೊಳ್ಳಾಗುತ್ತಿದೆ. ಹಿಂಸೆ ಸಮಾಜದ ಸಹಜ ಸ್ಥಿತಿಯಾಗುತ್ತಿದೆ. ಅಪರಿಚಿತರು ಊರೊಳಗೆ ಬಂದರೆ, ಕರೆದು ಊಟಕ್ಕೆ ಇಕ್ಕಿ ಗೌರವದಿಂದ ಮುಂದೆ ಕಳಿಸುತ್ತಿದ್ದ ಸಂಸ್ಕೃತಿಯಿದ್ದ ನೆಲದಲ್ಲಿ, ಅಪರಿಚಿತರನ್ನು ಅವರು ಅಸಹಾಯಕರಾಗಿದ್ದರಂತೂ ಶಂಕೆಯಿಂದಲೇ ಗುಂಪುಹಲ್ಲೆ ಮಾಡಿ ಸಾಯಿಸುವ ಕ್ರೌರ್ಯ ತಾಂಡವಾಡುತ್ತಿದೆ. ಇಂತಹ ಉಧ್ವಸ್ಥ ಸ್ಥಿತಿಯನ್ನು ಮನುಷ್ಯ ಸಂಬಂಧದ ವಿಭಿನ್ನ ಆಯಾಮಗಳಲ್ಲಿ ನೋಡುವ, ಇದರ ಕಾರಣ ಮತ್ತು ಪರಿಣಾಮಗಳನ್ನು ಎಚ್ಚರಿಸುವ, ಮನುಷ್ಯ ವಿವೇಕವನ್ನು ಮಣ್ಣ ಮರೆಯಿಂದ ಮತ್ತೆ ಮರುಜೀವ ಕೊಡುವ ಅಸಂಖ್ಯ ಕಥೆಗಳು

ಈ ಅವಧಿಯಲ್ಲಿ ಬರೆಯಲ್ಪಟ್ಟಿವೆ ಕಾಲವೇ ಬರೆಯಿಸಿಕೊಂಡ ಕಥೆಗಳೋ ಎಂಬಂತೆ. ಅವುಗಳಲ್ಲಿ ಕೆಲವನ್ನು ವಿಶ್ಲೇಷಿಸಲಾಗಿದೆ.

ಆಧುನಿಕತೆಯನ್ನು ನಿಧಾನಕ್ಕೆ ಅರಗಿಸಿಕೊಳ್ಳುತ್ತ, ಹೊಂದಾಣಿಕೆ ಮಾಡಿಕೊಳ್ಳುತ್ತ ಪಾರಂಪರಿಕ ಕೌಟುಂಬಿಕತೆಯ ಭಾವನೆಗಳನ್ನೇ ಆಧುನಿಕ ಕುಟುಂಬ ರಚನೆಗಳ ವಿಸ್ತಾರಕ್ಕೆ ಅಣಿಗೊಳಿಸುತ್ತ ತನ್ನನ್ನು ತಾನು ರಿಫ್ರೆಶ್‌ಗೊಳಿಸಿಕೊಳ್ಳುತ್ತಿರುವ ಭಾರತೀಯ ಸಮಾಜಕ್ಕೆ; ನವವಸಾಹತುಶಾಹಿಯ ಬದಲಾದ ಸ್ಥಿತಿಯನ್ನು ಜೀರ್ಣಿಸಿಕೊಳ್ಳುವುದು ಕಷ್ಟವಾಯಿತು. ಜಾಗತೀಕರಣವು ಶಿಕ್ಷಣದ ಉದ್ಯೋಗದ ಕಕ್ಷೆಯನ್ನು ಜಗತ್ತಿನ ಭೂಪಟದ ತುದಿಯವರೆಗೂ ಹಾಯಿಸಿತು. ಇದರಿಂದಾಗಿ, ಸಾಂಪ್ರದಾಯಿಕ ಕುಟುಂಬದ ತಿಳುವಳಿಕೆಯಿಂದ ಆಧುನಿಕ ಕುಟುಂಬ ರಚನೆಯವರೆಗೆ ತನ್ನನ್ನು ಹೊಂದಿಸಿಕೊಂಡು ಬಂದ ಒಂದು ತಲೆಮಾರು; ತನ್ನ ಮುಂದಿನ ತಲೆಮಾರಿನಲ್ಲಿ ಸಂಭವಿಸಿದ ಈ ಪಲ್ಲಟವನ್ನು ಸ್ವೀಕರಿಸಲು ಸಿದ್ಧವಾಗಿರಲಿಲ್ಲ. ಅಥವಾ ಭೂತಕಾಲ ಮತ್ತು ವರ್ತಮಾನಗಳ ಮಧ್ಯೆ ಬಲುದೊಡ್ಡ ಕಂದಕ ನಿರ್ಮಾಣವಾಗಿ, ಅದನ್ನು ಭರಿಸಲು ಸಾಧ್ಯವಿಲ್ಲದಷ್ಟು ಪ್ರಜ್ಞಾಪಾತಳಿಯ ದಿಗಿಲಿಗೆ ಒಳಗಾಯಿತು. ಜಾಗತೀಕರಣದ ಈ ಹಂತವು ಮನುಷ್ಯ ಬದುಕಿನ ಸಾರ್ಥಕತೆಯ ಆದ್ಯತೆಯನ್ನೇ ಬದಲಿಸಿತ್ತು. ಇದರೊಂದಿಗೆ ರಾಜಿಯಾಗಲಾರದ, ಆಗದೆಯೂ ಗತ್ಯಂತರವಿಲ್ಲದ ಸ್ಥಿತಿ ನಿರ್ಮಾಣವಾಯಿತು. ಭಾರತೀಯ ಕುಟುಂಬ ವ್ಯವಸ್ಥೆಯ ಪರಸ್ಪರಾವಂಭಿ ನೆಲೆಗಳು ಇಲ್ಲಿ ಬದಲಾದವು. ಮನುಷ್ಯ ಸಂಬಂಧದ ಸ್ವರೂಪವನ್ನು ಹಣವು ನಿರ್ಧರಿಸುವ ಸ್ಥಿತಿ ಬಂತು. ಇಂತಹ ಬದಲಾದ ಕುಟುಂಬದ ಚಹರೆಯನ್ನು ದಾಖಲಿಸುವ ಕಥೆಗಳಲ್ಲಿ ಯುಗಾದಿ ಕಥೆಯನ್ನು ಪ್ರಾತಿನಿಧಿಕವಾಗಿ ಪರಿಗಣಿಸಬಹುದಾಗಿದೆ. ಈ ಕಥೆಯು ಗೋಪಣ್ಣ ಮಾಸ್ತರು ಮತ್ತು ಅವರ ಮಗ ಪ್ರಲ್ಹಾದನ ಜೀವನದ ಸುತ್ತ ಹೆಣೆಯಲ್ಪಟ್ಟಿದೆ.

ಮಗ ಪ್ರಾಪ್ತ ವಯಸ್ಕನಾಗುತ್ತಿದ್ದಂತೆ ತಂದೆ ಮತ್ತು ಮಗನ ಸಂಬಂಧದಲ್ಲಿ ಒಂದು ತಲೆಮಾರಿನ ಅಕ್ಷಾಂಶವು ಹಾದು ಹೋಗುವುದು, ವಿಚಾರಗಳಲ್ಲಿ ವ್ಯತ್ಯಾಸಗಳು ಉಂಟಾಗುವುದು ಸಾಮಾನ್ಯ. ಇದು ಜಾಗತೀಕರಣ ತಂದೊಡ್ಡಿದ ವ್ಯತ್ಯಾಸವೇನಲ್ಲ. ಆರ್ಥಿಕ ಒಡೆತನವು ತಂದೆಯಿಂದ ಮಗನ ಕೈಗೆ ಬದಲಾದಂತೆ ಸಂಬಂಧದ ನಡಾವಳಿಯಲ್ಲಿಯೂ ಒಂದು ಬದಲಾವಣೆ ಸಂಭವಿಸುತ್ತದೆ ಎನ್ನುವುದನ್ನು ಸಾಹಿತ್ಯ ಸಂವೇದನೆ ಗುರುತಿಸಿಕೊಂಡೇ ಬಂದಿದೆ. ೭೦ರ ದಶಕದಲ್ಲಿ ಎ.ಕೆ.ರಾಮಾನುಜನ್ ಬರೆದ ಒಂದು ಪದ್ಯ ಹೀಗಿದೆ.

ಬಚ್ಚಲುಮನೆ ಗಂಗಾಳದಲ್ಲಿ
ಅಪ್ಪ ಮರೆತ ಹೊಸಹಲ್ಲು
ಕಿಸಕ್ಕನೆ ನಕ್ಕಿತು.
ನಾನು ನೋಡಿದೆ.

ನಾನು ಹಲ್ಲುಕಿರಿದು, ಅಪ್ಪ ದುರುಗುಟ್ಟಿ ನೋಡುತ್ತಿದ್ದ ಕಾಲದಿಂದ; ಅಪ್ಪನ ಹಲ್ಲು ಹಲ್ಲುಕಿರಿದರೂ ನಾನು ಬರಿದೆ ನೋಡುವವರೆಗಿನ ವ್ಯತ್ಯಸ್ಥ ಸ್ಥಿತಿಯನ್ನು ಸಾಂಕೇತಿಕವಾಗಿ ಧ್ವನಿಸುವ ಕವಿತೆ ಇದು. ಈ ಬದಲಾವಣೆಯ ಸಹಜತೆಯನ್ನು ದಾಟಿದ ಕಥೆಯಿದು.

ಗೋಪಣ್ಣ ಮಾಸ್ತರು ಬದಲಾಗಿದ್ದಾರೆ. ಬದಲಾಗಿದ್ದಾರೆ ಎಂದು ಅವರಿಗೇ ಅನ್ನಿಸುವಷ್ಟು ಬದಲಾಗಿದ್ದಾರೆ. ಅವರ ದರ್ಪ, ಸಿಟ್ಟು, ಗತ್ತು ಎಲ್ಲವೂ ಕರ್ಪೂರದಂತೆ ಕರಗುತ್ತಿದೆ. ಊರಲ್ಲಿದ್ದರೆ, ಪರಿಚಯದ ಸ್ನೇಹದ ಬಳಕೆಯ ನಮಸ್ಕಾರ ಇರುತ್ತಿತ್ತು. ಅದು ಗೋಪಣ್ಣ ಮಾಸ್ತರರಿಗೆ ಅವರ ಬೇರಿಗೆ ನೀರುಸಿಕ್ಕ ಸಮಾಧಾನ ಕೊಡುತ್ತಿತ್ತು. ಆದರೆ ಈಗವರು ಬೆಂಗಳೂರೆಂಬ ಮಾಯಾನಗರಿಯಲ್ಲಿ ಮಗನ ಮನೆಯಲ್ಲಿದ್ದಾರೆ. ಅವರಿಗೂ ಮಗನ ಹೊರತೂ ಬೇರೆ ಯಾರಿಲ್ಲ. ಇಪ್ಪತ್ತು ವರ್ಷಗಳ ಹಿಂದೆ ಹೆಂಡತಿ ತೀರಿಕೊಂಡಾಗ, ಮಗನಿಗೆ ಅನ್ಯಾಯ ಆದೀತೆಂದು ಯಾರು ಎಷ್ಟೇ ಒತ್ತಾಯಿಸಿದರೂ ಗೋಪಣ್ಣ ಮಾಸ್ತರು ಮತ್ತೊಂದು ಮದುವೆ ಆದವರಲ್ಲ. ಎಲ್ಲರೂ ಬೆರಗಾಗುವಷ್ಟು ಗಟ್ಟಿ ಮನಸ್ಸಿನಿಂದ ಬದುಕಿಕೊಂಡು ಬಂದರು. ಆದರೆ, ಈಗ ಗಾಢವಾಗಿ ಕಲಕುವ ಏಕಾಂತದಲ್ಲಿ, ಮದುವೆ ಮಾಡಿಕೊಂಡಿದ್ದರೇ ಚೆನ್ನಾಗಿತ್ತೇನೋ ಎಂಬ ಭಾವನೆ ಕಾಡುತ್ತದೆ. ಗೋಪಣ್ಣ ಮಾಸ್ತರು ರಿಟೈಯ್ಡ ಆದ ತಕ್ಷಣ, ಹಳ್ಳಿಯಲ್ಲಿದ್ದ ತಮ್ಮ ಮನೆಯನ್ನು ಬಾಡಿಗೆಗೆ ಕೊಟ್ಟು, ಮಗನ ಮನೆಗೆ ಬೆಂಗಳೂರಿಗೆ ಬಂದಾಗಿದೆ. ಯಾವುದಕ್ಕೂ ಏನೊಂದು ಕೊರತೆ ಇಲ್ಲದಿದ್ದರೂ, ಒಂದು ಬಗೆಯ ಪರಕೀಯ ಭಾವನೆ ಅವರ ಮನಸ್ಸನ್ನು ಹೊಕ್ಕುಬಿಟ್ಟಿದೆ.

ಬಾಲ್ಯದಿಂದಲೂ ಮಗ, ವಿದ್ಯಾರ್ಥಿಯೂ ಆದಾಗ, ಅವನೊಂದಿಗೆ ಒಂದಿಷ್ಟು ಗಂಭೀರವಾಗಿಯೇ ಇರುತ್ತಿದ್ದರು. ಮಗನಿಗೂ ಅಪ್ಪ ಮಾಸ್ತರನೂ ಆದ್ದರಿಂದ ಒಂದಿಷ್ಟು ದೂರದಲ್ಲಿರುವುದೇ ಕ್ಷೇಮ ಅನ್ನಿಸಿತ್ತು. ಆದರೆ ಅಲ್ಲಿ ತಂದೆ-ಮಗನ ಬಾಂಧವ್ಯಕ್ಕೆ ಸಮಸ್ಯೆಯೇನೂ ಇರಲಿಲ್ಲ. ಈಗ ಮಾತ್ರ ಗೋಪಣ್ಣ ಮಾಸ್ತರು ಮಗನು ಮನೆಗೆ ಬಂದ ತಕ್ಷಣ ಏನೋ ಮುಜುಗರಕ್ಕೆ ಒಳಗಾಗುತ್ತಾರೆ. ಮಗ ಮನೆಗೆ ಬಂದನೆಂದರೆ ಟಿ.ವಿ.ಯ ಚಾನೆಲ್‌ನ್ನು ಬದಲಿಸಿಬಿಡುತ್ತಾರೆ. ಎದ್ದು ತಮ್ಮ ಕೋಣೆಗೆ ಹೋಗುತ್ತಾರೆ. ಮನೆಗೆ ಅತಿಥಿಗಳು,

ಮಗನ ಸ್ನೇಹಿತರು ಬಂದರಂತೂ ತಮ್ಮ ಕೋಣೆ ಬಿಟ್ಟು ಹೊರಬರುವುದಿಲ್ಲ. ತಮ್ಮಷ್ಟಕ್ಕೆ ತಾವು ದೊಡ್ಡ ದನಿಯಲ್ಲಿ ಓದಿಕೊಳ್ಳುವುದಕ್ಕೂ ಹಿಂದೇಟು ಹಾಕುತ್ತಾರೆ. ಈ ಮುಜುಗರ ಶುರುವಾಗಿ ಬಹಳ ವರ್ಷಗಳೇ ಆಗಿವೆ. ಮೂರನೇ ವರ್ಷದ ಇಂಜನಿಯರಿಂಗ್ ಪರೀಕ್ಷೆ ಮುಗಿಸಿ, ಮಗ ಮನೆಗೆ ಬಂದಿದ್ದ. ಪರೀಕ್ಷೆ ಹ್ಯಾಂಗ ಮಾಡಿದಿ? ಅಂತ ಕೇಳಿದರೆ ಬರಿದೆ ತಲೆಯಲ್ಲಾಡಿಸಿದ್ದ. ಸಂಧ್ಯಾವಂದನೆ ಮಾಡದೆ ದೋಸೆ ತಿನ್ನುತ್ತ ಕುಳಿತದ್ದಕ್ಕೆ ಬಯ್ದಿದ್ದರು. 'ನಂಗೆ ಅವೆಲ್ಲ ಮಾಡಲಿಕ್ಕೆ ಇಷ್ಟ ಇಲ್ಲಪ್ಪ' ಎಂದಿದ್ದ ಮಗ. ಮತ್ತೂ ಬಯ್ದರು. ಮಗ ಅಂದೇ ಸಾಯಂಕಾಲ ವಾಪಸ್ಸು ಹೋಗಿ ಬಿಟ್ಟಿದ್ದ. ಹಿತ್ತಲಿನ ಕಣಗಿಲ ಗಿಡಕ್ಕೆ ಜನಿವಾರ ನೇತಾಡಿಸಿ, ಹೆಂಡತಿಗೆ 'ನಿನ್ನ ಮಗನ್ನ ಚೆನ್ನಾಗಿ ನೋಡಿಕೋತೇನೆ' ಎಂದು ಮಾತುಕೊಟ್ಟಿದ್ದು ನೆನಪಾಗಿ ಪಶ್ಚಾತ್ತಾಪದಿಂದ, ಮಗನಿಗೆ ಪತ್ರ ಬರೆದು ಸಮಾಧಾನ ಮಾಡಿದ್ದರು. ಮಗ ಇಂಜನಿಯರಿಂಗ್ ಮುಗಿಸುತ್ತಿದ್ದಂತೆ, ಅವನ ನೌಕರಿಯ ಬಗ್ಗೆ ತಲೆಕೆಡಿಸಿಕೊಂಡು, ತಮ್ಮ ಪರಿಚಯಸ್ಥರನ್ನ ಕಂಡು ಹೇಗೋ ಸರಕಾರಿ ಸಂಸ್ಥೆಯಲ್ಲಿ ಖಾಯಂ ಕೆಲಸ ಮಾಡಿಸಿಕೊಂಡು ತೃಪ್ತಿಪಟ್ಟರು. ಆದರೆ ಮಗ, ಅಪ್ಪ ಹುಡುಕಿ ಇಟ್ಟಿದ್ದ ಸರ್ಕಾರೀ ಕೆಲಸಕ್ಕೆ ಹೋಗಲು ಸಿದ್ಧನಾಗಲಿಲ್ಲ. ಬಯ್ದರೂ ಕೇಳಲಿಲ್ಲ. ಸರಕಾರಿ ಕೆಲಸಕ್ಕೆ ಸೇರಿದರೆ ಕಿಮ್ಮತ್ತು ಕಡಿಮಿ ಅನ್ನೋ ಮಗನ ಮಾತಿಗೆ ಮೈಕೈ ಪರಚಿಕೊಳ್ಳುವಂತಾಗಿತ್ತು. ಮಗನ ಬದುಕು ಹಾಳಾಯಿತು ಎಂದು ಕೊರಗಿದ್ದರು.

ಕಥೆಯ ಈ ಮೊದಲ ಭಾಗವನ್ನು ಗಮನಿಸಿದಾಗ, ಸಂಪ್ರದಾಯವನ್ನು ಜೊತೆಗಿಟ್ಟುಕೊಂಡೇ ಆಧುನಿಕತೆಯ ಸ್ವೀಕರಣದ ಗೋಪಣ್ಣ ಮಾಸ್ತರರಿಗೂ; ಬದುಕಿನ ಯಾವ ಪೂರ್ವ ಪರಂಪರೆಯ ಜರೂರತ್ತೂ ಇಲ್ಲವೆಂಬಂತಿರುವ, ಬೇಡವೆಂಬಂತಿರುವ ಪ್ರಹ್ಲಾದನಿಗೂ ಇರುವ ವ್ಯತ್ಯಾಸವು ಗಮನಾರ್ಹವಾಗಿದೆ. ತುಂಬ ಸುರಕ್ಷಿತವಾದ, ಗೌರವಾರ್ಹವಾದ ಸರಕಾರಿ ಕೆಲಸವನ್ನೇ ತುಚ್ಛೀಕರಿಸುವ; ಬಹುರಾಷ್ಟ್ರೀಯ ಕಂಪನಿಯ ಕೆಲಸಕ್ಕೆ ಹಾತೊರೆವ ಪ್ರಹ್ಲಾದನ ಮನಸ್ಥಿತಿಯು ಗೋಪಣ್ಣ ಮಾಸ್ತರರಿಗೆ ಬಗೆಹರಿಯದ ತೊಡಕಿನಂತೆ ಕಾಣುತ್ತದೆ.

ಆದರೆ, ಪ್ರಹ್ಲಾದನ ಬೆಳವಣಿಗೆಗಳು ಗೋಪಣ್ಣ ಮಾಸ್ತರರ ನಂಬಿಕೆಯ ಬೇರನ್ನು ಅಲ್ಲಾಡಿಸಿದ್ದವು. ಅವನ ಪಗಾರ ಸಾವಿರ ಸಂಖ್ಯೆಯಲ್ಲಿ ಏರುತ್ತಲೇ ಇತ್ತು. ವಿಮಾನದ ಹಾರಾಟ ಸಾಮಾನ್ಯವಾಗಿತ್ತು. ಮಗನ ಸಂಬಳ, ಅವನು ಕಟ್ಟುತ್ತೇನೆ ಎನ್ನುವ ತೆರಿಗೆ ಮೊತ್ತ ಎಲ್ಲವೂ ಗೋಪಣ್ಣ ಮಾಸ್ತರನ್ನು ದಿಗಿಲುಬೀಳಿಸಿದ್ದು ಸತ್ಯ. 'ಮಗ ಏನಾದರೂ ಕಳ್ಳ

ದಂಥೆಯಲ್ಲಿ ಹಣ ಗಳಿಸುತ್ತಿದ್ದಾನೆಯೇ?' ಎಂಬ ಅನುಮಾನವೂ ಕಾಡಿ, ಭಯಬಿದ್ದು, ಅವರಿವರಲ್ಲಿ ವಿಚಾರಿಸಿ, 'ಹಾಗೇನೂ ಅಲ್ಲ ಅದು ಅಮೇರಿಕನ್ ಕಂಪನಿ' ಎಂಬ ಸ್ಪಷ್ಟೀಕರಣ ಪಡೆದು ಸುಮ್ಮನಾಗಿದ್ದರು. ಪ್ರಹ್ಲಾದನ ಬಹುರಾಷ್ಟ್ರೀಯ ಕಂಪನಿಯ ಹಣದ ಹರಿವು ಗೋಪಣ್ಣ ಮಾಸ್ತರರನ್ನು ದಿಗಿಲುಬೀಳಿಸುವಂತಿತ್ತು –ಎಂಬುದೇ ಸಮಾಜದಲ್ಲಿ ಕುಟುಂಬದಲ್ಲಿ ನಡೆವ ಇನ್ನಿತರ ಪಲ್ಲಟಗಳ ಕೇಂದ್ರಕಾರಣವಾಗಿತ್ತು.

ಮಗನ ಏಳ್ಗೆಯನ್ನು ಕಂಡು ನಾನು ಅಸೂಯೆ ಪಡುತ್ತಿದ್ದೇನೆಯೆ ಎಂಬ ಅತ್ಮಾವಲೋಕನವನ್ನೂ ಮಾಡಿಕೊಳ್ಳುತ್ತಾರೆ. ಮಗನ ಇಂಗ್ಲೀಷ ಜ್ಞಾನ, ಕಂಪ್ಯೂಟರ್‌ನಲ್ಲಿ ಪಟಪಟ ಬೆರಳಾಡಿಸುತ್ತ ಅದೇತರಲ್ಲೋ ಮಗ್ನವಾಗಿರುವುದು, ಫಳ ಫಳ ಹೊಳೆಯುವ ಕಾರಿನ ಸ್ಟೀರಿಂಗ್‌ನ್ನು ಒಂದೇ ಕೈಯಲ್ಲಿ ತಿರುಗಿಸುತ್ತ ನುಗ್ಗುವುದು, ಮಗನ ಕಾರು ಬಂದರೆ ಅಪಾರ್ಟಮೆಂಟಿನ ಗೂರ್ಖಾ ಸಲಾಂಸಾಬ್ ಎಂದು ನಮಸ್ಕರಿಸುವುದು...... ಇಂತಹ ಎಷ್ಟೆಲ್ಲ ವಿಷಯಗಳಲ್ಲಿ ಅವರಿಗೆ ಮಗನ ಬಗ್ಗೆ ಅಭಿಮಾನ ಅನ್ನಿಸುತ್ತಿತ್ತು. ಮನಸ್ಸು ಅವನ ಬಾಲ್ಯ ಯೌವನದೊಂದಿಗೆ ತಾಳೆ ನೋಡುತ್ತಿತ್ತು. ಮೂರು ವರ್ಷವಾದರೂ ಮಾತೇ ಬಾರದೇ, ಔಷಧಿ, ಹರಕೆಗಳೆಲ್ಲ ಮುಗಿದು ಕೈಚೆಲ್ಲಿದ್ದಾಗ ಗೆಳೆಯ ಕಾಸಿಂಸಾಬರು, ಹೆಗಲ ಮೇಲೆ ಹೊತ್ತುಕೊಂಡು ಹೋಗಿ ದರ್ಗಾಕ್ಕೆ ಪೂಜೆ ಸಲ್ಲಿಸಿಕೊಂಡು ಬಂದಿದ್ದರು. ಪವಾಡವೆಂಬಂತೆ, ಮಾರನೆಯ ದಿನದಿಂದಲೇ ಪ್ರಹ್ಲಾದ ಮಾತು ಪ್ರಾರಂಭಿಸಿದ್ದ. ಅಂದಿನಿಂದ ಪ್ರತಿವರ್ಷ ಮೊಹರಂ ದಿನ ದರ್ಗಾಕ್ಕೆ ಹೋಗಿ ಪೂಜೆ ಕೊಟ್ಟು ಬರುತ್ತಿದ್ದರು. ಪ್ಯಾಂಟಿಗೆ ಹಣವಿಲ್ಲದೆ ಮುಖ ಸಣ್ಣದು ಮಾಡಿಕೊಂಡವ, ಮೊದಲ ವರ್ಷ ಹಾಸ್ಟೇಲಿನಲ್ಲಿ ರ್‍ಯಾಗಿಂಗ್ ಭಯದಿಂದ ಹೆದರಿಕೊಂಡವನು ಇವನೇನಾ? ಎನ್ನುವಷ್ಟು ಮಗ ಬೇರೆಯಾಗಿದ್ದ.

ಆದರೆ, ಕಾಲ ಬದಲಾಗಬಾರದು ಎಂಬ ಮೂರ್ಖರೇನೂ ಗೋಪಣ್ಣ ಮಾಸ್ತರರಾಗಿರಲಿಲ್ಲ. ಬದಲಾಗುತ್ತಿರುವ ವೇಗ ಮತ್ತು ವಿಧಾನವನ್ನು ತಾನು ತಡೆದುಕೊಳ್ಳಬಲ್ಲೆನೇ? ಎಂಬ ಗಾಭರಿ ಮಾತ್ರ ತಪ್ಪುತ್ತಿರಲಿಲ್ಲ. ಒಂದು ದಿನ ರಾತ್ರಿ ಪ್ರಹ್ಲಾದಏನೋ ನೆನಪಾದಂತೆ "ಅಪ್ಪ ಇವತ್ತು ಒಂದು ಮನೆ ಕೊಂಡುಕೊಂಡೆ. ೨೦ಲಕ್ಷ ಆಯ್ತು. ಆ ಏರಿಯಾದಲ್ಲಿ ಒಳ್ಳೆಯ ಬೆಲೆ" ಅಂತ ತಣ್ಣಗೆ ಹೇಳಿದಾಗ, ಗೋಪಣ್ಣ ಮಾಸ್ತರು ಬೆಚ್ಚಿದ್ದರು. ಮನೆಯ ಕುರಿತು ಯಾವ ಪೂರ್ವಯೋಚನೆಯೂ ಇಲ್ಲದೆ, ಅಂಗಡಿಗೆ ಹೋಗಿ ತರಕಾರಿ ತರುವಷ್ಟು ತಣ್ಣಗೆ ಮನೆ ತಂದಿದ್ದು ವಿಚಿತ್ರ ಯಾತನೆಗೆ ದೂಡಿತ್ತು. ಒಂದು ಮನೆ ಕಟ್ಟಿಸಲು ತಾವು ಪಟ್ಟ ಪಡಿಪಾಟಲುಗಳು ನೆನಪಾದವು. ಹೀಗೆ ದಿಢೀರ್ ಎಂದು, ಅದೂ

ಬರೀ ಮಾರ್ಕೆಟ್ ಲೆಕ್ಕಾಚಾರದಲ್ಲಿ ಖರೀದಿಯಾಗುವ ಮನೆಯೊಂದಿಗೆ ಭಾವನಾತ್ಮಕ ಸಂಬಂಧ ಇರಲು ಸಾಧ್ಯವೇ? ಎಂಬ ಪ್ರಶ್ನೆ ಅವರನ್ನು ಕಾಡತೊಡಗಿತ್ತು. ಮನೆ ಬರೀ ಒಂದು ಖರೀದಿ ವಸ್ತುವಾಗುವುದನ್ನು ಅರಗಿಸಿಕೊಳ್ಳುವುದು ಅವರಿಗೆ ಕಷ್ಟವಾಗುತ್ತಿತ್ತು.

ಅತಿನಾಗರಿಕ ಪರಿಸರದ ಉತಾವಳಿಗೆ ಸಿಕ್ಕಿ ಹಣ್ಣಾಗುತ್ತಿದ್ದೇನೆ. ಅನ್ನಿಸಿದಾಗ, ಗೋಪಣ್ಣ ಮಾಸ್ತರರಿಗೆ ಮನಸ್ಸನ್ನು ಯಾವುದರಲ್ಲಾದರೂ ತೊಡಗಿಸಬೇಕು ಎಂದು ತೀವ್ರವಾಗಿ ಅನ್ನಿಸಿದಾಗ, ತಮ್ಮ ಸರ್ವೀಸಿನ ಸರ್ಟಿಫಿಕೇಟು, ರಾಜ್ಯಪಾಲರಿಂದ ಪಡೆದ 'ಉತ್ತಮ ಶಿಕ್ಷಕ' ಪ್ರಶಸ್ತಿಯ ಪತ್ರ ಹಿಡಿದು ಹತ್ತಿರದ ಶಾಲೆಗಳಿಗೆ ಅಡ್ಡಾಡಿದರು. ಆದರೆ ಎಲ್ಲ ಶಾಲೆಗಳೂ ಕಾನ್ವೆಂಟ್‌ಗಳಾಗಿ, ಯಾರಿಗೂ ಗೋಪಣ್ಣ ಮಾಸ್ತರರ ಸರ್ವೀಸಿನ ಅಗತ್ಯವಿರಲಿಲ್ಲ. ಕನ್ನಡ ಶಾಲೆಗಳು ಸ್ಲಂ ಏರಿಯಾಗಳಲ್ಲಿ ಮಾತ್ರ ನಡೆಯುತ್ತಿದ್ದವು. ಅಷ್ಟು ದೂರ ನಡೆದುಹೋಗಿ ಸರ್ವೀಸ್ ಮಾಡಿ ಬರುವುದು ಅವರಿಗೆ ಸಾಧ್ಯವಿರಲಿಲ್ಲ. ಕನ್ನಡ ಶಾಲೆಯಿಂದ ಕಲಿಕೆ ಆರಂಭಿಸಿದವರು ಸಾಫ್ಟವೇರ್ ಕಂಪನಿಯ ಪ್ರಸಿದ್ಧ ಇಂಜಿನಿಯರ್ಸ ಆಗಿರುವಾಗ, ಈ ಇಂಗ್ಲೀಷ ಭೂತ ಯಾಕಾಗಿ ಈ ಪ್ರಮಾಣದಲ್ಲಿ ಆವಾಹನೆಯಾಗಿದೆ ಎನ್ನುವುದು ಗೋಪಣ್ಣ ಮಾಸ್ತರರಿಗೆ ಅರ್ಥವಾಗಲಿಲ್ಲ. ಉದ್ಯೋಗದ ಆಸೆ ಕೈಬಿಟ್ಟು, ಅಪಾರ್ಟಮೆಂಟಿನ ಚಿಕ್ಕ ಚಿಕ್ಕ ಮಕ್ಕಳನ್ನು ಸಾಯಂಕಾಲದ ಹೊತ್ತು ಕೂಡಿಸಿ, ಅವರಿಗೆ ಚೈತ್ರ-ವೈಶಾಖ, ರಾಮಾಯಣ-ಮಹಾಭಾರತದ ಕಥೆಗಳನ್ನ ಹೇಳಿಕೊಡಲು ತೊಡಗಿದರು. ಆದರೆ ಅಪಾರ್ಟಮೆಂಟಿನ ಜಂಟ್ಲಮನ ತಂದೆ-ತಾಯಂದಿರಿಗೆ ಈ 'ಓಲ್ಡ ಮ್ಯಾನ್'ನ ಪ್ರಯೋಗ ಅನಗತ್ಯ ಅನ್ನಿಸಿ ತಕರಾರೂ ಬಂತು. ಗೋಪಣ್ಣ ಮಾಸ್ತರರಿಗೆ ತಮ್ಮ ಜ್ಞಾನ-ಅನುಭವ-ನಿಸ್ವಾರ್ಥತೆಗಳೆಲ್ಲವೂ ಅಪ್ರಯೋಜಕವಾಗುತ್ತಿವೆ ಎಂಬ ಗಾಬರಿ ಕಾಡತೊಡಗುತ್ತದೆ.

ಈ ಲೌಕಿಕದ ಸಹವಾಸವೇ ಸಾಕೆಂದು, ರಾಯರ ಮಠಕ್ಕೆ ಹೋದರೆ ಊರ ತುಂಬ ರಾಯರ ಮಠಗಳು ಓಣಿಗೊಂದರಂತೆ ತಲೆಎತ್ತಿರುವ ವಿದ್ಯಮಾನ ಕಾಣುತ್ತದೆ. ಇಲ್ಲಿಯ ರಾಯರೂ ರೇಷ್ಮೆ, ಬೆಳ್ಳಿ-ಬಂಗಾರಗಳಲ್ಲಿ ಮಿಂಚುತ್ತ, ಅಲ್ಲಿಯ ಕಂಪ್ಯೂಟರ್ ಪೂಜೆಗಳನ್ನು ನೋಡುತ್ತ; ರಾಯರೂ ಬೇರೆಯೇ ಅನ್ನಿಸಿ ಅಲ್ಲಿಗೆ ಹೋಗುವುದನ್ನೂ ನಿಲ್ಲಿಸಿದರು. ಈಗಂತೂ ಗೋಪಣ್ಣ ಮಾಸ್ತರರ ಜಗತ್ತು ತುಂಬ ಸಂಕುಚಿತವಾಗಿತ್ತು. ಮಗ ಏನಾದರೂ ತೀರ ಅಪರೂಪಕ್ಕೆ ಹೇಳಿದ ಕೆಲಸ ಮಾಡುವುದು, ಅಪಾರ್ಟಮೆಂಟ ಕಾಯುವ ಜವಾನನೊಂದಿಗೆ ಮಾತಾಡುವುದು, ಶಾಲೆಗೆ ಹೋಗಿ ಬರುವ ಮಕ್ಕಳನ್ನು ನೋಡುತ್ತ

ನಿಲ್ಲುವುದು, ಕೋಣೆಗೆ ಹೋಗಿ ಹೆಂಡತಿಯ ಫೋಟೋದ ಎದುರು ಮಾತನಾಡಿಕೊಳ್ಳುವುದು.

ಗೋಪಣ್ಣ ಮಾಸ್ತರರು ಈಗ ಬುದ್ಧಿವಂತರಾಗಿದ್ದರು. ಮಗನಿಗೆ ಹೆಣ್ಣು ಹುಡುಕಿ ಕೊಡುವ ಸಾಹಸ ಮಾಡಲಿಲ್ಲ. ಮನೆ ಕೊಂಡವನು ಹೆಂಡತಿಯನ್ನು ಹುಡುಕಿಕೊಳ್ಳುತ್ತಾನೆ ಎಂದು ತಿಳಿದಿತ್ತು. ಹಾಗೇ ಆಯಿತು ಕೂಡ. ಸೊಸೆಯ ಜಾತಿ ತಿಳಿಯಬೇಕು ಅನ್ನಿಸಿತ್ತಾದರೂ, ತಿಳಿದುಕೊಳ್ಳಲಿಕ್ಕೆ ಆಗಿರಲಿಲ್ಲ. ಮದುವೆ ಪಾರ್ಟಿಯಲ್ಲಿ 'ವೆಜಿಟೇರಿಯನ್ನಾ' ಎಂದು ಕೇಳಿ ಕೇಳಿ ಹಾಕಿಸಿಕೊಂಡು, ಮೂಲೆಯಲ್ಲಿ ಕೂತು ಉಂಡರು. ಸೊಸೆ, ಪ್ರೀತಿಯಿಂದ 'ಮಾವ' ಎಂದು ಕರೆವಾಗ ತೃಪ್ತರಾದರು. ಸೊಸೆ ಚಿಕನ್ ಬಿರಿಯಾನಿ ಮಾಡುತ್ತೇನೆ ಅಂದಾಗ, 'ಪಾತ್ರೆ ಬೇರೆ ಉಪಯೋಗಿಸಮ್ಮ' ಎಂದು ಹೇಳಿದರು. ಪೂಜೆಗೊಳ್ಳುತ್ತಿದ್ದ ಸಾಲಿಗ್ರಾಮಗಳೆಲ್ಲ ಕಣ್ಣೆದುರು ಬಂದ ಹಾಗಾಯ್ತು. ಮರುದಿನ ಪೂಜೆ ಮಾಡುವಾಗ, ಕೃಷ್ಣನಿಗೆ, 'ಅನ್ನ–ಹುಳಿ ತಿನ್ನಿಸಿ ಬೇಜಾರು ಮಾಡಿದ್ದೆನಾ?' ಎಂದು ಪ್ರೀತಿಯಿಂದ ನಕ್ಕರು. ಮಗನ ಸಮಾನ ಉದ್ಯೋಗಿಯಾದ ಸೊಸೆ, ಆಫೀಸಿಗೆ ಅಂತ ಹೋದ ಮಗ ಹಾಗೇ ನಾಲ್ಕು ದಿನಕ್ಕೆ ನ್ಯೂಯಾರ್ಕಗೆ ಹೋಗಿ ಬರೋದು..... ಎಲ್ಲವನ್ನೂ ತಣ್ಣಗೆ ಅರಗಿಸಿಕೊಳ್ಳತೊಡಗಿದ್ದರು.

ಅಚಾನಕ್ಕಾಗಿ ಊರಿಂದ ಕಾಸಿಂಸಾಹೇಬರು ಬಂದಿದ್ದು, ಗೋಪಣ್ಣ ಮಾಸ್ತರರಿಗೆ ಊರೇ ಬಂದ ಹಾಗಾಗಿತ್ತು. ಶಾಲೆ, ಹಳ್ಳ, ನರಸಿಂಹಸ್ವಾಮಿ ಜಾತ್ರಿ ಎಲ್ಲ ಮಾತಾಡಿಕೊಂಡರು. ಕಾಸಿಂ ಸಾಹೇಬರು ತಮ್ಮ ಮಗ ಇಸ್ಮಾಯಿಲ್ ಕಂಪ್ಯೂಟರ್ ಇಂಜಿನಿಯರಿಂಗ್ ಮುಗಿಸಿದ್ದಾಗಿಯೂ, ನಿನ್ನ ಮಗನಿಂದ ಅವನಿಗೊಂದು ನೌಕರಿ ವ್ಯವಸ್ಥಾ ಮಾಡಿಕೊಡಲು ಕೇಳಿಕೊಂಡರು. 'ಕೈ ಬಿಡಬೇಡ ಗೋಪಣ್ಣ, ಭಾಳ ಕಷ್ಟ ಆಗ್ಯದೆ" –ಅಂತ ಕಾಸಿಂಸಾಬರು ಗೋಪಣ್ಣನ ಕೈ ಹಿಡಕೊಂಡು ಹೇಳಿದರು. ಗೋಪಣ್ಣ ಧ್ವನಿ ಗದ್ಗದಿತವಾಗಿತ್ತು. ಆದರೆ ಅಪ್ಪನ ಈ ಬಾಂಧವ್ಯವನ್ನು ತಿಳಿವ ಸ್ಥಿತಿ ಪ್ರಹ್ಲಾದನದಲ್ಲ. 'ನಮ್ಮ ಕಷ್ಟಕಾಲಕ್ಕೆ ಆದವರು ಕಾಸಿಂಸಾಬರು. ನೀ ಹೀಂಗ ಪಠ ಪಠಾಂತ ಮಾತಾಡ್ತಿರೋದಕ್ಕ ಅವರೇ ಕಾರಣ' ಎಂದರೂ ಪ್ರಹ್ಲಾದ ಲಾಜಿಕಲ್ ಮಾತನಾಡಿದ. "ಯೋಗ್ಯತೇನ ಬರೀ ಮಾರ್ಕ್ಸನಿಂದ ಅಳೀಲಿಕ್ಕಾದೀತ?" ಎಂಬ ಗೋಪಣ್ಣ ಮಾಸ್ತರರ ಪ್ರಶ್ನೆ ಪ್ರಹ್ಲಾದನಿಗೆ ಅರ್ಥವಾಗಲಿಲ್ಲ. 'ಅದೇನು ಕನ್ನಡ ಸಾಲೀ ಮಾಸ್ತರರ ಕೆಲಸ ಅಂತ ಮಾಡಿಯೇನು?' ಅಂದುಬಿಟ್ಟಿದ್ದ. ಗೋಪಣ್ಣ ಮಾಸ್ತರರು ಮಗ

'ಸಾರಿ' ಅಂದರೂ ಆ ಮಾತು ಮನಸ್ಸಿಗೆ ತಗೊಂಡರು. 'ನನ್ನ ಕಕ್ಕೊಂಡೋಗು' ಅಂತ ಹೆಂಡತಿಗೆ ಬೇಡಿಕೊಂಡರು.

ಮರುದಿನ ಸೊಸೆ ಹೆರಿಗೆ ಬೇನೆಯಿಂದ ಬಳಲಿದಳು. ಮಗ ಬರುವವರೆಗೂ ಸೊಸೆಯ ಬಗ್ಗೆ ದೇವರಲ್ಲಿ ಬೇಡಿಕೊಂಡರು. ಆವತ್ತು ಇವರು ಹೋಗಬೇಕಿದ್ದ ದೊಡ್ಡ ಖಾಸಗಿ ಆಸ್ಪತ್ರೇಲಿ ಏನೋ ಸ್ಕ್ಯಾಂಡಲ್ ಆಗಿಬಿಟ್ಟಿತ್ತು. ಆಸ್ಪತ್ರೆಯೊಳಗೆ ಹೋಗುವುದು ಸಾಧ್ಯವಾಗಲಿಲ್ಲ. ಪೋಲಿಸ್ ಈ ಹೊತ್ತಲ್ಲಿ, ಸರ್ಕಾರೀ ಆಸ್ಪತ್ರೆಗೆ ಹೋಗಿ ಎಂದ. ಮನಸ್ಸಿರದಿದ್ದರೂ ಬೇರೆ ದಾರಿಯಿರಲಿಲ್ಲ. ಸರ್ಕಾರಿ ಆಸ್ಪತ್ರೆಯ ಮುರಿದ ಬೆಂಚಿನ ಮೇಲೆ ಸೊಸೆಯನ್ನು ಮಲಗಿಸಿಕೊಂಡು ಕಾಯ್ತಿದ್ದರು. ಅಲ್ಲಿಯ ನರ್ಸ ರಾಧ, ಗೋಪಣ್ಣ ಮಾಸ್ತರರ ಕೈಲಿ ಕಲಿತ ಹುಡುಗಿ, ಅಕ್ಕಸಾಲಿಗ ಗಂಗಣ್ಣನ ಮಗಳು. ಮಾಸ್ತರರಿಗೆ ನೆನಪು ಬರಲಿಲ್ಲ. ಆದರೆ ಅವಳೇ ಕುಣಿಕುಣಿದು ಪರಿಚಯಿಸಿಕೊಂಡಳು. ಎರಡು ತಾಸಲ್ಲಿ ಹೆರಿಗೆಯಾಗಿತ್ತು. 'ಬಳ್ಳಾರಿ ಬೆರಕಿ ಮುಖ' ಎಂದು ಮೊಮ್ಮಗನನ್ನು ರಾಧ ಎದುರಿಟ್ಟಳು. ಹತ್ತು ದಿನ ಸರ್ಕಾರಿ ಆಸ್ಪತ್ರೇಲಿ ನಗುನಗುತ್ತ ಕಳೆಯಿತು. ರಾಧ ಏನು ಮಾಡಿದರೂ ಹಣ ಮುಟ್ಟಲಿಲ್ಲ. 'ಮಾಸ್ತರರೇ, ಬದುಕು ಮಾಡೂದು ಕಲಿಸೀರಿ. ಅದಕ್ಕಿಂತ ದೊಡ್ಡದು ಏನೈತಿ? ಎಂದು ಬೀಳ್ಕೊಟ್ಟಳು. ಕಾರಿನಲ್ಲಿ ಮನೆಗೆ ಹೊಗುವಾಗ ಪ್ರಲ್ಹಾದನಿಗೆ ಏನನ್ನಿಸ್ತೋ? ರಾಧಾಳಂತಹ ವ್ಯಕ್ತಿಗಳನ್ನ ನನ್ನ ಜೀವನದಲ್ಲಿ ನೋಡಲಿಕ್ಕೆ ಆಗದು. ಅಮೇರಿಕಾದವರಿಗೆ ಹಗಲು-ರಾತ್ರಿ ದುಡೀತಿವಿ. ನಮಗೆ ಬಜೆಟ್ ಅಷ್ಟೆ ಗೊತ್ತಿರ್ತದ. ಮನುಷ್ಯರಲ್ಲ -ಎಂದ. ಎಳೆಕೂಸು ಆ ಮಾತಿಗೆ ನಕ್ಕಂತಾಯಿತು.

ಕಥೆ, ಜಾಗತೀಕರಣದ ಕಾರಣದಿಂದ ಶಿಕ್ಷಣ, ಉದ್ಯೋಗ, ಮನೆ, ಮದುವೆ, ಬದುಕಿನ ವಿಧಾನಗಳೆಲ್ಲ ಬದಲಿಯಾಗುತ್ತ- ಪರಂಪರಾಗತ ಮೂಲ ಜ್ಞಾನವು ಇದ್ದಲ್ಲೇ ಪಳೆಯುಳಿಕೆಯಂತಾಗುತ್ತಿರುವ ದುರಂತವನ್ನು ಚಿತ್ರಿಸುತ್ತದೆ. ಜಾಗತೀಕರಣದ ನೆರಳಲ್ಲಿ ಸಿಕ್ಕ ಬಡ ಭಾರತೀಯರಿಗೆ ಗೋಪಣ್ಣ ಮಾಸ್ತರರಿಗೆ ಆದಂತೆ -ಬದುಕಿದ್ದ ನೆಲವೇ ಅಪರಿಚಿತ ಅನ್ನಿಸಿಬಿಟ್ಟಿದೆ. ಆದರೆ, ಸರ್ಕಾರಿ ದವಾಖಾನಿ ಮತ್ತು ಗೋಪಣ್ಣ ಮಾಸ್ತರರ ಶಿಷ್ಯೆ ರಾಧಾಳ ಇರುವಿಕೆಯು ಮತ್ತೆ ಈ ಬದುಕು ಈ ನೆಲಕ್ಕೆ ಕಾಲೂರಬೇಕು. ತನ್ನ ಪಾದಗಳನ್ನೂರಿ ಮುನ್ನಡೆಯಬೇಕು ಎಂಬ ಸದಾಶಯವನ್ನು ಸೂಚಿಸುತ್ತಿವೆ. ಪ್ರಹ್ಲಾದನ ನಿಟ್ಟುಸಿರಿನ ಮಾತಿಗೆ, ಅವನ ಎಳೆಯ ಕಂದ ನಗುವುದು ಮರಳಿ ಬದುಕು ಮುನ್ನಿನಂತಾಗಬೇಕಾದ, ಬೇರಿಗೆ ಮಣ್ಣು ಸಂದಾಯವಾಗಬೇಕಾದ ಸ್ಥಿತಿಯ ಸೂಚಕವಾಗಿದೆ.

ಮಹಾಭಾರತ ಯುದ್ಧಾನಂತರ, ಸಮಸ್ತ ಹಸ್ತಿನಾವತಿಯ ದೊರೆತನ ಅಭಿಮನ್ಯುವಿನ ಮಗ ಪರೀಕ್ಷಿತನಿಗೆ ದೊರಕುತ್ತದೆ. ಆದರೆ ಆ ಸಂಪತ್ತಿನ ಗರ್ವ ಅವನನ್ನು ದಿಕ್ಕೆಡಿಸುತ್ತದೆ. ಆತ ಅಕಾಲಮೃತ್ಯುವನ್ನು ಹೊಂದಬೇಕಾಗುತ್ತದೆ. ಮುಂದೆ ಅವನ ಮಗ ಜನಮೇಜಯ, ಈ ಎಲ್ಲ ತಪ್ಪುಗಳನ್ನು ಸರಿಪಡಿಸಿಕೊಂಡು ರಾಜ್ಯವನ್ನು ಸಮರ್ಥವಾಗಿ ಮುನ್ನಡೆಸುತ್ತಾನೆ. ಭಾರತವೀಗ ಸಂಪತ್ತಿನ ಗರ್ವ ಹತ್ತಿದ ತಲೆಮಾರನ್ನು ತಿದ್ದುವ, ಮುಂದಿನ ತಲೆಮಾರನ್ನು ಕಾಯುತ್ತಿದೆ. ಸವಿತಾ ನಾಗಭೂಷಣ ಅವರ 'ಸಮಯವಿದೆಯೇ ಪಪ್ಪಾ?' ಇದೇ ಚರ್ಚೆಯನ್ನು ಮಾಡುವ ಅತ್ಯುತ್ತಮ ಕವಿತೆ. ಅಲ್ಲಿ ಮಗು, ತಂದೆಯನ್ನು ಪ್ರಶ್ನಿಸುತ್ತದೆ. ಪ್ರಕೃತಿಯ ಚೆಲುವಿಗೆ ಸ್ಪಂದಿಸಲು ಸಮಯವಿದೆಯೇ ಎನ್ನುತ್ತದೆ. ತಾನು ಯಾವ ದೇಶಕ್ಕೂ ಹೋಗೆನು. ಇಲ್ಲೇ ನಿಮ್ಮೊಟ್ಟಿಗೇ ಇದ್ದುಬಿಡುವೆನು. ಅಜ್ಜ ಉತ್ತು ಬಿತ್ತಿದ ಹೊಲವನ್ನೇ ಊಳುವೆನು. –ಎನ್ನುತ್ತದೆ.

ಜಾಗತೀಕರಣವೆಂಬ ಹಸಿದಂಟಿನ ಹೊಡೆತಕ್ಕೆ ಭಾರತದ ಯುವ ಸಮುದಾಯ ದಿಕ್ಕೆಟ್ಟು ಓಡಿದೆ. ಪ್ರಕೃತಿಯೊಂದಿಗಿನ ಸಂಬಂಧ ತಪ್ಪಿದೆ. ಪರಂಪರೆಯ ಸ್ಮೃತಿ ಸಂಪುಟಗಳ ಸಂಬಂಧ ತಪ್ಪಿದೆ. ಕೌಟುಂಬಿಕ ಸಂಬಂಧ ಎಲ್ಲವನ್ನೂ ಬಜೆಟ್ ಮೂಲಕ ಅಳೆಯುವ ಸ್ಥಿತಿ ನಿರ್ಮಾಣವಾಗಿದೆ. ಅದು ಜೀವ ಸಂಬಂಧದ ನೆಲೆಯಲ್ಲಿ ಬದಲಬೇಕಿದೆ ಎಂಬ ಆಶಯವು ಈ ಕಥೆಯಲ್ಲಿದೆ.

ಬದುಕು ನಮ್ಮಂತೆ ಬದಲದಿದ್ದರೆ, ಅದು ಇದ್ದಂತೆಯೇ ಒಡ್ಡಿಕೊಳ್ಳಬೇಕು. ಅಂತಹ ತ್ರಾಣದಿಂದ ಮುಖಾಮುಖಿಯಾಗಬೇಕೇ ಹೊರತೂ ಪಲಾಯನವಾದವಲ್ಲ ಎಂಬ ಜೀವನ ಮೀಮಾಂಸೆಯನ್ನು ಬದುಕಿನ ಅತ್ಯಂತಿಕ ಧರ್ಮವೆಂಬಂತಹ ಕಥೆಗಳನ್ನು ಕೊಟ್ಟವರು ಬಿ.ಟಿ.ಜಾನ್ಹವಿ. ಇವರ 'ಆಶ್ರಿತರು' ಎಂಬ ಕಥೆಯು ಬಂಡವಾಳವಾದದ ಭೂತ ಬೆನ್ನುಹತ್ತಿದ ವ್ಯಕ್ತಿಗಳು ಮನುಷ್ಯ ಬದುಕಿನ ಘನತೆಯಾದ ಸಂಬಂಧವನ್ನು ತೊತ್ತಳ ತುಳಿದುಬಿಡುತ್ತಾರೆ – ಎಂಬುದನ್ನು ಹೇಳುವ ಕಥೆಯಿದು. ಪ್ರಾಣಾಂತಿಕವಾದ ಹಿಂಸೆ ಮತ್ತು ಹಲ್ಲೆಗೆ ಈಡಾಗಿ, ಜೀವನ್ಮರಣದ ನರಳಾಟದಲ್ಲಿರುವ ಆದಿತ್ಯ ಎಂಬ ವೃದ್ಧರನ್ನು ಅನಾಥಾಶ್ರಮವೊಂದರಲ್ಲಿ ಸುಳ್ಳು ಹೇಳಿ ತ್ಯಜಿಸಿ ಹೋಗುವ ಘಟನೆಯಿಂದ ಕಥೆ ಪ್ರಾರಂಭವಾಗುತ್ತದೆ. ಹೀಗೆ, 'ನಮ್ಮನೆ ಹತ್ತಿರದ ಮೋರಿಯ ಬಳಿ ಭಿಕ್ಷೆ ಬೇಡುತ್ತಿದ್ದರು. ಇವತ್ತು ಅಲ್ಲಿಯೇ ಪ್ರಜ್ಞೆ ತಪ್ಪಿ ಬಿದ್ದಿದ್ದರು" ಎಂದು ಸುಳ್ಳು ಹೇಳಿ, ಸೇರಿಸಿ ಹೋಗುವವನು ಅವರ ಮೊಮ್ಮಗ ವೀರ. ಬಿಬಿಎಂ ಮುಗಿಸಿದ್ದ ಅವನು ಓದು ಮುಂದುವರಿಸುವ ಇಚ್ಛೆ ಇರದೆ, ನೌಕರಿ ಮಾಡುವ ಮನಸ್ಸು

ಇರದೆ, ಅಪ್ಪ ಮಾಡಿಟ್ಟ ಹಣ ಉಢಾಯಿಸುವುದರಲ್ಲಿ, ಲೈಫ್ ಎಂದರೆ ಎಂಜಾಯ್‌ಮೆಂಟ ಎಂದುಕೊಳ್ಳುವುದರಲ್ಲಿ ಮಗ್ನನಾಗಿದ್ದ. ಆದಿತ್ಯ ಪ್ರಜ್ಞಾಹೀನ, ಅರೆಪ್ರಜ್ಞಾ ಸ್ಥಿತಿಯ ಜೀಕಾಟದಲ್ಲಿ ಭಿಕಾರಿಯಂತೆ ಕಾಣುತ್ತಿದ್ದರು. ಅವರ ಮೈ ಪೂರ್ತಿ ಕೊಳಕು ಮೆತ್ತಿತ್ತು. ಮೈ ತುಂಬ ಹಲ್ಲೆಯ ಗಾಯಗಳಿದ್ದವು. ಪುನರ್ವಸತಿ ಕೇಂದ್ರದಲ್ಲಿಯ ಸಹಾಯಕರು ಮೃದುವಾಗಿ ಅವರ ದೇಹವನ್ನು ಶುಚಿಗೊಳಿಸಿ, ಮಲಗಿಸಿ, ಗಾಯಗಳಿಗೆಲ್ಲ ಔಷಧಿಯ ಪಟ್ಟಿ ಹಾಕಿ, ಸತತವಾಗಿ ಗ್ಲೂಕೋಸ್ ಏರಿಸುತ್ತಿದ್ದಂತೆ ಅವರಿಗೆ ಒಂದಿಷ್ಟೇ ಸ್ಮೃತಿ ಮರಳಲಾರಂಭಿಸಿತ್ತು. ಆ ಸ್ಮೃತಿಯಲ್ಲಿ ಒಮ್ಮೆಲೆ ರತ್ನಾ ಎಂದು ಕೂಗಿದರು. ಪುನರ್ವಸತಿ ಕೇಂದ್ರದ ರಮಾ, ಆದಿತ್ಯರನ್ನು ಮೃದುವಾಗಿ ಅವರ ಪೂರ್ವಾಪರಗಳ ಬಗ್ಗೆ ಕೇಳುತ್ತಾಳೆ. ಊರು ಮದ್ದಿಕೆರೆ ನಮ್ಮೋರೆಲ್ಲ ಸತ್ತೋದ್ರು ಎನ್ನುವ ಅವರ ಧ್ವನಿಯ ಆಳ ತೀವ್ರವಾಗಿತ್ತು. ಏನು ಮಾಡಿದರೂ ಒಂದೇ ಒಂದು ತುತ್ತು ಅನ್ನ ತಿನ್ನಲಾಗದ ಆದಿತ್ಯರ ಕಥೆಯ ಸ್ಮೃತಿ ಹೀಗಿದೆ.

ತುಂಬ ಸುಂದರ ಕಟ್ಟುಮಸ್ತಾದ ಹೈಸ್ಕೂಲ್ ಮೇಷ್ಟ್ರು ಆದಿತ್ಯ ಮತ್ತು ಅವರ ಮುದ್ದಿನ ಮಡದಿ ರತ್ನಾ. ಅವರ ಅತಿ ಮುದ್ದಿನ ಒಬ್ಬನೇ ಒಬ್ಬ ಮಗ ಮಲ್ಲೇಶ. ರತ್ನಳಿಗಂತೂ ಮಗ ಜೀವಕ್ಕೂ ಹೆಚ್ಚು. ಹೈಸ್ಕೂಲ್‌ವರೆಗೂ ಅಮ್ಮನ ಸೆರಗಿನಲ್ಲೇ ಅವಿತು ಕಲಿತ. ಪಿಯುಸಿಗೆ ಅನಿವಾರ್ಯವಾಗಿ ಹಾಸ್ಟೆಲ್ ಸೇರಿಸಬೇಕಾಯಿತು. ಅಮ್ಮನ ಮಗ ಮಲ್ಲೇಶನನ್ನು ಸಾಗರ್ ಸರ್ಜೂಕರ್ ಎಂಬ ಮೇಷ್ಟ್ರು ತಮ್ಮ ಅತ್ಯಾಪ್ತನನ್ನಾಗಿಸಿಕೊಂಡರು. ಅವರು ನಿವೃತ್ತಿಹೊಂದಿ ಮುಂಬೈಗೆ ಹೋಗುವಾಗ, ಮಗನ ಭವಿಷ್ಯದ ಆಸೆಯ ಒತ್ತಾಯ ಹಚ್ಚಿ ಅವನನ್ನೂ ಕರೆದೊಯ್ದರು. ಅವನನ್ನು ಮರಳಿ ಊರಿಗೆ ಬರಲು ಬಿಡಲೇ ಇಲ್ಲ. ಮಲ್ಲೇಶನಿಗೆ ಕೆಲಸ ಸಿಕ್ಕಿದ್ದು. ಅವನು ಸಾಗರ್ ಸರ್ಜೂಕರ್ ಅವರ ಮಗಳನ್ನು ಪ್ರೀತಿಸಿ ಮದುವೆಯಾಗಿದ್ದು, ಅವರಿಗೊಬ್ಬ ಮಗ ಹುಟ್ಟಿದ್ದೂ ಮೂರು ಪತ್ರಗಳಾಗಿ ಬಂದು ಹೆತ್ತೊಡಲ ಸಂಕಟ ಶಮನಗೊಳಿಸದಾದವು.

ಮಗನ ನಾಮಕರಣಕ್ಕೆ ಬರಲು ಮಗನೇ ಫೋನು ಮಾಡಿದಾಗ, ಹೆತ್ತವರ ಜೀವದಲ್ಲಿ ಬೆಳಕೊಂದು ಮೂಡಿ ಮುಂಬೈಗೆ ತೆರಳಿದರು. ಮಗನ ಮುಖ ನೋಡಿದೊಡನೆ ದಣಿವೂ ಮರೆತಿತ್ತು. ಆದರೆ ಅಲ್ಲಿ ಮಗನ ಮಮತೆಯ ತೋಳಸೆರೆ ಸಿಗಲಿಲ್ಲ. ಮೊಮ್ಮಗುವನ್ನು ಮುದ್ದಾಡಿಸಗೊಡಲಿಲ್ಲ. ಅಲ್ಲಿ ನಡೆದ ಘಟನೆಗಳಿಂದ ರತ್ನ ಚೂರುಚೂರಾಗಿದ್ದಳು. ರತ್ನಳಿಗಾಗಿ ಆದಿತ್ಯ ಕೆಲಸಕ್ಕೆ ರಾಜೀನಾಮೆ ಕೊಟ್ಟು ಹಳ್ಳಿಯ ತೋಟ ಸೇರಿ, ರತ್ನಳನ್ನು ಮಗುವಿನಂತೆ ಪ್ರೀತಿಸಿದರು. ನಾವಿಬ್ಬರೂ ಹೊಸ ಬದುಕು ಕಟ್ಟೋಣ ಎಂದು ಆರ್ದ್ರವಾಗಿ

ಬೇಡಿಕೊಂಡರು. ಆದರೆ ರತ್ನ ಹೊರಟುಹೋಗಿದ್ದಳು. ಎಲ್ಲ ಮುಗಿದ ಮೇಲೆ, 'ರತ್ನ ಇನ್ನಿಲ್ಲ. ಇಂತಿ ನಮಸ್ಕಾರಗಳು' ಎಂದು ಒಂದು ಸಾಲಿನ ಪತ್ರ ಹಾಕಿದರು. ತಾವು ಒಂಟಿಯಲ್ಲ ಎಂದುಕೊಂಡರು. ತೋಟವೇ ಜೀವವಾಗಿ ಬಾಳಿದರು.

ನಿಶ್ಚಿಂತ ಬದುಕಿನ ಹಕ್ಕನ್ನು ಕಸಿಯುವಂತೆ, ಮಲ್ಲೇಶ–ರೇಖ ತೋಟಕ್ಕೆ ಬಂದರು. ಅವರೊಂದಿಗಿವರು ಮಾತೂ ಆಡಲಿಲ್ಲ. ಆದರೆ ಮತ್ತೆ ಬಂದರು. ಮತ್ತೆ ಮತ್ತೆ ಬಂದರು. ಕ್ರಮೇಣ ಆದಿತ್ಯ ಕರಗಿದರು. ಕ್ರಮೇಣ ಮನೆ ಸಾಮಾನು, ಸ್ನೇಹಿತರು ಬಂದರು. ಸುನೀಲ ಎಂಬ ಮಲ್ಲೇಶನ ಗೆಳೆಯ ಮನೆ ಕಟ್ಟಿಸಲು ತೋಟದ ಮೇಲೆ ಸಾಲಕೊಡಿಸಲು ಅಂತ ಬೆಂಗಳೂರಿಗೆ ಕರೆದೊಯ್ದರು. ತಾನು ಬಂಧನಕ್ಕೊಳಗಾಗಿದ್ದೇನೆ ಎಂದು ಆದಿತ್ಯ ತಿಳಿಯುವಷ್ಟರಲ್ಲಿ ಎಲ್ಲವೂ ಕೈಮೀರಿತ್ತು. ಅವರ ಮೊಬೈಲಿರಲಿಲ್ಲ. ಊಟವಿರಲಿಲ್ಲ. ನೀರಿರಲಿಲ್ಲ. ಬೆಳಕಿರಲಿಲ್ಲ. ಶೌಚಕ್ಕೆ ಜಾಗಯಿರಲಿಲ್ಲ. ಅಸಹ್ಯದ ಬೇನೆಯಲ್ಲಿ ಪ್ರಜ್ಞಾಹೀನರಾದವರನ್ನು ಯಾರೋ ಎಳೆದಾಡಿ ಹಲ್ಲೆ ನಡೆಸಿ, ತಂದಿಲ್ಲಿ ಬಿಸಾಕಿದ್ದರು. ಆ ನೆನಪೇ ಎದೆ ನಡುಗಿಸಿ ಮತ್ತೆ ಅರೆಮಂಪರಿಗೆ ತಳ್ಳುತ್ತಿತ್ತು. ಆ ಮಂಪರಿನಲ್ಲಿಯೇ ಮಡದಿ ರತ್ನಾಳ ಕಣ್ಣೀರಿಗೆ ಸಮಾಧಾನದ, ಸಂಕಟದ ಸಂಭಾಷಣೆಯಲ್ಲಿದ್ದರು.

ಕಣ್ತೆರೆದರೆ, ಎದುರು ಅಪ್ಪಂತ ಸಭ್ಯ ಆಫೀಸರನೊಬ್ಬ ತನ್ನ ತಾಯಿಯನ್ನು ದಬಾಯಿಸುತ್ತಿದ್ದ. ಇಲ್ಲೇ ಬಿದ್ದಿರು ಅನ್ನುತ್ತಿದ್ದ. ಅವಳೋ ಆ ಮನೆ ನಂದು. ನನ್ನ ಗಂಡ ಮಾಡಿದ ಆಸ್ತಿ ಅನ್ನುತ್ತಿದ್ದಳು. ಆ ಘಟನೆ ನೋಡುತ್ತಿದ್ದ ಆದಿತ್ಯರಿಗೆ ಏನಾಯಿತೋ ಪಕ್ಕದಲ್ಲಿದ್ದ ಪೇಪರ್‌ವೇಟ್‌ನ್ನು ತೆಗೆದು ಅವನಿಗೆ ಬೀಸಿದರು. ಅವನು ಗಾಭರಿಯಿಂದ ತಾಯಿಗೆ 'ಬಾ ಹೋಗೋಣ' ಎಂದ. ಅವಳು ಅವನ ಕೈ ಬಿಡಿಸಿಕೊಂಡು 'ಬರಲ್ಲ ಹೋಗು' ಎಂದಳು. ಈ ಘಟನೆಯ ನಂತರ ಆದಿತ್ಯ ತಮ್ಮ ನೋವಿನ ತೀವ್ರ ಝಳಕಿನಿಂದ ಒಂದಿಷ್ಟೇ ಹೊರ ಬಂದಂತಾದರು. ಬಡಬಡಿಕೆ, ಕನವರಿಕೆ, ನರಳಿಕೆ ನಿಂತಿತ್ತು. ಮೂರನೆಯ ಬೆಳಗು ಒಂದಿಷ್ಟು ಟೀ ಕುಡಿದು ಕಣ್ಮುಚ್ಚಿ ಕೂತಿದ್ದರು. ಯಾರೋ ಅವರ ಭುಜ ಅಲುಗಿಸಿದಂತಾಯ್ತು. ನಿನ್ನೆ ಮಗನಿಂದ ಬಡಸಿಕೊಂಡಿದ್ದ ಮಹಿಳೆ ಕೈಯಲ್ಲಿ ಉಪ್ಪಿಟ್ಟಿನ ಪ್ಲೇಟು ಹಿಡಿದು ಮುಂದೆ ಚಾಚಿದ್ದರು. ಆದಿತ್ಯ ಅದೆಷ್ಟೋ ದಿನಗಳ ನಂತರ ಆ ಪ್ಲೇಟನ್ನು ಕೈಯಲ್ಲಿ ಹಿಡಿದುಕೊಂಡರು. ಅವರಿಗೆ ಮೊದಲ ಬಾರಿ ಹಸಿವಾಗಿತ್ತು.

ಈ ಕಥೆಯು, ಬಂಡವಾಳವಾದಿ ಮನಸ್ಥಿತಿಯು ಅದೆಷ್ಟು ಕ್ರೂರ ಹಂತವನ್ನು ತಲುಪಿಬಿಟ್ಟಿದೆ ಎಂಬುದರ ನಿದರ್ಶನವಾಗಿದೆ. ಈ ಕ್ರೌರ್ಯದ ವಿಷದ ಬೇರುಗಳು ಅದೆಲ್ಲಿವೆ?

ಮಲ್ಲೇಶನನ್ನು ತನ್ನ ಅಳಿಯನನ್ನಾಗಿಸಿಕೊಳ್ಳಲು ಹೆತ್ತವರಿಂದಲೇ ಬೇರ್ಪಡಿಸಿಬಿಡುವ ಸಾಗರ್ ಸರಜೂಕರ್‌ನ ವರ್ತನೆಯಲ್ಲಿಯೇ? ಅಥವಾ ಹಣದ ಐಶಾರಾಮಿ ಬದುಕಿಗಾಗಿ ತಂದೆ–ತಾಯಂದಿರ ಪ್ರಾಂಜಲ ಮಮತೆಯನ್ನೇ ನಿರ್ಲಕ್ಷಿಸುವ ಮಲ್ಲೇಶನೊಳಗಿನ ಬಂಡವಾಳವಾದದ ಭೂತದಲ್ಲಿಯೇ? ಮಲ್ಲೇಶನ ಶಿಕ್ಷಣ, ಉದ್ಯೋಗ, ನಾಗರಿಕ ಸೌಲಭ್ಯಗಳು ಅವನ ಮಾನವೀಯತೆಯನ್ನೇ ನಾಶಪಡಿಸಿದವೇ? ಅವನ ಮನುಷ್ಯತ್ವವನ್ನು ಕಾಪಿಡುವ ಶಕ್ತಿ ಶಿಕ್ಷಣಕ್ಕಿಲ್ಲವೇ? ಅವನ ಮಗ, ಆದಿತ್ಯನ ಮೊಮ್ಮಗನ ಮೃಗೀಯ ವರ್ತನೆಯನ್ನು ಹೇಗೆ ವಿವರಿಸಿಕೊಳ್ಳುವುದು? ಕಾನ್ವೆಂಟ್ ಶಿಕ್ಷಣ, ಬಾಯಿಪಾಠ, ಅತಿಸೌಲಭ್ಯದ ಬದುಕುಗಳು ಮನುಷ್ಯ ಸಂಬಂಧವನ್ನು ಅಲಕ್ಷ್ಯಗೊಳಿಸುವಷ್ಟು ದಟ್ಟವಾಗಿವೆಯೇ? ಯಜುರ್ವೇದದಲ್ಲಿ ಬರುವ ಯಾಜ್ಞವಲ್ಕ್ಯನ ಆಖ್ಯಾನದಲ್ಲಿಯ ಕಥೆಯೊಂದು ಹೀಗಿದೆ. ಗುರುಕುಲದಿಂದ ಪಂಡಿತನಾಗಿ ಮರಳಿ ಬರುವ ಮಗನು, ಮನೆಯಲ್ಲಿ ಅಹಂಕಾರದಿಂದ ವರ್ತಿಸುತ್ತಾನೆ. ತಂದೆಯ ದೈಹಿಕ ಶ್ರಮದ ದುಡಿಮೆಯು ತನಗೆ ಸಂಬಂಧವೇ ಇಲ್ಲದ ಸಂಗತಿಯೆನ್ನುವಂತೆ ಇರುತ್ತಾನೆ. ಇದರಿಂದ ಕನಲಿದ ತಂದೆಯು ಮಗನಿಗೆ, ಗುರುಗಳ ಬಳಿ ನೀನು ಏನೇನು ಕಲಿತೆ? ಎಂದು ಕೇಳುತ್ತಾನೆ. ಮಗನು ತನ್ನ ಪಾಂಡಿತ್ಯದ ಪಟ್ಟಿಯನ್ನು, ತಾನು ಯಾವ ಯಾವ ವಿದ್ಯೆಗಳಲ್ಲಿ ಪಾರಂಗತನಾಗಿದ್ದೇನೆ ಎನ್ನುವುದನ್ನು ಹೇಳತೊಡಗುತ್ತಾನೆ. ಇದರಿಂದ ತೃಪ್ತನಾಗದ ತಂದೆಯು, "ಹೋಗು, ನಿನ್ನ ಗುರುಗಳನ್ನು ಕೇಳು. ಏನನ್ನು ಕಲಿತರೆ ಎಲ್ಲವನ್ನೂ ಕಲಿತಂತೆಯೋ ಅದನ್ನು ಕಲಿಸಿಕೊಡಲು ಹೇಳು. ಅಲ್ಲಿಯವರೆಗೂ ನಿನಗೆ ಈ ಮನೆಯಲ್ಲಿ ಜಾಗವಿಲ್ಲ" ಎಂದು ಮರಳಿಕಳಿಸುತ್ತಾನೆ. ಏನನ್ನು ಕಲಿತರೆ ಎಲ್ಲವನ್ನೂ ಕಲಿತಂತೆಯೋ ಅದು ಮಾನವೀಯತೆ. ಆ ಮಾನವೀಯತೆಯ ಸ್ಪರ್ಶವಿಲ್ಲದ ವಿದ್ಯೆ ಅಪಾಯಕಾರಿ. ಅದು ಮಲ್ಲೇಶ ಮತ್ತು ಅವನ ಗೆಳೆಯರು ಸೇರಿಕೊಂಡು ತಂದೆಯ ಸ್ವಯಾರ್ಜಿತ ದುಡಿಮೆಯ ತೋಟದ ಹಕ್ಕುಪತ್ರವನ್ನು ಕಬಳಿಸುವ ಕ್ರೂರ ಉಪಾಯಗಳನ್ನು ಮಾಡಬಲ್ಲದು. ಮೋಸ ವಂಚನೆಯಿಂದ ಆಸ್ತಿಯನ್ನು ಲಪಟಾಯಿಸಿ; ಹಣ ಕಬಳಿಸುವುದಕ್ಕೆ ಬದುಕಿನ ಗೆಲುವು ಎಂದು ಹೇಳಬಲ್ಲದು.

ಆದಿತ್ಯರಂತಹ, ರತ್ನಳಂತಹ ಯೋಗ್ಯ ದಂಪತಿಗಳ ಮಗನಾಗಿ ಮಲ್ಲೇಶ ಇಂತಹ ಕ್ರೂರಿ ಹೇಗಾಗುತ್ತಾನೆ? ಒಂದು ಕಾರಣ, ಆದಿತ್ಯ ಅಂದುಕೊಳ್ಳುವ ಹಾಗೆ –ಮಗನ ಬಗ್ಗೆ ನಾವು ತೋರುವ ಅತಿಯಾದ ಪ್ರೀತಿ, ಕಾಳಜಿ, 'ಅತಿ ಸರ್ವತ್ರ ವರ್ಜ್ಯಯೇತ್' ಎಂಬ ಮಾತಿದೆ. ಅತಿಯೆನ್ನುವುದು ಎಲ್ಲೇ ಯಾವುದರಲ್ಲೇ ಇದ್ದರೂ ಅದು ತಿರಸ್ಕಾರಪೂರ್ಣವೇ.

ಹೆತ್ತವರ ಮಮತೆಯನ್ನು ಮಕ್ಕಳು ಹಕ್ಕು ಎಂದುಕೊಳ್ಳುತ್ತಾರೆ, ಕರ್ತವ್ಯವನ್ನು ಮರೆಯುತ್ತಾರೆ. ಭತ್ತದ ಪೈರು ಕಸುವುಕ್ಕಿ ಬೆಳೆಯಲು ಗದ್ದೆಗೆ ನೀರು ಹಾಯಿಸಬೇಕು. ನೀರು ಕಟ್ಟಬೇಕು. ಆದರೆ, ನೀರು ಅತಿಯಾದರೆ ಗದ್ದೆ ಹಸಿರಾಗಿಯೇ ಕಾಣುತ್ತಿರುತ್ತದೆ. ಪೈರು ಕೊಳೆಯುತ್ತದೆ. ಇಂದು ಬಂಡವಾಳವಾದದ ಕಾಲದಲ್ಲಿ ಮಕ್ಕಳಿಗೆ ದೊರೆಯುತ್ತಿರುವ ಸುಖ-ಸೌಲಭ್ಯಗಳು ಮೇರೆ ಮೀರಿವೆ. ಅವರಿಗೆ ಯಾವ ಕೊರತೆಯೂ ಇಲ್ಲ. ಅದೇ ಬಲುದೊಡ್ಡ ಅನಿಷ್ಟದಂತಾಗಿದೆ. ಇನ್ನೊಂದು ಕಾರಣ ಇಂದಿನ ಶಿಕ್ಷಣ ಕ್ರಮದಲ್ಲಿ ಮಕ್ಕಳು ಮನೆಯಲ್ಲಿರುವ ಅವಧಿ ಕಡಿಮೆ. ಹೊರಗೆ ಕಳೆಯುವ ಅವಧಿ ಹೆಚ್ಚಾಗಿದೆ. ಹಾಗಾಗಿ ಹೊರಗಿನ ವಾತಾವರಣವು ಅವರ ಮನಸ್ಥಿತಿಯ ಮೇಲೆ ಗಾಢವಾದ ಪರಿಣಾಮಗಳನ್ನು ಉಂಟುಮಾಡುತ್ತವೆ. ಮೂರನೆಯದು ಮತ್ತು ಪ್ರಮುಖವಾದದ್ದು -ಬಂಡವಾಳವಾದದ ಮಟೀರಿಯಲಿಸ್ಟಿಕ್ ಯೋಚನಾ ಕ್ರಮ. ಎಲ್ಲವನ್ನೂ ಹಣದ ಲೆಕ್ಕಾಚಾರದಲ್ಲಿ ತೂಗಿನೋಡುವ ಚಿಂತನೆ. ಪ್ರತಿಯೊಂದಕ್ಕೂ ಲಾಭ-ಹಾನಿಗಳ ಪರಿಗಣನೆ. ಮನುಷ್ಯ ಸಂಬಂಧದ ಮಹತ್ವದ ಸ್ಪರ್ಶವಿಲ್ಲದ ಬಂಡವಾಳವಾದದ ರೋಗ ಅದು. ಆ ರೋಗ  ಮಲ್ಲೇಶ, ಅವನ ಹೆಂಡತಿ, ಮೊಮ್ಮಗ ಹೀಗೆ ಒಬ್ಬರಿಂದ ಒಬ್ಬರಿಗೆ ಅಂಟುರೋಗವಾಗಿ ಪ್ರಸಾರಗೊಂಡಿದೆ.

ಈ ಕಥೆಯು ಇನ್ನೊಂದು ವಾಸ್ತವವನ್ನೂ ಚಿತ್ರಿಸುತ್ತಿದೆ. ವೃದ್ಧರು ಅನಾಥರಾಗಿ ಪುನರ್ವಸತಿ ಕೇಂದ್ರಕ್ಕೆ ಬಂದಾಗ; ಅವರನ್ನು ಮಮತೆಯಿಂದ ಗೌರವದಿಂದ ಆರೈಕೆ ಮಾಡುವ, ನೋಡಿಕೊಳ್ಳುವ ಅಪರಿಚಿತರಿದ್ದಾರೆ. ಅವರಿಗದು ಕೆಲಸ ಇದ್ದಿರಬಹುದು. ಆದರೆ ಬರಿಯ ಕೆಲಸವಲ್ಲ. ಅಲ್ಲೊಂದು ಮಾನವೀಯ ಸ್ಪಂದನೆಯಿದೆ. ಕುಟುಂಬಗಳಿಂದ ಪರಿತ್ಯಕ್ತರಾದ ಅಸಹಾಯಕರನ್ನು, ಬಾಚಿ ತಬ್ಬಿ ಆರೈಕೆ ಮಾಡಬಲ್ಲ ಮದರ್ ತೆರೆಸಾರಂತಹ ಮನಸ್ಸಿದೆ. ಹಾಗಾಗಿಯೇ ಈ ಬದುಕು ಇನ್ನೂ ಬದುಕಲು ಯೋಗ್ಯ ಎಂಬ ಭರವಸೆ ಮೂಡುತ್ತದೆ. ಮಾನವೀಯ ಸಂಬಂಧ ರಕ್ತ ಸಂಬಂಧಕ್ಕಿಂತಲೂ ದೊಡ್ಡದು ಎಂಬ ಅರಿವಾಗುತ್ತದೆ. ಬಂಡವಾಳವಾದದ ರೋಗ ತಗುಲಿದ ವಿಕೃತ ಮನುಷ್ಯರನ್ನು, ಮತ್ತೆ ಕ್ಷಮಿಸಿ, ಮತ್ತೆ ಸಂಬಂಧ ಸರಿಪಡಿಸಿಕೊಳ್ಳಲು ಹೋಗುವ ಆದಿತ್ಯರಂತಹ ಹಿರಿಯರ ಮನಸ್ಸು ಮತ್ತೂ ಮಿಡಿಯುವುದು, ಮನುಷ್ಯ ಬದುಕಿನ ಆದಿಮ ತುಡಿತವಾದ ಪ್ರೀತಿಗಾಗಿ ನಾನು-ನನ್ನದು ಎಂಬ ಕಳ್ಳುಬಳ್ಳಿಯ ಮೋಹಕ್ಕಾಗಿ. ಮಿಡಿ ಕಹಿಯಿದ್ದರೂ ಹಣ್ಣಾದ ಮೇಲಾದರೂ ಸಿಹಿಯಾದೀತಲ್ಲವೇ? ಎಂಬ ಆದಮ್ಯ ನಿರೀಕ್ಷೆಗಾಗಿ. ನನ್ನ ಹೊಟ್ಟೆಯ ಮಕ್ಕಳು ಇಷ್ಟು ಕೆಟ್ಟವರಾಗಿ ಇರಲಿಕ್ಕಿಲ್ಲ -ಎಂಬ ಆರ್ತ ಮೊರೆಯಲ್ಲಿ ತಪ್ಪುಗಳು ಪುನರಾವರ್ತನೆಯಾಗಲಿಕ್ಕಿಲ್ಲ ಎಂಬ ನಂಬಿಕೆಯಲ್ಲಿ.

ಈ ಕಥೆಯ ಗೆಲುವಿರುವುದು ಅದರ ಕೊನೆಯ ತಿರುವಿನಲ್ಲಿ. ಆದಿತ್ಯ ಮರಳಿ ಮರಳಿ ಸೋಲುತ್ತಾರೆ. ಮುದ್ದಿನ ಮಡದಿಯನ್ನು ಉಳಿಸಿಕೊಳ್ಳಲಿಕ್ಕಾಗುವುದಿಲ್ಲ. ಪ್ರೀತಿಯ ಮಗ ಮಗನಾಗಿ ಉಳಿಯುವುದಿಲ್ಲ. ಜೀವತೇದು ಮಾಡಿದ ತೋಟವನ್ನು ಉಳಿಸಿಕೊಳ್ಳಲಿಕ್ಕಾಗುವುದಿಲ್ಲ. ಆದರೆ, ಏನೂ ಇಲ್ಲ ಎನ್ನುವುದರಲ್ಲಿಯೇ ಹೊಸ ಪ್ರಾರಂಭವಾಗುತ್ತದೆ. ಆದಿತ್ಯ ಚೇತರಿಸಿಕೊಳ್ಳುವುದು ಆ ಅನಾಥಾಶ್ರಮದಲ್ಲಿಯ ಹೆಂಗಸೊಬ್ಬಳ ಅಸಹಾಯಕತೆಗೆ ಮಿಡಿಯುವಲ್ಲಿ. 'ಅನಾಥೋ ದೈವ ರಕ್ಷಕ' ಎಂಬ ಮಾತಿದೆ. 'ಅನಾಥೋ ಅನಾಥ ರಕ್ಷಕ' ಎಂಬುದು ವಾಸ್ತವದಲ್ಲಿ ನಡೆಯುತ್ತದೆ. ಎರಡು ದುರ್ಬಲ ಎಳೆಗಳು ಬೆಸೆದು, ಒಂದು ಸಬಲ ಸೂತ್ರವಾಗಬಲ್ಲುದೇ ಬದುಕಿನ ಶಕ್ತಿ –ಎನ್ನುವುದು ಇಲ್ಲಿದೆ. ಕ್ರೌರ್ಯ ವಿಜೃಂಭಿಸುವಾಗ, ಅದೆಷ್ಟೇ ಕಠಿಣವಾದರೂ ಸಜ್ಜನಿಕೆ ಮರುಜೀವ ಪಡೆಯಬೇಕಿದೆ ಮಾನವೀಯತೆ ಗೆಲ್ಲಬೇಕಿದೆ ಎನ್ನುವುದು ಈ ಕಥೆಯ ಆಶಯವಾಗಿದೆ. ಜಾಗತೀಕರಣದ ಇಂದಿನ ಸಮಾಜದಲ್ಲಿ, ದಿನಬೆಳಗಾದರೆ ಆಸ್ತಿಗಾಗಿ, ಸಂಪತ್ತಿಗಾಗಿ ಹಿರಿಯರನ್ನು ಹತ್ಯೆ ಮಾಡುವ, ಮನೆಯಿಂದ ಹೊರಗಟ್ಟುವ ಅಪರಾಧದ ಪ್ರಕರಣಗಳು ವರದಿಯಾಗುತ್ತಲೇ ಇವೆ. ಸಂಪತ್ತಿನ ಆಶೆಗಾಗಿ ಸಮಾಜ ಪಿತೃಹತ್ಯೆಯ ನೀಚತನಕ್ಕೆ ಇಳಿದಿದೆ. ಕನ್ನಡ ಕಥಾ ಸಾಹಿತ್ಯದಲ್ಲಿ ಈ ಮಾದರಿಯ ಕಥೆಗಳು ಇಂದಿನ ಸಮಾಜದ ಪ್ರತಿಫಲಿತ ರೂಪಗಳಾಗಿ ಮೂಡಿಬರುತ್ತಿವೆ ಎಂಬುದನ್ನು ಗಮನಿಸಬೇಕು.

ಜಯಂತ ಕಾಯ್ಕಿಣಿ ಅವರ 'ತೆರೆದಷ್ಟೇ ಬಾಗಿಲು' ಕಥಾ ಸಂಕಲನದ 'ಇದ್ದಾಗ ಇದ್ದಾಂಗ' ಎಂಬ ಕಥೆಯು ಮುಳುಗಡೆಗೆ ಸಿಕ್ಕು ಕಣ್ಮರೆಯಾದ ಗ್ರಾಮವೊಂದರ ಆಗುಹೋಗುಗಳನ್ನು ಕುರಿತು ಚರ್ಚಿಸುತ್ತದೆ. ಜೊತೆಗೆ ಗ್ರಾಮವೊಂದು ನಿರ್ನಾಮವಾಗುವ ಹಂತದಲ್ಲಿ ಜನರ ನಡುವಳಿಕೆಗಳು ಹೇಗೆ ಬದಲಾಗುತ್ತವೆ? ಅಷ್ಟೇ ಅಲ್ಲದೆ ಆ ಸಂದರ್ಭದಲ್ಲಿ ಮನುಷ್ಯನ ಮಾನಸಿಕ ಸಂವೇದನೆ ಹೇಗೆ ಕಾರ್ಯನಿರ್ವಹಿಸುತ್ತದೆ ಎಂಬುದನ್ನು ಕಥೆಯು ನಿರೂಪಿಸುತ್ತದೆ. ಇಲ್ಲಿ ಜನರ ಮನಸ್ಸಿನ ಮೇಲೆ ಪ್ರಭಾವ ಬೀರುವ ಅಂಶಗಳು ಯಾವವು? ಅವುಗಳ ನಿಯಂತ್ರಣ ಎಲ್ಲಿ ಅಡಗಿದೆ ಎಂಬುದು ಪ್ರಮುಖವೆನಿಸುತ್ತದೆ. ಈ ಹಿನ್ನಲೆಯಲ್ಲಿ ಕಥೆಯನ್ನು ಗಮನಿಸುವುದಾದರೆ ಜಾಗತೀಕರಣದ ದಟ್ಟಪ್ರಭಾವ ಅಡಗಿರುವ ಸಂಗತಿಯು ಬಯಲಾಗುತ್ತದೆ.

ಓದನ್ನು ಸಣ್ಣವಯಸ್ಸಿನಲ್ಲಿಯೆ ಅಪೂರ್ಣಗೊಳಿಸಿದ ಹಳ್ಳಿಯ ಹೈದ 'ಪಬ್ಬು' (ಪ್ರಭಾಕರ ದಂಡೂ ಹರಿಕಾಂತ) ಆಗತಾನೆ ನಿರ್ಮಾಣವಾಗುತ್ತಿದ್ದ ಬ್ರಿಜ್ ಕಾಮಗಾರಿಯಲ್ಲಿ

ಕೆಲಸಕ್ಕೆ ಸೇರಿಕೊಳ್ಳುತ್ತಾನೆ. ಅಲ್ಲಿದ್ದ ಬ್ರಿಜ್‌ನ ಮೇಸ್ತ್ರಿಯು ಇವನನ್ನೂ, ಇವನ ಜೊತೆ ಮತ್ತೊಂದಿಷ್ಟು ಹುಡುಗರನ್ನು ಪುಸಲಾಯಿಸಿ ಮುಂಬೈಗೆ ಕರೆದೊಯ್ಯುತ್ತಾನೆ. ಅಲ್ಲಿಗೆ ಹೋದ ಮೇಲೆ ಆ ಹುಡುಗರನ್ನು ಸಮಾಜದ ದುಷ್ಕೃತ್ಯಗಳಲ್ಲಿ ತೊಡಗಿಕೊಳ್ಳುವಂತೆ ಮಾಡುತ್ತಾನೆ. ಉತ್ತಮ ಶಿಕ್ಷಣವನ್ನು ಪಡೆದು ಒಳ್ಳೆಯ ಮಾರ್ಗದಲ್ಲಿ ಜೀವನವನ್ನು ರೂಪಿಸಿಕೊಳ್ಳಬೇಕಾಗಿದ್ದ ಹುಡುಗರನ್ನು ಅನೈತಿಕ ಚಟುವಟಿಕೆಗಳಿಗೆ ಬಳಸಿಕೊಳ್ಳುವುದನ್ನು ಗಮನಿಸಿದರೆ ಮುಂದಾಗುವ ಅನಾಹುತಗಳನ್ನು ಊಹಿಸಲು ಸಾಧ್ಯವಿಲ್ಲ. ಹೀಗೆ ಬಳಸಿಕೊಳ್ಳುವದರಿಂದ ಮುಂಬರುವ ದಿನಮಾನಗಳಲ್ಲಿ ಸಮಾಜದ ಏಳಿಗೆಯನ್ನಾಗಲಿ ಅಥವಾ ಶಾಂತಿಯನ್ನಾಗಲಿ ಕಾಣಲು ಹೇಗೆ ಸಾಧ್ಯ? ಸಾಧ್ಯವಿಲ್ಲವೆನ್ನುವುದಾದರೆ, ಇಂತಹ ಹೀನ ಕೃತ್ಯಗಳನ್ನು ನಡೆಸುವುದರ ಮೂಲ ಉದ್ದೇಶವಾದರು ಏನು? ಎಂಬುದು ಇಲ್ಲಿ ಪ್ರಮುಖವೆನಿಸುತ್ತದೆ. ತ್ವರಿತಗತಿಯಲ್ಲಿ ಹಣ ಸಂಪಾದನೆಗೆ ಮುಂದಾದ ಬಂಡವಾಳವಾದಿ ವ್ಯವಸ್ಥೆಯ ಸಂದರ್ಭದಲ್ಲಿ ಸಹಜವಾಗಿ ಇಂತಹ ಚಟುವಟಿಕೆಗಳು ರೂಢಿಯಲ್ಲಿ ಬರುತ್ತವೆ. ಅಂದರೆ ದಿಢೀರನೆ ಆರ್ಥಿಕ ಬಲವರ್ಧನೆಯನ್ನು ಹೆಚ್ಚಿಸಿಕೊಳ್ಳುವ ಪ್ರಯತ್ನಗಳು ಎಂದರ್ಥ. ಇಂತಹ ಪ್ರಯತ್ನಗಳು ಸಫಲತೆಯನ್ನು ಪಡೆಯಬೇಕಾದರೆ ಮುಗ್ಧತೆಯನ್ನು ಹೊಂದಿದ ಜನಸಮುದಾಯದ ಅವಶ್ಯಕತೆಯಿದೆ. ಅದಕ್ಕಾಗಿ ಗ್ರಾಮಗಳನ್ನು ಗುರಿಯಾಗಿಸಿಕೊಂಡು ಅಲ್ಲಿನ ಜನರನ್ನು ಬಳಸಿಕೊಳ್ಳಲಾಗುತ್ತಿದೆ. ಇದು ಗ್ರಾಮಸಮುದಾಯದ ಮುಂದಿನ ಭವಿಷ್ಯಕ್ಕೆ ಮಾರಕವಾಗಿದೆ. ಇದರಿಂದ ಹಳ್ಳಿಗಳಲ್ಲಿದ್ದ ಮಾನವೀಯ ಮೌಲ್ಯಗಳು ಕಣ್ಮರೆಯಾಗುತ್ತಿವೆ. ಇದರಿಂದ ದಿನದಿಂದ ದಿನಕ್ಕೆ ಹಳ್ಳಿಗಳಲ್ಲಿ ದುಷ್ಕೃತ್ಯಗಳು ಹೆಚ್ಚುತ್ತಿದ್ದು, ದುರಂತದಲ್ಲಿ ಅಂತ್ಯವನ್ನು ಕಾಣುತ್ತಿವೆ. ಇಂತಹ ಘಟನೆಗಳು ಕತೆಯ ಉದ್ದಕ್ಕೂ ಹಾಸುಹೊಕ್ಕಿದ್ದು, 'ಪಬ್ಬು'ವಿನಲ್ಲಾದ ಬದಲಾವಣೆಗಳು ಹಳ್ಳಿಮಕ್ಕಳಲ್ಲಿ ವಿಷಬೀಜವನ್ನು ಬಿತ್ತಿ ಸಮಾಜದ್ರೋಹಿಗಳಾಗಿ ರೂಪಗೊಳ್ಳುವಂತೆ ಮಾಡಲಾಗುತ್ತಿದೆ ಎಂಬುದನ್ನು ಈ ಕತೆಯು ಬಿಂಬಿಸುತ್ತದೆ. ಇಂಥದ್ದೊಂದು ಸ್ಥಿತಿ ಗ್ರಾಮಗಳಿಗೆ ಬಂದೊದಗಲು ಅಲ್ಲಿನ ಬಡತನ, ನಿರುದ್ಯೋಗದಂತಹ ಸಮಸ್ಯೆಗಳು ಮೂಲ ಕಾರಣವಾಗಿವೆ. ಇದನ್ನು ಗಮನಿಸಿದಾಗ ಜಾಗತೀಕರಣವು ಗ್ರಾಮಗಳ ಅಭಿವೃದ್ಧಿಗಿಂತ ವಿನಾಶವನ್ನು ಹೆಚ್ಚು ಬಯಸುತ್ತದೆಯೆಂಬ ಭಾವನೆ ಹುಟ್ಟಿಕೊಳ್ಳುತ್ತದೆ.

ನಗರಗಳ ಐಶಾರಾಮಿ ಬದುಕು ಗ್ರಾಮೀಣ ಜನರನ್ನು ತನ್ನೆಡೆಗೆ ಸೆಳೆಯುತ್ತಿದೆ. ಇದರಿಂದ ಪ್ರಭಾವಿತರಾದ ಜನಗಳು ನಗರ ಬದುಕಿನ ಕಡೆಗೆ ಧಾವಿಸುತ್ತಿದ್ದಾರೆ. ಗ್ರಾಮಗಳಲ್ಲಿನ ನಿರುದ್ಯೋಗವು ಇದಕ್ಕೆ ಪ್ರಚೋದಿಸುತ್ತಿದೆ. "ದಿನಾಲೂ ಬರಹೋಗುವ ಲಾಂಚುಗಳು, ಶಿರಸಿ ಕಾರವಾರ ಕಡೆಯಿಂದ ಬಂದು ಇಲ್ಲಿಯ ಧಕ್ಕೆಯಲ್ಲಿ ಜನರನ್ನು ಇಳಿಸಿ

ಹೋಗುವ ಬಸ್ಸುಗಳು, ಬಸ್ಸುಗಳನ್ನು ಕಾರುಗಳನ್ನು ಹೊತ್ತುಕೊಂಡು ಹೋಗುವ ಜಂಗಲ್ಲುಗಳನ್ನು ಎಳೆಯುವ ಲಾಂಚುಗಳ ಶಬ್ದ, ಖಾಕೀ ಡ್ರೈವರುಗಳು, ಕಂಡಕ್ಟರುಗಳು.... ಬೀಡಿ ಸಿಗರೇಟು ಸೇದುವ ಸ್ಟೈಲು.... ಚಾ ಅಂಗಡಿಯಲ್ಲಿ ಪ್ರಯಾಣಿಕರು ಕೂತು ಚಾ ಕುಡಿಯುವ ಗತ್ತು, ಜಂಗಲ್ಲಿನಲ್ಲಿ ವಾಹನಗಳು ಹತ್ತಿಯಾದ ಕೂಡಲೇ ಅವನ ಅಪ್ಪ ಹಗ್ಗವನ್ನು ಲಾಂಚಿಗೆ ಎಸೆಯುವ ಚಾಕಚಕ್ಯತೆ....."[೧೦] ಮೊದಲಾದವು ಪಬ್ಬುವಿನ ಆಸಕ್ತಿಯ ನೆಲೆಗಳಾಗಿದ್ದವು. ಇದರಿಂದ ಪ್ರಭಾವಿತನಾಗಿ ನಗರ ಬದುಕನ್ನು ಅನುಭವಿಸಿದ ಆತನ ಪೂರ್ವಾಗ್ರಹ ಭಾವನೆಗಳು ವಿಕಾರರೂಪವನ್ನು ತಾಳುತ್ತವೆ. ಮುಂಬೈನ ಶೋಕಿ ಜೀವನದ ಆಕರ್ಷಣೆ. ಅದಕ್ಕಾಗಿ ಅಡ್ಡದಾರಿಗೆ ಇಳಿದು ಹಣ ಗಳಿಸುವ ವ್ಯಾಮೋಹ ಆತನದು. ಹೀಗಾಗಿ, ತನ್ನ ತಂಗಿಯನ್ನೊಳಗೊಂಡು ಊರಿನ ಇತರ ಹರೆಯದ ಹುಡುಗಿಯರನ್ನು ಓಡಿಸಿಕೊಂಡೂ ಊರುಬಿಟ್ಟು ಹೋಗುತ್ತಾನೆ. "ಅವರನ್ನು ಅಲ್ಲಿ ಮಾರುತ್ತೇನೆ. ಇಲ್ಲಿಗಿಂತ ಚಲೋದಾಗಿ ಅವರಲ್ಲಿ ಇರ್ತಾರೆ. ನಾನು ಬದುಕುತ್ತೇನೆ"[೧೧] ಎಂದು ಹೇಳುವ ಮಾತು ಗ್ರಾಮಗಳಲ್ಲಿನ ಯುವಶಕ್ತಿಯನ್ನು ಇಂದು ನಗರಗಳು ನಗರಗಳಲ್ಲಿ ಹೇಗಾದರೂ ಸಂಪಾದಿಸುವ ಹಣ ಆಕರ್ಷಿಸುತ್ತಿವೆ. ಅದರ ಪ್ರಭಾವಕ್ಕೊಳಗಾದ ಯುವಜನತೆ ಮಾನಸಿಕ ಖಿನ್ನತೆಗೊಳಗಾಗಿ ಹೀನಕೃತ್ಯಗಳಲ್ಲಿ ತೊಡಗಿಕೊಳ್ಳುತ್ತಿದ್ದಾರೆಂಬುದನ್ನು ಸ್ಪಷ್ಟಪಡಿಸುತ್ತದೆ. ಹೀಗೆ ಬಹುವಿಧವಾಗಿ ಆಕರ್ಷಿಸುವ ನಗರಗಳು ಜನರನ್ನು ಕೈಬೀಸಿ ಕರೆಯುತ್ತಿವೆ. ಉದ್ಯೋಗಾವಕಾಶಗಳನ್ನು ಅರಸಿಕೊಂಡು ಬರುವ ಹಳ್ಳಿಗರು ನಗರ ಬದುಕಿನಲ್ಲಿ ನೆಲೆಕಾಣಲು ಹರಸಾಹಸ ಪಡಬೇಕಾಗುತ್ತದೆ. ಇಂತವರಲ್ಲಿ ಯಶಸ್ಸು ಕಾಣುವವರು ಬಹಳ ವಿರಳ. ಆದರೆ ನಗರಜೀವನದಲ್ಲಿ ನೆಲೆನಿಲ್ಲಲಾಗದೆ, ಮರಳಿ ಗ್ರಾಮಗಳಲ್ಲಿ ಬದುಕಲು ಮನಸ್ಸಾಗದೆ ಅತಂತ್ರಸ್ಥಿತಿ ಅನುಭವಿಸುವವರೆ ಹೆಚ್ಚಿನ ಸಂಖ್ಯೆಯಲ್ಲಿ ಕಾಣಸಿಗುತ್ತಾರೆ. ಅದಕ್ಕೆ ಈ ಕತೆಯಲ್ಲಿ ಬರುವ 'ಪಬ್ಬು'ವಿನ ಬದುಕು ಸಾಕ್ಷಿಯಾಗಿದೆ. ಇಂತಹ ವಿಚಾರ ಆತನೊಬ್ಬನಿಗೆ ಮಾತ್ರ ಸೀಮಿತವಾದುದಲ್ಲ. ಹಳ್ಳಿಯಿಂದ ಉದ್ಯೋಗವನ್ನರಸಿಕೊಂಡು ಬಂದು ಸ್ವಾರ್ಥಹಿತಾಸಕ್ತಿಗಳಿಂದ ವಂಚನೆಗೊಳಗಾದ ಪ್ರತಿಯೊಬ್ಬನ ಬದುಕಿಗೂ ಸಂಬಂಧಿಸಿದ್ದು.

ಪಬ್ಬುವಿನ ಸ್ನೇಹಿತನಾದ ಆನಂದನ ಮೌಂಶಿಯು "ನೀನು ಬುದ್ಧಿವಂತ ಹುಡುಗ ಅಲ್ಲಾ? ಅಂಥವರ ಜತೆ ಸೇರಬಾರದು"[೧೨] ಎಂದು ಪಬ್ಬುವಿನಿಂದ ದೂರವಿರುವಂತೆ ಆನಂದನಿಗೆ ಸೂಚಿಸುತ್ತಾಳೆ. ಏಕೆಂದರೆ ಪಬ್ಬು ಬ್ರಿಜ್‌ನ ಸಿಮೆಂಟ್ ಕೆಲಸಕ್ಕೆ ಹೋಗುತ್ತಾನೆಂಬುದೆ ಮುಖ್ಯ ಕಾರಣವಾಗಿರುತ್ತದೆ. ತಮ್ಮ ಊರಿನಲ್ಲಿ ಹಿಂದೆಂದು ಕಾಣದ ಬ್ರಿಜ್‌ನಂತಹ ಕಾಮಗಾರಿಯು ತನ್ನ ಕಡೆಗೆ ಬಂದುಹೋಗುವವರ ಮನಸ್ಸನ್ನು

ಪರಿವರ್ತಿಸುತ್ತದೆಂಬ ಭಾವನೆ ಅವಳಲ್ಲಿದ್ದಂತಿದೆ. ಅದಕ್ಕಾಗಿಯೆ ಆಕೆ ಆನಂದನಿಗೆ "ಬ್ರಿಜ್ಜು ಕಟ್ಟುವಲ್ಲಿ ಹೋಗಬಾರದು. ಬ್ರಿಜ್ಜು ಬಲಿಷ್ಠವಾಗಲಿ ಅಂತ ಮನುಷ್ಯರನ್ನು ಬಲಿಕೊಡುತ್ತಾರೆ"[೧೩] ಎಂದು ಹೇಳುವ ಮೂಲಕ ಅದರ ಹಿಂದಿರುವ ಕರಾಳತೆಯನ್ನು ಎಚ್ಚರಿಸುತ್ತಾಳೆ. ಬ್ರಿಜ್ ನಿರ್ಮಾಣದಂತ ಕಾಮಗಾರಿಗಳಲ್ಲಿ ಸುಲಭವಾಗಿ ನಡೆದುಹೋಗುವ ಕಗ್ಗೊಲೆಗಳು ಯಾರಿಗೂ ಗೋಚರಿಸುವುದಿಲ್ಲ. ಇಂತಹ ಬೃಹತ್ ಕಾಮಗಾರಿಗಳಲ್ಲಿ ಕಾರ್ಯ ನಿರ್ವಹಿಸುವ ಕೆಳಹಂತದ ಕೂಲಿಕಾರ್ಮಿಕರಿಗೆ ಯಾವುದೇ ರೀತಿಯ ಸಂರಕ್ಷಣೆಯು ಇರುವುದಿಲ್ಲವೆಂಬುದು ಎಲ್ಲರಿಗೂ ತಿಳಿದ ವಿಚಾರ. ಅವರನ್ನು ಅತ್ಯಂತ ಭಯಂಕರವಾದ ಅಂದರೆ ಅವರ ಬದುಕಿಗೆ ಕುತ್ತು ತರುವ ಕೆಲಸಗಳಲ್ಲಿಯೂ ಬಳಸಿಕೊಳ್ಳುವ ಸನ್ನಿವೇಷಗಳಿದ್ದಾಗಲೂ ಅವರ ಜೀವಪರ ಕಾಳಜಿ ಇಲ್ಲಿ ಕಾಣಸಿಗಲಾರದು. ಕಾಮಗಾರಿ ಪೂರ್ಣಗೊಳ್ಳುವುದಷ್ಟೆ ಅವರ ಮೂಲ ಉದ್ದೇಶವಾಗಿರುವುದರಿಂದ ಇಲ್ಲಿ ಬೇರಾವ ವಿಷಯಗಳು ಮುಖ್ಯವೆನಿಸುವುದಿಲ್ಲವೆನಿಸುತ್ತದೆ. ದೂರದ ಊರುಗಳಿಂದ ಕೆಲಸವನ್ನು ಅರಸಿಕೊಂಡು ಬಂದ ಜನರೇ ಇಲ್ಲಿ ಹೆಚ್ಚು ಕಾರ್ಯನಿರ್ವಹಿಸುವುದರಿಂದ ಎಂತಹ ದುರಂತಗಳು ಸಂಭವಿಸಿದರೂ ಅದು ಆ ಪ್ರದೇಶದಲ್ಲಿನ ಜನರಿಗೆ ಮರೀಚಿಕೆಯಾಗಿಯೆ ಉಳಿಯುತ್ತದೆ. ಇದನ್ನು ಇನ್ನೂ ಸ್ಪಷ್ಟಪಡಿಸುವುದಾದರೆ, ಇಂತಹ ಕಾಮಗಾರಿಗಳಲ್ಲಿ ಕೆಲಸ ನಿರ್ವಹಿಸಿ ಅಂಗವಿಕಲತೆಯನ್ನು ಅನುಭವಿಸುತ್ತಿರುವವರು, ಅಲ್ಲಿನ ಸ್ಥಿತಿಗತಿಗಳನ್ನು ಅರಿತು ಹಿಂದೆ ಸರಿದವರನ್ನು ಗಣನೆಗೆ ತೆದುಕೊಂಡಾಗ ಬೃಹತ್ ಕಾಮಗಾರಿಗಳಲ್ಲಿ ಸಂಭವಿಸಬಹುದಾದ ದುರಂತಗಳನ್ನು ತಿಳಿಯಬಹುದಾಗಿದೆ. ಇನ್ನೂ ಮುಂದುವರೆದು ಹೇಳುವುದಾದರೆ ಇಂತಹ ದುರಂತದ ಅನುಭವವುಳ್ಳ ಎಷ್ಟೋ ಜನರು ಇಂದು ಹಳ್ಳಿಗಳಲ್ಲಿ ವಾಸಿಸುತ್ತಿದ್ದಾರೆ. ಅಷ್ಟೇ ಅಲ್ಲದೆ ಇದ್ದೂರಿನಲ್ಲಿಯೆ ಕೆಲಸವೆಂದು ಹೋಗುವ ಜನರಿಗೂ ಅಲ್ಲಿನ ಜನರ ಗೋಳು ಹೆಚ್ಚು ಕಮ್ಮಿ ಇದೇ ಆಗಿರುತ್ತದೆ. ಇದರಿಂದಾಗಿ ಊರಿನಲ್ಲಿ ಸದ್ದೇ ಇಲ್ಲದೆ ಎಷ್ಟೋ ಜನ ನಾಪತ್ತೆ ಆಗುವ ಸಾಧ್ಯತೆಗಳಿರುತ್ತವೆ. "ಕೆಳಗಿನ ಮನೆ ಬೀರಣ್ಣನ ಮಗನೂ ಇಲ್ಲಂತೆ, ಕುರ್ಲೆ ಅರ್ಜುನನ ತಮ್ಮನೂ ಇಲ್ಲಂತೆ. ಮತ್ತು ಐದಾರು ಮಂದಿ ಇಲ್ಲಂತೆ"[೧೪] ಎಂದು ಕತೆಯಲ್ಲಿ ಮೂಡಿಬಂದ ಮಾತುಗಳು ಅಂತಹ ಘಟನೆಗಳನ್ನು ನೆನಪಿಗೆ ತರುತ್ತವೆ.

ಒಂದಿಷ್ಟು ವರ್ಷಗಳ ನಂತರ ಆನಂದ ಮತ್ತು ಪಬ್ಬು ಊರಿಗೆ ಬಂದಾಗ ಅವರಿಬ್ಬರ ಮಾತುಕತೆಗಳಲ್ಲಿ ಬ್ರಿಜ್‌ನ ಅಪಾಯಕಾರಿ ಅಂಶಗಳ ಬಗ್ಗೆ ಹಲವು ಬಾರಿ ಚರ್ಚೆಗಳು ನಡೆಯುತ್ತವೆ. ಬಾಂಬೆಯಂಥ ನಗರ ಜೀವನದ ಅನುಭವವನ್ನು ಪಡೆದುಕೊಂಡು ಬಂದಿದ್ದ

ಪಬ್ಬುಗೆ ಅನೇಕ ಅನೈತಿಕ ವ್ಯವಹಾರಗಳು ಗೊತ್ತಿದ್ದವು. ಹಾಗೆಯೇ ಜಾಗತೀಕರಣದ ಸಮಾಜ ಹುಟ್ಟುಹಾಕಿದ ದಿಢೀರ್ ಶ್ರೀಮಂತನಾಗಬೇಕು, ಏನು ಕಳೆದುಕೊಂಡಾದರೂ ಎಂಬ ಜಾಗೃತ ಮನಸ್ಸೂ ಒಳಗಡೆ ಅವಿತುಕೊಂಡಿತ್ತು. ಅವನು ಬಾಂಬೆಯಿಂದ ಮರಳಿ ದೀವಗಿಗೆ ಬರಲು ಆತನಲ್ಲಿ ಹುಟ್ಟಿಕೊಂಡಿದ್ದ ವ್ಯವಹಾರಿಕ ದೃಷ್ಟಿಕೋನವು ಕಾರಣವಾಗಿತ್ತು. ಅಂತಹ ವ್ಯವಹಾರಿಕ ದೃಷ್ಟಿಯನ್ನು ಮುಂಬೈನಗರವು ಆತ ಹೋದ ಕೆಲವೆ ದಿನಗಳಲ್ಲಿ ಕಲಿಸಿಬಿಟ್ಟಿತ್ತು. ಅದಕ್ಕೆ ಆತನು ಆನಂದನ ಎದುರಿಗೆ “ನಾನೀಗ ಬಿಸಿನೆಸ್ ಮೇಲೆ ಬಂದಿದ್ದೇನೆ ಅಂತಿಟ್ಕೋ”[೧೫] ಹೇಳುವುದಾಗಲಿ, “ನಾವೆಲ್ಲ ಹೋರಾಡಬೇಕು, ಇಲ್ಲವಾದರೆ ಊರು ಹಾಳಾಗುತ್ತದೆ.... ಆನಂದ್...... ನೋಡಿ, ನೀವೀಗ ಒಂದು ಅರ್ಜಿ ಬರೆದುಕೊಡಬೇಕು. ಈಗ ಆಗಲಿರುವ ಬ್ರಿಜ್ಜು ದೀವಗಿಯನ್ನು ಮೂಸಿ ಕೂಡ ನೋಡುವುದಿಲ್ಲ. ಆ ರಾಷ್ಟ್ರೀಯ ಹೆದ್ದಾರಿ ಅನ್ನೋದು ಆ ಕಡೆಯೇ ಹೋಗುತ್ತದೆ. ಇಷ್ಟು ದಿನ ಇಲ್ಲಿ ನಿಲ್ಲುವ ಬಸ್ಸುಗಳು ಅವುಗಳ ಪ್ರಯಾಣಿಕರು ಇವರನ್ನೆಲ್ಲ ನಂಬಿಕೊಂಡು ಬದುಕಿದ ಇಲ್ಲಿ ಜನಗಳಿಗೇನಾಗಬೇಕು? ಜಂಗಲ್‌ಗಳನ್ನು ನೂಕಿದ, ಲಾಂಚುಗಳನ್ನು ನಡೆಸಿದ, ಅಲ್ಲಿ ಸೋಡಾ ಮಾರಿದ, ಜನಗಳ ಗತಿ ಏನು? ಇದೇ ಜನ ಬೇವರ್ಸಿ ಜನ ನಾಳೆಯ ಕಲ್ಪನೆ ಇಲ್ಲದವರು- ಅಲ್ಲಿ ಬ್ರಿಜ್ಜು ಬ್ರಿಜ್ಜು ಎಂದು ಸಾಯಲು ಹೋಗುತ್ತವೆ ಗೇಯುತ್ತವೆ”[೧೬] ಎಂದು ಹೇಳುವ ಮಾತುಗಳು ಮೂಲದಲ್ಲಿದ್ದ ಪಬ್ಬುವಿನ ವಿಚಾರಧಾರೆಗಳಲ್ಲ. ನಗರವೊಂದರ ಪ್ರಭಾವಕ್ಕೊಳಗಾದ ವ್ಯಕ್ತಿಯ ಮನೋಧೋರಣೆ. ಇಂತಹ ವಿಚಾರಗಳನ್ನು ಜನರ ಮನದಲ್ಲಿ ತುಂಬುವ ಮೂಲಕ ಜನರನ್ನು ತನ್ನ ಕಡೆಗೆ ಸೆಳೆಯುತ್ತಾನೆ. ಇದಾದ ಕೆಲವೇ ದಿನಗಳಲ್ಲಿ ಊರಿನ ಕೆಲವು ಹುಡುಗಿಯರನ್ನು ತನ್ನ ಜೊತೆಗೆ ಕರೆದುಕೊಂಡು ಮತ್ತೆ ಪಬ್ಬು ಕಾಣೆಯಾಗುತ್ತಾನೆ. ಮುಂಬೈಯಂತಹ ಪ್ರದೇಶಕ್ಕೆ ಆ ಹುಡುಗಿಯರನ್ನು ಕರೆತಂದು ಅಲ್ಲಿ ಅನೈತಿಕ ಚಟುವಟಿಕೆ ಮಾಡುವವರಿಗೆ ಮಾರುತ್ತಾನೆ. ಇದರ ಮಧ್ಯೆ ಪ್ರಭಾಕರ(ಪಬ್ಬು)ನು ಊರು ಬಿಟ್ಟುಹೋಗುವ ಮೊದಲು ಆನಂದನನ್ನು ಭೇಟಿಮಾಡುತ್ತಾನೆ. ಆತನ ಹತ್ತಿರ ಐದುನೂರು ರೂಪಾಯಿಗಳನ್ನು ಸಾಲವನ್ನು ಪಡೆಯುವುದಲ್ಲದೆ, ತಮ್ಮೂರಿನ ಹೆಣ್ಣುಮಕ್ಕಳನ್ನು ಅಪಹರಿಸಿಕೊಂಡು ಹೋಗುತ್ತಿರುವುದರ ವಿಚಾರವನ್ನು ತಿಳಿಸಿರುತ್ತಾನೆ. ಜೊತೆಗೆ “ಊರಲ್ಲೆಲ್ಲ ಏನು ಸುದ್ದಿ ಗೊತ್ತೊ- ನಾನೇ ಗಂಗೆಯ ಮೈಮೇಲೆ ಕೈ ಹಾಕಿದ್ನಂತೆ. ಅದಕ್ಕವಳು ‘ಅಣ್ಣನೇ ಮೈಮೇಲೆ ಕೈ ಹಾಕ್ದ’- ಅಂದು ವಿಷಾ ತಗಂಡು ಸತ್ತಳಂತೆ. ಎಂಥಾ ಮಜಾ ನೋಡು. ಇದು ಖರೇನೇ ಹೌದು ಅಂತಾದ್ರೂ ವಿಷ ತಗೊಂಡು ಸತ್ತರೆ ಅದು ಮಳ್ಳು ಅಂತ ನಿನಗನ್ನೂದಿಲ್ವೆ?.... ಡ್ರೈವರ್ ಡಿಸೋಜ ಆಗ್ತದೆ, ಪ್ರಭುಗಳು ಆಗ್ತದೆ, ನಾನು ಯಾಕೆ ಅವಳಿಗೆ ಆಗಬಾರದು?”[೧೭] ಎಂದು ಗಂಗೆಯ ಸಾವಿನ

ಪ್ರಕರಣದ ಹಿಂದಿನ ನಿಗೂಢತೆಯನ್ನು ಬಿಚ್ಚಿಡುತ್ತಾನೆ. ಮನುಷ್ಯನಿಗೆ ಒಮ್ಮೆ ಹಣಮಾಡುವ ರೋಗ ಹೊಕ್ಕಿಕೊಂಡಿತು ಎಂದರೆ, ಮನುಷ್ಯ ಸಂಬಂಧದ ಬೇರೆ ಯಾವ ಗೌರವವೂ ಮುಖ್ಯವೆನಿಸುವುದಿಲ್ಲ. ರಕ್ತ ಸಂಬಂಧದ ಕೌಟುಂಬಿಕ ವಿಚಾರವೊಂದನ್ನು ಹದ್ದುಮೀರಿ ಮಾತನಾಡುವ ಇವನ ಧೈರ್ಯ, ತನ್ನ ಸ್ವಂತ ತಂಗಿಯ ಅನೈತಿಕ ಚಟುವಟಿಕೆಗಳು ಕಣ್ಣಾರೆ ಕಂಡಾಗಲೂ ಮೌನವಾಗಿ ಉಳಿಯಲು ಕಾರಣವೇನು? ಅಷ್ಟೇ ಅಲ್ಲದೆ "ಖರೇ ಹೇಳು, ಆ ದಿನ ನೀನು ನಮ್ಮನೇಗೆ ಬಂದಾಗ ನಾನು ಇಲ್ಲ, ಅವ್ವಿನೂ ಇಲ್ಲ. ಬರೀ ನೀನು ಗಂಗೆ ಇದ್ರಿ ಅಂತಿಟ್ಕೋ, ಆಗ ಏನು ಆಗುತ್ತಿತ್ತು?"[೧೮] ಎಂದು ಹೇಳುವ ಮೂಲಕ ತನ್ನ ತಂಗಿ ಮತ್ತು ಆನಂದನ ಮಧ್ಯೆ ಗೌಪ್ಯವಾಗಿ ಹುಟ್ಟಿಕೊಳ್ಳಲೆತ್ನಿಸುತ್ತಿದ್ದ ಅನೈತಿಕ ಸಂಬಂಧದ ಬಗೆಗೆ ಆತನೆದುರಿಗೆ ಪ್ರಸ್ತಾಪಿಸುತ್ತಾನೆ. ಈ ರೀತಿಯಾಗಿ ವರ್ತಿಸುವ ಪಬ್ಬುವಿನ ನಡುವಳಿಕೆಗಳು ಜಾಗತೀಕರಣ ಮನಸ್ಸಿನ ಉದ್ವೇಗದ ಸಂಕೇತಗಳೆಂದೇ ಹೇಳಬಹುದಾಗಿದೆ. ಮರ್ಯಾದಾ ಹತ್ಯೆಗೆ ಪ್ರಚೋದನೆ ನೀಡುವ ಇಂತಹ ಘಟನೆಗಳು ವಿಕೃತ ಮನಸ್ಸನ್ನು ತಾಳುತ್ತಿವೆ ಎಂಬುದು ಇಲ್ಲಿ ಸ್ಪಷ್ಟವಾಗುತ್ತದೆ. ಪರರ ಜೊತೆಗಿನ ಅನೈತಿಕ ಸಂಬಂಧಗಳಲ್ಲಿ ತೊಡಗಿಕೊಳ್ಳುವ ಸ್ತ್ರೀಯನ್ನು ಆಕೆಯ ಹಿತೈಷಿಗಳೇ ಭೋಗದ ವಸ್ತುವನ್ನಾಗಿ ಕಾಣುವ ಮೂಲಕ ಕ್ರೌರ್ಯವನ್ನು ಮೆರೆಯುತ್ತಿದ್ದಾರೆ. ಹಣಕ್ಕಾಗಿ, ಲೌಕಿಕ ಬದುಕಿನ ಸುಖದ ತಪ್ಪು ಕಲ್ಪನೆಯಿಂದ ತಪ್ಪು ಮಾಡುವ ಗಂಗಿ ಮತ್ತು ಅವಳ ತಪ್ಪನ್ನೂ ಬಂಡವಾಳಮಾಡಿಕೊಳ್ಳಲು ಯತ್ನಿಸುವ ಪಬ್ಬು ಇಲ್ಲಿದ್ದಾರೆ. ಇವರಿಗೆ ಸಂಬಂಧ ಮುಖ್ಯವಾಗುವುದಿಲ್ಲ. ಅದನ್ನು ರೂಪಾಯಿಯಾಗಿ ಹೂಡಿಕೆ ಮಾಡುವುದು ಮುಖ್ಯವಾಗುತ್ತದೆ. ಸಮಾನತೆ, ಸಮನ್ವಯತೆಯ ಮಂತ್ರ ಜಪಿಸುವ ಜಾಗತೀಕರಣದ ನಿಲುವುಗಳು ಮಾಡಿದ್ದಾದರೂ ಏನು? ಎಂಬ ಪ್ರಶ್ನೆ ಉದ್ಭವಿಸುತ್ತದೆ. ಹೀಗೆ ನೋಡಿದಾಗ ಜಾಗತಿಕ ಜಗತ್ತಿನಲ್ಲಿ ಕ್ರೌರ್ಯವು ವಿರಾಟರೂಪತಾಳಿದ್ದು, ಪ್ರತಿಷ್ಠೆಯ ಸಂಕೇತವಾಗಿಯೂ ಹೊರಹೊಮ್ಮುತ್ತಿರುವಂತೆ ಕಾಣಿಸುತ್ತದೆ.

ಹೀಗೆ ಊರಿನಲ್ಲಿ ಪ್ರಾರಂಭವಾದ ಬ್ರಿಜ್‌ನ ಕಾಮಗಾರಿಯಿಂದ ಪಬ್ಬುವಿನ ಕುಟುಂಬವು ಅನಾಯಾಸವಾಗಿ ಅಂತ್ಯಕಂಡಿತು. ಪಬ್ಬುವಿನ ಪಲಾಯನ, ಆತನ ತಂಗಿಯ ಸಾವು, ತಾಯಿಯ ಮಾನಸಿಕ ಅಸ್ವಸ್ಥತೆಗೆ ಬ್ರಿಜ್‌ನ ಮೇಸ್ತ್ರಿಗಳು ಮತ್ತು ಊರಿನ ಶ್ರೀಮಂತರ ವರ್ಗ ಕಾರಣವಾದರೆ, ಬ್ರಿಜ್‌ನಿಂದ ಆದ ಅನಾಹುತಗಳು ಒಂದೆರಡಲ್ಲ. ಇಡೀ ಊರನ್ನೆ ನುಂಗಿ ಹಾಕಿದವು. ಇದನ್ನು ಆನಂದನ ಮಾತಿನಲ್ಲಿಯೆ ಸ್ಪಷ್ಟಪಡಿಸಿಕೊಳ್ಳಬಹುದಾಗಿದೆ. "ಬ್ರಿಜ್ ಓಪನ್ ಆದ ಒಂದೆರಡು ತಿಂಗಳಲ್ಲೇ ಮಾಂಶಿಗೆ ಥ್ರೋಬೋಸಿಸ್ ಆಗಿ ಶಿರಸಿಯ

ದವಾಖಾನೆಯಲ್ಲಿ ಸತ್ತಳು. ಬ್ರಿಜ್ ಆದದ್ದೇ ಗಿರಾಕಿಗಳೇ ಇರದೆ ಬೀಳಗಿಯ ಎಲ್ಲ ಚಾ ಅಂಗಡಿಗಳೂ ಕುಸಿದವು. ಧಕ್ಕೆ ಬೋಳಾಯಿತು. ಶೆರೆ ಅಂಗಡಿಯ ಕ್ಯಾಲೆಂಡರುಗಳು ಮಾಸಿದವು. ಮೊದಲೇ ಹುಚ್ಚು ಹಿಡಿದಿದ್ದ ಶ್ರೀಧರ ಕಮ್ತೀರು ಒಂದು ದಿನ ಬ್ರಿಜ್ಜಿನಿಂದ ಹಾರಿ ಸತ್ತದ್ದು ಒಂದು ಸಂಗತಿಯಾಯಿತು. ಆಗಲೇ ಬಾಪ್ಪಾನ ಸಲಹೆಯ ಮೇರೆಗೆ ನಾನು ತೋಟ ಮನೆ ಎಲ್ಲ, ಅಗ್ಗಕ್ಕೇ, ದಾಮೋದರ ಪ್ರಭುವಿನ ತಮ್ಮನಿಗೆ ಮಾರಿದೆ."[೧೯]

ಬ್ರಿಜ್ ನಿರ್ಮಾಣಗೊಂಡ ನಂತರ ಒಂದು 'ಕೂರ್ವೆ ಮಳೆಗಾಲ'ದಲ್ಲಿ ನೆರೆ ಬಂದು ದೀವಗಿಯು ಸಂಪೂರ್ಣವಾಗಿ ಮುಳುಗಿ ಅನೇಕ ಮನೆಗಳು ಹಾಳಾಗಿದ್ದವು. ಜೊತೆಗೆ ಬ್ರಿಜ್‌ನಿಂದಾಗಿ ಹೆದ್ದಾರಿ ಸೃಷ್ಟಿಗೊಂಡು ಊರೊಳಗಿನ ಸಣ್ಣಪುಟ್ಟ ರಸ್ತೆಗಳು ಮುಚ್ಚಿ ಹೋಗಿದ್ದವು. ಇದರಿಂದ ಅಲ್ಲಿನ ವ್ಯಾಪಾರದ 'ದೆಶೆಯೇ ಸಾಫ್' ಆಗಿಬಿಟ್ಟಿತ್ತು. ಬ್ರಿಜ್ ಮೇಲೆ ವಾಹನಗಳು ಓಡಾಡಲು ಪ್ರಾರಂಭವಾದ ಸಂದರ್ಭದಲ್ಲಿ ಊರು ಬಿಟ್ಟಿದ್ದ ಆನಂದನಿಗೆ ಕೆಲವೇ ವರ್ಷದಲ್ಲಿ ಆ ಬ್ರಿಜ್ ಮೇಲೆ ಹಾಯ್ದುಹೋಗುವ ಸಂದರ್ಭ ಬಂದಿತು. ಆಗ ಆನಂದನು ಬ್ರಿಜ್ ಮೇಲೆ ಪ್ರಯಾಣಿಸುತ್ತ ತನಗೆ ಪರಿಚಯವಿದ್ದ ದೀವಗಿಯನ್ನು ಕಾಣಲು ಹವಣಿಸುತ್ತಾನೆ. ಆದರೆ ಅವನಿಗೆ "ಆಗಿನ ಹಳೆ ಕೆಂಪು ರಸ್ತೆಗಳು, ಮೈತುಂಬ ಹಚ್ಚ ಹಸಿರು ಹೊತ್ತುಕೊಂಡಿರುತ್ತಿದ್ದ ಪಾಗಾರಗಳು, ಕುಮಟೆ ತೇರು, ಮಾಂಶಿ, ಬಣ್ಣದ ಶರಬತ್ತು, ಭಜನೆ, ಢೋಲಕ, ಗುಮಟೆ ಪಾಂಗಿನ ಪದಗಳು, ಮಳೆಗಾಲದಲ್ಲಿ ಕೆಂಪಾಗುತ್ತಿದ್ದ ನದೀ ನೀರು, ಅದರಲ್ಲಿ ತೇಲಿ ಬರುತ್ತಿದ್ದ ಸೌದಿಗಳು, ಮನೆ ಆಳುಗಳು.....ಪಬ್ಬು, ದಂಡು, ಸಿಂಗಾರಿ, ಗಂಗೆ...."[೨೦]ಯ ನೆನಪುಗಳು ಬಂದವೇ ಹೊರತು ಆ ಯಾವ ಚಿತ್ರಣಗಳು ಆತನ ಕಣ್ಣೆದುರಿಗೆ ಕಾಣಸಿಗಲಿಲ್ಲ. ಅವೆಲ್ಲವೂ ಇಂದು ಮಂಗಮಾಯವಾಗಿವೆ ಎಂಬ ವಾಸ್ತವದ ಅರಿವು ಆತನಿಗಾಗುತ್ತದೆ. ಬ್ರಿಜ್ ಊರನ್ನು ಮಾತ್ರವಲ್ಲ ಊರಿನ ಜನರೊಂದಿಗೆ ಅಲ್ಲಿನ ಸೊಬಗು, ಸೌಂದರ್ಯಗಳನ್ನು ಬಾಚಿಕೊಂಡು ಹೋಯಿತು. ಬೃಹತ್ ರಸ್ತೆಗಳ ನಿರ್ಮಾಣದಿಂದಾಗಿ ಎಷ್ಟೋ ಗ್ರಾಮಗಳು ಕಣ್ಮರೆಯಾಗಿವೆ. ಇಂತಹ ವಿಚಾರಗಳನ್ನು ಗಮನಿಸಿದಾಗ "ಜಾಗತೀಕರಣದ ವಿರೋಧಿಗಳಿಗೆ ಅದು ಒಂದು ಸಾಂಸ್ಕೃತಿಕ ಆಕ್ರಮಣವಾಗಿಯೂ ಹಾಗೂ ಸ್ಥಳೀಯ ಸಂಪನ್ಮೂಲಗಳ ಮೇಲಣ ಒಂದು ಲೂಟಿಕೋರ ಧಾಳಿಯಾಗಿಯೂ ಆಗಿ ಕಂಡುಬರುತ್ತದೆ."[೨೧] ಎಂಬ ಮಾತು ನೆನಪಾಗುತ್ತದೆ. ದೀವಗಿ ಎಂಬ ಊರಿನ ಮೇಲೆ ನಡೆದ ದಾಳಿಯು ಈತರದ್ದೇ ಆಗಿದೆ. ಇದು ಬರೀ ಒಂದು ಗ್ರಾಮ, ಅಲ್ಲಿನ ಬದುಕಿನ ಮೇಲೆ ನಡೆದ ದಾಳಿಯಲ್ಲ. ತೃತೀಯ ರಂಗ ದೇಶಗಳ ಅದೆಷ್ಟೋ ಸಣ್ಣಪುಟ್ಟ ಗ್ರಾಮಗಳ ಮೇಲೆ ನಡೆಸಲಾದ ದೌರ್ಜನ್ಯವೆಂದೇ ಹೇಳಬಹುದಾಗಿದೆ. ಏಕೆಂದರೆ

ಇಂದು ಎಲ್ಲಿ ನೋಡಿದರಲ್ಲಿ ಬೃಹತ್ ಕಾಮಗಾರಿಗಳು ಕಾರ್ಯನಿರ್ವಹಿಸುತ್ತಿವೆ. ಅದರಲ್ಲೂ ಸಮೃದ್ಧಿಯಿಂದ ಕೂಡಿದ ಗ್ರಾಮಗಳನ್ನೇ ಕೇಂದ್ರವನ್ನಾಗಿಸಿಕೊಂಡಿವೆ. ಇದರಿಂದಾಗಿ ಅಲ್ಲಿನ ಫಲವತ್ತಾದ ಭೂಮಿ, ಪ್ರಾದೇಶಿಕ ವಿಶಿಷ್ಟತೆಗಳು ಅವನತಿಯ ಹಾದಿ ಹಿಡಿದಿವೆ. ಹೀಗಾಗಿ ಇಂದಿನ ಹೊಸ ಭೂಪಟದಲ್ಲಿ ಎಷ್ಟೋ ಗ್ರಾಮಗಳು ಕಾಣದಂತೆ ಮಾಯವಾಗಿವೆ. ಒಂದು ಊರು, ನೂರಾರು ವರ್ಷಗಳಿಂದ ತನ್ನ ಉಡಿಯಲ್ಲಿ ಕಟ್ಟಿಕೊಂಡು ತಂದಿದ್ದ ನೂರಾರು ಬಗೆಯ ಸಂಬಂಧಗಳನ್ನು ಇಂದು ಒಂದು ಅಭಿವೃದ್ಧಿಯ ನಕಾಶೆ ಸರ್ವನಾಶಮಾಡಿಬಿಡುತ್ತಿದೆ. ಬಿ.ಸುರೇಶ ನಿರ್ದೇಶನದ 'ಪುಟ್ಟಕ್ಕನ ಹೈವೇ' ಎಂಬ ಸಿನಿಮಾ ಇಂತಹದೇ ನಾಶದ ಚಿತ್ರವನ್ನು ಕೊಡುತ್ತದೆ. ನಾಶ ಭೌಗೋಲಿಕವಾಗಿ ಮಾತ್ರ ಆಗುವುದಿಲ್ಲ. ಭಾವನಾತ್ಮಕವಾಗಿಯೂ ಆಗುತ್ತದೆ.

ಹಣದ ಭಯಾನಕ ಹರಿವು ಮತ್ತು ಹಣವಂತಿಕೆಯ ಭೀಕರದರ್ದು, ಮನುಷ್ಯ ಸಂಬಂಧಗಳನ್ನು ಜಗಿದು ಉಗುಳಿಬಿಟ್ಟಿವೆ. ಕುಟುಂಬ ರಚನೆಗಳು ಉಸಿರುಗಟ್ಟುತ್ತಿವೆ. ಹಾಗಿರುವಾಗ, ಊರು ಕಟ್ಟಿನ ಸ್ಥಿತಿ ಏನಾದೀತು? ಊರು ಎನ್ನುವುದು ಮನುಷ್ಯ ಸಂಸ್ಕೃತಿಯು ತುಂಬ ಮುತುವರ್ಜಿಯಿಂದ ಕಟ್ಟಿ ಪೋಷಿಸಿಕೊಂಡು ಬಂದ ಸಂರಚನೆ. ಗೀಜಗ ಕಟ್ಟಿದ ಗೂಡಿನಂತೆ. ಆದರೆ, ಬಂಡವಾಳವಾದದ ಬುಲ್ಡೋಜರು ಉದ್ದುದ್ದ-ಅಡ್ಡಡ್ಡ ಸೀಳಿಹಾಕಿದ ಪರಿಣಾಮವಾಗಿ ಊರು ಜಾತಿ-ಕುಲ-ಧರ್ಮಗಳಾಚೆಯೂ ಕಟ್ಟಿಕೊಂಡಿದ್ದ ಜೀವನದ ಚಿತ್ರಣಗಳು ಮಕ್ಕಳಾಟದಂತೆ ಹರಿದುಹೋದವು. ಇಂತಹ ಸಾಮಾಜಿಕ ಸಂಬಂಧಗಳಲ್ಲಿ ಸಂಭವಿಸಿದ ಅಸ್ವಸ್ಥತೆಯನ್ನು ಈ ಕಾಲದ ಹಲವು ಕಥೆಗಳು ನಿರೂಪಿಸುತ್ತವೆ. ಇವುಗಳಲ್ಲಿ ಮೊಗಳ್ಳಿ ಗಣೇಶ ಅವರ 'ತುರ್ತುಪರಿಸ್ಥಿತಿ' ಎಂಬ ಕಥೆಯನ್ನು ನೋಡಬಹುದು. ನಮ್ಮ ಸಾಂಸ್ಕೃತಿಕ-ಸಾಹಿತ್ಯಿಕ ವಿದ್ಯಮಾನಗಳಲ್ಲಿ ಯಾವುದು ಸ್ಥಾಪಿತ ಮಾದರಿಯಾಗಿದೆಯೋ, ಯಾವುದು ರೂಢಿ ಎಂದೆನಿಸಿಕೊಂಡಿದೆಯೋ ಅವುಗಳನ್ನು ದಲಿತ ಸಂವೇದನೆಯಿಂದ ಪ್ರವೇಶಿಸಿದರೆ, ಅದರಲ್ಲಿ ಖಂಡಿತವಾಗಿಯೂ ತಕರಾರುಗಳು ಏಳುತ್ತವೆ –ಎಂದು ಸಾಧಿಸಿದ ಬರಹಗಾರರು ಮೊಗಳ್ಳಿ ಗಣೇಶ ಅವರು. ಭಾರತದ ಗ್ರಾಮೀಣ ಬದುಕಿನ ಕಸುವನ್ನು, ಅದರಲ್ಲಿ ದಲಿತ ಕೇರಿಯ ಜಗತ್ತೂ ಕೊಲಾಜ್ ಆಗುವ ಹಾಗೆ ನಿರೂಪಿಸಿದವರು ಇವರು. ದೇವನೂರರ ದ್ಯಾವನೂರಿನ ನಂತರ ಅಂತಹ ಸಮೃದ್ಧ ದಲಿತ ಬದುಕನ್ನು ಬರೆದವರು. ಇವರ 'ತುರ್ತುಪರಿಸ್ಥಿತಿ' ಎಂಬ ಕಥೆಯು ಹಲವು ಕಾರಣಗಳಿಗಾಗಿ ಮಹತ್ವದ್ದಾಗಿದೆ. ಅವುಗಳಲ್ಲಿ ಪ್ರಥಮವಾದದ್ದು –ಈ ಕಥೆಯಲ್ಲಿ ದೇವರಾಜ ಅರಸು ಅವರೂ ಒಂದು

ಪಾತ್ರವಾಗುತ್ತಾರೆ ಎನ್ನುವುದು. ಭಾರತದ ಚರಿತ್ರೆಯಲ್ಲಿಯೇ ಮೊಟ್ಟ ಮೊದಲು ದಲಿತರಿಗೆ ಮೀಸಲಾತಿಯ ಸೌಲಭ್ಯವನ್ನು ಕಲ್ಪಿಸಿದ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ಈ ನಾಡು ಕಂಡ ಅದ್ವಿತೀಯ ಶಕ್ತಿ. ತದನಂತರದಲ್ಲಿ ಬಡವರಿಗೆ, ದಲಿತರಿಗೆ ಮೀಸಲಾತಿಯೇ ಮೊದಲಾದ ಸೌಲಭ್ಯಗಳನ್ನು ಸಂವಿಧಾನ ಬದ್ಧವಾಗಿ ತಂದು ಅವರ ಬಾಳುಗಳಲ್ಲಿ ಅಮೂಲಾಗ್ರ ಬದಲಾವಣೆಯ ಬೆಳಕನ್ನು ಬಿತ್ತಬೇಕೆಂದು ಪ್ರಯತ್ನಿಸಿದವರು ದೇವರಾಜ ಅರಸು ಅವರು. ದೇವರಾಜ ಅರಸು ಅವರಿಗೆ ಬಡಬಗ್ಗರ ದಲಿತರ ಪರವಾದ ನಿಲುವು ಇತ್ತು. ಮತ್ತು ಅವರ ಸಮಾಜ ಸುಧಾರಣೆಯ ಪ್ರಯತ್ನಗಳು ವೋಟ್‌ಬ್ಯಾಂಕಿನ ರಾಜಕಾರಣವಾಗಿರಲಿಲ್ಲ. ಜನಪ್ರಿಯತೆಯ ಪ್ರಚಾರದ ತಂತ್ರವಾಗಿರಲಿಲ್ಲ. ಅದು ಅವರ ಆತ್ಮತೃಪ್ತಿಯ ಕಳಕಳಿಯ ಭಾಗವಾಗಿತ್ತು. ಹಾಗಾಗಿಯೇ ಕನ್ನಡ ಕಥನ ಸಾಮ್ರಾಜ್ಯದಲ್ಲಿ ಆ ವ್ಯಕ್ತಿತ್ವಕ್ಕೊಂದು ಮೀಸಲು ಸ್ಥಾನವಿದೆ. ಹಲವಾರು ಕಥೆಗಳಲ್ಲಿ ಬಡಬಗ್ಗರಿಗೆ ಕನಸಿನಲ್ಲಿ ದೇವರಾಜ ಅರಸು ಕಾಣುತ್ತಾರೆ. ಹಲವು ಕಥೆಗಳಲ್ಲಿ ಬಡವರು ಅರಸು ಅವರೊಂದಿಗೆ ನೇರಾನೇರ ಹಣಾಹಣಿಗೂ ತೊಡಗುತ್ತಾರೆ.

ಇದು 'ಗ್ರಾಮ ಭಾರತ'ದ ಮೇಲೆ ಬೆಳಕು ಚಲ್ಲುವ ಮುಖ್ಯ ಕಥೆಗಳಲ್ಲಿ ಒಂದಾಗಿದೆ. ಇಲ್ಲಿ ಭೂಸುಧಾರಣ ನೀತಿಯಂತಹ ಮಹತ್ವದ ಯೋಜನೆಯೊಂದರಿಂದ ಗ್ರಾಮೀಣ ಪ್ರದೇಶದಲ್ಲಿ ಉದ್ಭವಿಸಿದ ಸಮಸ್ಯೆಗಳು ಕಥಾವಸ್ತುವಾಗಿವೆ. ಮೊಗಳ್ಳಿಯವರ ದಲಿತಪ್ರಜ್ಞೆ ಇಲ್ಲಿ ಹೆಚ್ಚು ಕೆಲಸ ನಿರ್ವಹಿಸಿದೆ. ಜೊತೆಗೆ ಬಡಶ್ರಮಿಕರಿಗೆ ಸರ್ಕಾರವು ಒದಗಿಸಿದ ಸ್ವತಂತ್ರ ಬದುಕನ್ನು ಜಮೀನ್ದಾರರು ಬಹಳ ದಿನಗಳ ಕಾಲ ಉಳಿಯಲು ಬಿಡಲಿಲ್ಲ ಎಂಬುದನ್ನು ಈ ಕಥೆಯು ಸ್ಪಷ್ಟಪಡಿಸುತ್ತದೆ.

ಭಾರತದಲ್ಲಿನ ಬಹುತೇಕ ಕೃಷಿಭೂಮಿ ಜಮೀನ್ದಾರರ ವಶದಲ್ಲಿತ್ತು. ಇದರಿಂದ ಕೃಷಿಕಾರ್ಮಿಕರು ಜಮೀನ್ದಾರರ ಅಧೀನಕ್ಕೆ ಒಳಗಾಗಿದ್ದರು. ಇದನ್ನು ಅರಿತ ಅಂದಿನ ಸರ್ಕಾರ ೧೯೩೫ರ ಅಧಿವೇಶನದಲ್ಲಿ "ಉಳುವವನೆ ಭೂಮಿಯ ಒಡೆಯ" ಎಂಬ ಭೂಸುಧಾರಣಾ ನೀತಿಯನ್ನು ಜಾರಿಗೆ ತರಲು ನಿರ್ಧರಿಸಿತು. ಇದರ ಫಲವಾಗಿ ಐದು ಮತ್ತು ಆರನೆಯ ಪಂಚವಾರ್ಷಿಕ ಯೋಜನೆಯಡಿಯಲ್ಲಿ "ಉಳುವವನೆ ಹೊಲದೊಡೆಯ" ಎಂಬ ಕರಡನ್ನು ಹೊರಡಿಸಿತು. ಇದನ್ನು ಭಾರತದ ಹಲವಾರು ರಾಜ್ಯಗಳು ಅನುಷ್ಠಾನಕ್ಕೆ ತಂದವು. ಇದರಿಂದ ಕೃಷಿ ಕಾರ್ಮಿಕರು ಸ್ವತಂತ್ರ ಬದುಕನ್ನು ಕಟ್ಟಿಕೊಳ್ಳಲಾರಂಭಿಸಿದರು. ಇದು ಶ್ರಮಿಕ ವರ್ಗಕ್ಕೆ ಸಿಕ್ಕ ಪ್ರತಿಫಲವೆಂದು ಈಗಾಗಲೆ ಸಾಕಷ್ಟು ಚರ್ಚೆಗಳು ನಡೆದಿವೆ. ಆದರೆ

ಮೊಗಳ್ಳಿಯವರ ತುರ್ತು ಪರಿಸ್ಥಿತಿ ಕಥೆಯು ಈ ಹಂತದಲ್ಲಿ ಕಾಣಿಸಿಕೊಂಡ ಕೃಷಿಕಾರ್ಮಿಕರು ಹಾಗೂ ದಲಿತ ವರ್ಗಕ್ಕೆ ಹೊಸ ಸಮಸ್ಯೆಗಳು ಎದುರಾದವು ಮತ್ತು ಅವರನ್ನು ಮತ್ತಷ್ಟು ಬಲಹೀನಗೊಳಿಸಿದವು ಎಂಬುದನ್ನು ಚರ್ಚಿಸುತ್ತದೆ. ಅಷ್ಟೇ ಅಲ್ಲದೆ ಮಧ್ಯಮ ವರ್ಗದ ಮೇಲೂ ಸಾಕಷ್ಟು ದುಷ್ಪರಿಣಾಮಗಳು ಎದುರಾಗಿರುವುದನ್ನು ತಿಳಿಸುತ್ತದೆ. ಜಮೀನ್ದಾರೀ ವ್ಯವಸ್ಥೆಯೇ ಇರಲಿ, ಬಂಡವಾಳವಾದೀ ವ್ಯವಸ್ಥೆಯೇ ಇರಲಿ, ಯಾಜಮಾನ್ಯವು ತನ್ನ ಕೈಕೆಳಗಿನ ಬಡವರು ಪರಾವಲಂಭಿಗಳಾಗದೆ ಸ್ವಾಯತ್ತವಾಗಿ ಬದುಕುವುದನ್ನು ವಿರೋಧಿಸುತ್ತದೆ.

ತುರ್ತು ಪರಿಸ್ಥಿತಿಯ ಆಚೀಚಿನ ಕಾಲದ ವಿಷಯಗಳು ಮೂಲ ಕಥಾವಸ್ತು ಎಂಬಂತೆ ಕಥೆಯು ಪ್ರಾರಂಭವಾಗುತ್ತದೆ. ಈ ಕಥೆಯಲ್ಲಿ ಬರುವ ಮಾರಪ್ಪ ಎಂಬ ಪಾತ್ರವು ಬಹಳ ಪ್ರಮುಖವಾಗಿದೆ. ಏಕೆಂದರೆ ಹಳ್ಳಿಯೊಂದರಲ್ಲಿ ಸಣ್ಣ ವ್ಯಾಪಾರವೊಂದನ್ನು ನಡೆಸುವ ವ್ಯಕ್ತಿ. ಇತನ ಬದುಕಿನಲ್ಲಿ 'ಉಳುವವನೆ ಭೂಮಿ ಒಡೆಯ' ಎಂಬ ಸರ್ಕಾರದ ನೀತಿಯು ಹಲವು ಸಮಸ್ಯೆಗಳನ್ನು ತೊಂದೊಡ್ಡುತ್ತದೆ. ಜಮೀನುದಾರರಿಗೆ ಕಡಿವಾಣ ಹಾಕಲು ಜಾರಿಗೆ ತಂದ ಈ ನೀತಿಯು 'ಮಾರಪ್ಪ'ನಂತ ಸಾಮಾನ್ಯನಿಗೂ ತಟ್ಟದೆ ಇರಲಾರದು ಎಂಬ ಕಹಿ ಸತ್ಯ ಇಲ್ಲಿ ಅನಾವರಣಗೊಂಡಿದೆ.

ದೇಶವೊಂದಕ್ಕೆ ಸಂಬಂಧಿಸಿದ ಪ್ರಗತಿ, ದುಷ್ಪರಿಣಾಮಗಳಂತಹ ಸನ್ನಿವೇಶಗಳು ಕಾಣಿಸಿಕೊಂಡಾಗ ಅವುಗಳ ಪ್ರಭಾವಕ್ಕೆ ಆ ದೇಶದಲ್ಲಿನ ಗ್ರಾಮಗಳು ನೇರವಾಗಿ ಫಲಾನುಭವಿಗಳಾಗುತ್ತವೆ. ನಗರೀಕರಣಗಳ್ಳುವುದಕ್ಕಿಂತ ಮೊದಲು ಹಳ್ಳಿಗಳ ಸಂಖ್ಯೆ ಯತೇಚ್ಛವಾಗಿತ್ತು. ಆ ಸಂದರ್ಭದಲ್ಲಿ ಹಳ್ಳಿಗಳು ಆಯಾದೇಶಗಳ ಪ್ರಮುಖ ಜನವಸತಿ ಕೇಂದ್ರಗಳಾಗಿದ್ದವು. ಆಧುನಿಕ ಸಂದರ್ಭದಲ್ಲಿ ಅತೀಹೆಚ್ಚು ಜನರು ಗ್ರಾಮಜೀವನಕ್ಕೆ ಒಗ್ಗಿಕೊಂಡಿದ್ದರು. ಆ ಹಂತದಲ್ಲಿ ತೃತೀಯರಂಗ ದೇಶಗಳಲ್ಲಿ ಬಡತನ ನಿರುದ್ಯೋಗ, ಜಾತೀಯತೆ, ಅನಿಷ್ಟ ಪದ್ಧತಿಗಳ ಬಳಕೆ ಹೆಚ್ಚಾಗಿತ್ತು. ಅಂತವುಗಳ ನಿರ್ಮೂಲನೆಗಾಗಿ ಆ ದೇಶಗಳು ಚಿಂತಿಸುತ್ತಿರುವಾಗಲೇ ಶ್ರೀಮಂತ ರಾಷ್ಟ್ರಗಳ ಅಭಿವೃದ್ಧಿಪರವಾದ ಚಿಂತನೆಗಳು ಅವುಗಳನ್ನು ಆಕರ್ಷಿಸಿದವು. ಹಂತ ಹಂತವಾಗಿ ಅವುಗಳನ್ನು ತಮ್ಮಲ್ಲಿ ಅಳವಡಿಸಿಕೊಂಡ ಬಡರಾಷ್ಟ್ರಗಳು ಹಲವು ಬದಲಾವಣೆಗಳಿಗೆ ಒಳಪಟ್ಟವು. ಅಂತಹ ದೇಶಗಳಲ್ಲಿ ಭಾರತವು ಒಂದು. ಹೀಗಾಗಿಯೇ ಕಳೆದ ಎರಡುವರೆ ದಶಕದ ಭಾರತವು ಸಾಮಾಜಿಕ, ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ರಂಗದಲ್ಲಿ ಹಲವು ಮಾರ್ಪಾಡುಗಳನ್ನು ಮಾಡಿಕೊಳ್ಳಲು

ಸಾಧ್ಯವಾಗಿದೆ. ಆದರೆ, ಅವುಗಳ ಗುಣಾವಗುಣಗಳ ಗಣನೆಗೆ ತೊಡಗಿದಾಗ ಭಾರತ ದೇಶವು ಈ ಅವಧಿಯಲ್ಲಿ ಅನುಭವಿಸಿದ ದುಷ್ಪರಿಣಾಮಗಳೆ ಹೆಚ್ಚು. ಯಾಕೆಂದರೆ, ಮಾನವ ಸಂಪನ್ಮೂಲವು ಹೆಚ್ಚಿರುವ ದೇಶವಾದ ಭಾರತ ಮಾನವ ಸಂಪನ್ಮೂಲದ ಕೊರತೆಯ ಕಾರಣಕ್ಕಾಗಿ ಯಂತ್ರನಾಗರಿಕತೆಯ ಬೆನ್ನುಹತ್ತಿರುವ ಅಮೇರಿಕಾದಂತಹ ದೇಶದ ಅಭಿವೃದ್ಧಿಯ ಮಾದರಿಯನ್ನು ಅಳವಡಿಸಿಕೊಂಡಿದ್ದು. ಅಂತಹ ಒಂದು ಘಟನೆಯನ್ನು 'ತುರ್ತುಪರಿಸ್ಥಿತಿ' ಎಂಬ ಕತೆಯು ಮುಖ್ಯ ವಿಷಯವಸ್ತುವನ್ನಾಗಿಸಿಕೊಂಡಿದೆ.

ತುರ್ತು ಪರಿಸ್ಥಿತಿ ಜಾರಿಗೊಳಿಸುವಂತಹ ಅನಿವಾರ್ಯತೆಗೆ ಕಾರಣವಾದ ಘಟನೆಯೊಂದು ಈ ಕಥೆಯಲ್ಲಿ ಮೂಡಿಬಂದಿದ್ದು, ಅದು ಗ್ರಾಮೀಣ ಬದುಕಿನಲ್ಲಿ ಸೃಷ್ಟಿಸಿದ ಅವಾಂತರಗಳ ಸ್ವರೂಪವನ್ನು ಕಥೆಯು ಅನಾವರಣಗೊಳಿಸುತ್ತದೆ. 'ಇಂದಿರಾ ಗಾಂಧಿ' ಸರ್ಕಾರದಲ್ಲಿ ಹೊರಡಿಸಲಾದ 'ಉಳುವವನೆ ಭೂಮಿ ಒಡೆಯ' ಎಂಬ ಕಾಯ್ದೆಯು ಗ್ರಾಮೀಣ ಬದುಕಿನ ಮೇಲೆ ನೇರವಾದ ಪರಿಣಾವನ್ನು ಬೀರಿತು. ರೈತಾಪಿ ಬದುಕಿನಲ್ಲಿ ಕೈಗೊಳ್ಳಲಾದ ಸಂವಿಧಾನಾತ್ಮಕವಾದ ಕಾನೂನಿನ ತಿದ್ದುಪಡಿಯು ರೈತನ ಬದುಕಿನಲ್ಲಿ ಆಶಾಕಿರಣವಾಗಿ ಕಂಡರೂ ಅದನ್ನು ಹೊಸಕಿಹಾಕುವ ಚಟುವಟಿಕೆ ಜನಸಾಮಾನ್ಯರ ಪ್ರಾಣಕ್ಕೆ ಕುತ್ತುತಂದಿತು. ಅಷ್ಟೇ ಅಲ್ಲದೆ ಆ ನಿಯಮದಿಂದಾಗಿ ಜಮೀನ್ದಾರರ ಕೆಂಗಣ್ಣಿಗೆ ಸರ್ಕಾರ ಗುರಿಯಾಗುವಂತಾಯಿತು. ಸರ್ಕಾರ ಮತ್ತು ಜಮೀನ್ದಾರರ ಮಧ್ಯೆ ಸಿಲುಕಿದ ರೈತಾಪಿವರ್ಗ, ಶ್ರಮಿಕವರ್ಗ, ಕೆಳವರ್ಗ, ಸಾಮಾನ್ಯವರ್ಗಗಳ ಸ್ಥಿತಿ ಹೇಳತೀರದ ಹಂತ ತಲುಪಿತು. ಎಂಬಂತಹ ವಿಚಾರಗಳನ್ನು ಕಥೆಯ ಓದು ಸಹಜವಾಗಿಯೆ ಸಹೃದಯನಲ್ಲಿ ಮೂಡಿಸುತ್ತದೆ. ಇದು ಆಧುನಿಕೋತ್ತರದ ಆರಂಭದಲ್ಲಿ ಗ್ರಾಮೀಣ ಬದುಕಿನ ವಾಸ್ತವ ಸ್ಥಿತಿ ಎಂದು ಬೇರೆ ಹೇಳಬೇಕಿಲ್ಲ. ಏಕೆಂದರೆ, 'ಇಂದಿರಾ ಗಾಂಧಿ' ಸರ್ಕಾರದಲ್ಲಿ ತಲೆದೋರಿದ್ದ ತುರ್ತುಪರಿಸ್ಥಿತಿಯು ಭಾರತದ ರಾಜಕೀಯ ಇತಿಹಾಸದಲ್ಲಿ ಎಂದೂ ಮರೆಯಲಾರದ ಘಟನೆ. ಇಂತಹ ನೈಜಘಟನೆಯೊಂದನ್ನು ಕಥಾವಸ್ತುವಾಗಿ ಬಳಸಿಕೊಂಡಿದ್ದು ವಾಸ್ತವತೆಗೆ ಹಿಡಿದ ಕೈಗನ್ನಡಿ.

ದೇಶದಲ್ಲೆಲ್ಲ 'ಉಳುವವನೆ ಭೂಮಿ ಒಡೆಯ' ಎಂದು ಘೋಷಿಸಲಾಗಿತ್ತು. ಇದರಿಂದ ಅಲ್ಲಲ್ಲಿ ಗಲಾಟೆ, ಗಲಭೆಗಳು ಪ್ರಾರಂಭವಾಗಿದ್ದವು. ಇದರಿಂದ ಎಲ್ಲ ಕಡೆಯೂ ತುರ್ತು ಪರಿಸ್ಥಿತಿಯನ್ನು ಜಾರಿಗೆ ತರಲಾಗಿತ್ತು. ಈ ಹಂತದಲ್ಲಿ ದೊಡ್ಡ ದೊಡ್ಡ ಜಮೀನ್ದಾರರು, ಗೌಡರು ತಮ್ಮ ಅಧೀನದಲ್ಲಿದ್ದ ಸಾಕಷ್ಟು ಪ್ರಮಾಣದ ಜಮೀನನ್ನು ದುಡಿಯುವ ವರ್ಗಕ್ಕೆ

ಬಿಟ್ಟುಕೊಡುವ ಅನಿವಾರ್ಯತೆ ಎದುರಿಸುತ್ತಿದ್ದರು. ಇದು ಜಮೀನ್ದಾರಿ ಪದ್ಧತಿಯನ್ನು ಬುಡಸಮೇತವಾಗಿ ಹೊಡೆದುರುಳಿಸುವ ಮಾರ್ಗವಾಗಿ ಮೇಲ್ನೋಟಕ್ಕೆ ಕಂಡರೂ, ಪರದೆಹಿಂದೆ ನಡೆದ ಅವಾಂತರಗಳೆ ಬೇರೆಯಾಗಿವೆ. "ಹಳ್ಳಿ ಹಳ್ಳಿಗಳಲ್ಲಿ ಊರಗೌಡರು ಹೊಲೆಯರನ್ನು ವ್ಯಗ್ರವಾಗಿ ನೋಡುವ ಒಂದು ಬಿಕ್ಕಟ್ಟು ಆ ಕಾರ್ಯಕ್ರಮಗಳಿಂದ ಉಂಟಾಗಿತ್ತು."[೨೨]ಎನ್ನುವ ಮಾತು 'ಉಳುವವನೆ ಭೂಮಿ ಒಡೆಯ' ಎಂಬ ಕಾನೂನಿನ ಸಂಕೋಲೆಯಲ್ಲಿ ಸಿಲುಕಿ ಹತಾಶರಾದ ಜಮೀನ್ದಾರರು ಜನಸಮಾನ್ಯರನ್ನು ಹೆದರಿಸುವ, ದ್ವೇಷಿಸುವ, ಹಿಂಸಿಸುವ ಚಟುವಟಿಕೆಗಿಳಿದು ಅದರಿಂದ ಪಾರಾಗಲೆತ್ನಿಸಿದಂತಿದೆ. ಈ ಸಂದಿಗ್ಧತೆಯಲ್ಲಿ ಗ್ರಾಮೀಣ ಪ್ರದೇಶದಲ್ಲಿನ ಶಾಂತಿ ಕದಡದೆ ಇರಲು ಹೇಗೆ ಸಾಧ್ಯ? "ನೆರೆಹೊರೆಯ ಊರುಗಳಲ್ಲಿ ಊಳುವವನೇ ಭೂ ಒಡೆಯ ಎಂಬ ಕಾನೂನಿನ ನೆಪದಲ್ಲಿ ಗಲಭೆಗಳಾಗಿ ಹೊಲಗೇರಿಗೆ ಬೆಂಕಿ ಬಿದ್ದು ಸಾವು ನೋವುಗಳಾದ ವಾರ್ತೆಗಳು ಬಂದು ಮುಟ್ಟಿದವು. ಕೆಲವರು ದೊಡ್ಡೇಗೌಡರ ಮನೆಗೆ ಹೋಗಿ ತಪ್ಪಾಯ್ತು ಬುದ್ಧೀ... ನಮಗ್ಯಾವ ಜಮೀನು ಬ್ಯಾಡ; ನೀವೇ ಮಾಡ್ಕೊಳ್ಳಿ' ಎಂದು ಹಕ್ಕುಪತ್ರಗಳ ಅವರ ಪಡಸಾಲೆ ಮೇಲೆ ಇಟ್ಟು ಕೈಮುಗಿದು ಹೆದರಿ ಬಿಟ್ಟು ಬಿಟ್ಟಿದ್ದರು."[೨೩] ಕಥೆಯಲ್ಲಿ ಮೂಡಿಬಂದ ಇಂತಹ ಮಾತುಗಳು ಸಂವಿಧಾನಾತ್ಮಕ ನಿಯಮಗಳನ್ನು ಗಾಳಿಗೆ ತೂರುವ, ಸಂವಿಧಾನವನ್ನು ಕಗ್ಗೊಲೆಗೈಯುವ ಚಟುವಟಿಕೆಗಳನ್ನು ಸಾಂಕೇತಿಸುತ್ತವೆ. ಸಮಕಾಲೀನ ದಿನಗಳಲ್ಲಿ ಜಮೀನ್ದಾರರ ಸಂಸ್ಕೃತಿಯನ್ನು ಹೋಲುವ ಅಧಿಕಾರಶಾಹಿತ್ವದ ನಡೆಯು ಈ ಬಗೆಯದ್ದೆ ಆಗಿದೆ. ಅಧಿಕಾರಶಾಹಿತ್ವವು ರಾಜಕೀಯ ವಲಯವನ್ನು ಪ್ರವೇಶಿಸಿದ್ದರಿಂದ ಅಧಿಕಾರಶಾಹಿಗಳು ತಮ್ಮ ಅನುಕೂಲತೆಗೆ ತಕ್ಕಂತೆ ಕಾನೂನುಗಳನ್ನು ರಚಿಸಿಕೊಳ್ಳುತ್ತಿದ್ದಾರೆ. ಇದರಿಂದಾಗಿ ಸಮಾಕಾಲೀನ ಗ್ರಾಮೀಣ ಬದುಕು ಜಮೀನ್ದಾರಿ ಪದ್ಧತಿಯಿಂದ ತಪ್ಪಿಸಿಕೊಂಡು ಅಧಿಕಾರಶಾಹಿಗಳ ಹಿಡಿತಕ್ಕೆ ಸಿಲುಕಿಕೊಳ್ಳುವಂತಾಗಿದೆ. ಇಂದಿನ ರಾಜಕೀಯ ವಲಯವು ಕೈಗೊಳ್ಳುವ ಸಂವಿಧಾನಾತ್ಮಕ ಚಟುವಟಿಕೆಗಳು ಬಹಳ ಅನುಮಾನಾಸ್ಪದವನ್ನು ಹುಟ್ಟಿಸುತ್ತಿದ್ದು, ಮುಂಬರುವ ದಿನಗಳಲ್ಲಿ ಗ್ರಾಮಗಳು ಸಂಪೂರ್ಣವಾಗಿ ಕಣ್ಮರೆಯಾಗುವಲ್ಲಿ ಯಾವ ಸಂದೇಹವು ಇಲ್ಲವೆನ್ನಬಹುದಾಗಿದೆ.

'ತುರ್ತು ಪರಿಸ್ಥಿತಿ'ಯು ಗ್ರಾಮಗಳಲ್ಲಿನ ಜಮೀನ್ದಾರರು ಮತ್ತು ಶ್ರಮಿಕ ವರ್ಗದವರ ಮಧ್ಯೆ ನಡೆದ ಸೆಣೆಸಾಟ, ಹಿಂಸೆ, ಕ್ರೌರ್ಯಗಳನ್ನು ಮಾತ್ರ ತಿಳಿಸುವುದಿಲ್ಲ. ಅದರ ಜೊತೆಗೆ ಮಧ್ಯಮವರ್ಗದ ಜನರಲ್ಲಿಯೂ ಗಂಭೀರವಾದ ಪರಿಣಾಮಗಳನ್ನು ಬೀರಿತೆಂಬುದನ್ನು ಸ್ಪಷ್ಟಪಡಿಸುತ್ತದೆ. ಇಲ್ಲಿ ಬರುವ 'ಮಾರಪ್ಪನ' ಪಾತ್ರವು ಗ್ರಾಮಗಳಲ್ಲಿರುವ ಸಣ್ಣವ್ಯಾಪಾರಿಗಳ,

ಮಧ್ಯಮ ವರ್ಗದ ಜನರನ್ನು ಪ್ರತಿನಿಧಿಸುತ್ತದೆ. 'ಮಾರಪ್ಪ' ಊರಿನಲ್ಲಿ ಸಣ್ಣಹೋಟಲ್‌ವೊಂದನ್ನು ಇಟ್ಟುಕೊಂಡರೂ ಅದರಲ್ಲಿಯೆ ಸಂತೃಪ್ತಿ ಬದುಕನ್ನು ಕಟ್ಟಿಕೊಂಡಿದ್ದನು. ಹಣವನ್ನು ಗಳಿಸುವ ಗೀಳಿಲ್ಲದಿದ್ದರೂ ತನ್ನ ಕೊನೆಯ ದಿನಗಳಲ್ಲಿ ಆಸರೆಯಾಗಬಲ್ಲದು ಎಂದು ಸ್ವಲ್ಪ ಕೂಡಿಟ್ಟ ಹಣದಲ್ಲಿ ಜನರ ಪರೋಪಕಾರದಲ್ಲಿಯೂ ತೊಡಗಿಕೊಂಡಿದ್ದನು. ಈತನಿಂದ ಹಣ ಪಡೆದವರು, ಹೋಟಲ್‌ನಲ್ಲಿ ತಿಂಡಿಗಳನ್ನು ಸೇವಿಸಿದವರು, ಹಣವನ್ನು ಮರುಪಾವತಿಸಿದವರಕ್ಕಿಂತ ಮುಚ್ಚಿ ಹಾಕಿದವರೇ ಹೆಚ್ಚು. ಇಂತಹದ್ದರ ಮಧ್ಯೆಯು ಆತ ಎಲ್ಲವನ್ನು ಸರಿದೂಗಿಸಿಕೊಂಡು ಯಾರಿಗೂ ಕೆಟ್ಟವನೆನಿಸಿಕೊಳ್ಳದೆ ಬದುಕುತ್ತಿದ್ದ. ಇದರ ಮಧ್ಯೆಯೆ ಹಣ ವಾಪಾಸ್ಸಾಗದ ಸಂದರ್ಭದಲ್ಲಿ ತಾನಾಗಿಯೇ ಆಭರಣಗಳು, ಸ್ವಲ್ಪ ಭೂಮಿಯು ಇವನಲ್ಲಿ ಶೇಕರಣೆಯಾಗಿತ್ತು. ಹೀಗಿರುವಾಗ ಒಮ್ಮಿಂದೊಮ್ಮೆಲೆ ಧಿಡೀರನೆ ಕಾಣಿಸಿಕೊಂಡ ಉಳುವವನೆ ಭೂಮಿಯ ಒಡೆಯ ಎಂಬ ಕಾಯ್ದೆಯು ಇವನಲ್ಲಿ ಸೇಕರಣೆಯಾಗಿದ್ದ ಎಲ್ಲ ಸಂಪತ್ತನ್ನು ದೋಚಿಬಿಟ್ಟಿತು. ಪೋಲಿಸರು ಮಾರಪ್ಪನ ಹೊಟಲ್‌ಗೆ ಬಂದು ಆತನನ್ನು ದಬಾಯಿಸತೊಡಗಿದರು. ಈ ಸಂದರ್ಭವನ್ನು ಉಪಯೋಗಿಸಿಕೊಂಡ ಕೆಲವರು "ಕೊಡಪ್ಪ ನಮ್ಮ ಹಕ್ಕು ಪತ್ರವಾ"॥೨೪॥ ಎಂದು ಅಂಗಡಿಯ ಮುಂದೆ ಧರಣಿ ಕುಳಿತರು. ಇದು ಮಾರಪ್ಪ ತಾತನಿಗೆ ನುಂಗಲಾರದ ತುತ್ತಾಯಿತು. ಇತ್ತ ಹಣದ ಪ್ರಭಾವವಾಗಲೀ, ಕಾನೂನಿನ ರಕ್ಷಣೆಯಾಗಲಿ ತನ್ನ ಬಳಿ ಇಲ್ಲದಿರುವುದನ್ನು ಗಮನಿಸಿದ ಆತನಿಗೆ ಮುಂದೆನೆಂಬುದು ಏನೂ ತೋಚದಂತಾಯಿತು. ಅದಕ್ಕಾಗಿ ತನಗೆ ಪರಿಚಯವಿದ್ದ ಇತರ ಬೇರೆ ಬೇರೆ ವರ್ತಕರನ್ನು, ಶ್ರೀಮಂತರನ್ನು ಭೇಟಿಯಾಗುವುದಲ್ಲದೆ, ತಮ್ಮೂರಿನ ಗೌಡರನ್ನು, ಪಂಚಾಯಿತಿ ಸದಸ್ಯರಲ್ಲಿ ಹೋಗಿ ನ್ಯಾಯದೊರಕಿಸಿಕೊಡುವಂತೆ ಕೇಳುತ್ತಾನೆ. ತನ್ಗೆ ಎಲ್ಲಿಯೂ ನ್ಯಾಯ ಸಿಗದಿದ್ದಾಗ ಹರಸಾಹಸ ಪಟ್ಟು ರಾಜ್ಯದ ಚುಕ್ಕಾಣೆಯನ್ನು ಹಿಡಿದ ಮುಖ್ಯಮಂತ್ರಿಗಳನ್ನೆ ನೇರವಾಗಿ ಭೇಟಿಯಾಗಿ ತನ್ನ ಗೋಳನ್ನು ತೋಡಿಕೊಳ್ಳುತ್ತಾನೆ. ಇದು ಮುಖ್ಯಮಂತ್ರಿಗಳ ಗಮನಕ್ಕೆ ಬಂದಿದ್ದರಿಂದ ಆತನಿಗೆ ನ್ಯಾಯ ದೊರಕಿದರೂ ಅದು ಬಹಳ ದಿನ ಉಳಿಯಲು ಸಾಧ್ಯವಾಗುವುದಿಲ್ಲ.

ಇಂತಹ ಮತ್ತೊಂದು ಹಿನ್ನಲೆಯನ್ನು ತೋರ್ಪಡಿಸುವ ಕಥೆಯಲ್ಲಿನ ಮಾರಪ್ಪನ ಪಾತ್ರವು, ಗ್ರಾಮಗಳಲ್ಲಿನ ಮಧ್ಯಮ ವರ್ಗದವರ ಮೇಲೆ ಹೊಸ ಕಾನೂನೊಂದು ಯಾವೆಲ್ಲ ಪರಿಣಾಮಗಳನ್ನುಂಟು ಮಾಡಬಲ್ಲದೆಂದು ತಿಳಿಸುತ್ತದೆ. ಇದನ್ನು ಕಥೆಯಲ್ಲಿ ಬರುವ ಕೆಲವು ಪ್ರಮುಖ ಹೇಳಿಕೆಗಳನ್ನು ಗಮನಿಸುವ ಮೂಲಕ ಮತ್ತಷ್ಟು ಸ್ಪಷ್ಟಪಡಿಸಿಕೊಳ್ಳಬಹುದಾಗಿದೆ. ಈ ಹಿನ್ನಲೆಯಲ್ಲಿ "ಅಯ್ಯೋ ಅದೆಲ್ಲ ಅಂಗಾಗೊಲ್ಲ ಮಾರಾಯ್ಯಾ... ನೋಡು ನೀನು ಮಾಡಿರೊ

ಯಡವಟ್ಟು ಡಿಸಿ ಸಾಹೇಬ್ರ ತನಕ ಹೋಗಿದೆ. ಅಲ್ಲಿ ಪೊಲೀಸ್ ಸ್ಟೇಷನ್ ನೋಡಿದ್ರೆ ನೀನೇನೊ ಸರ್ಕಾರದ ವಿರುದ್ಧ ಬಂಡಾಯ ಹೂಡಿದ್ದೀಯೇ ಅಂತಾ ರೆಕಾರ್ಡಾಗಿದೆ. ನನ್ನನ್ನಾದ್ರೂ ಮೊದಲೆ ಒಂದ್ಮಾತು ಕೇಳ್ಬಾರ್ದಾಗಿತ್ತಾ ನೀನೂ..."[೨೫]ಎಂಬುದು ಅಮಾಯಕನೊಬ್ಬನನ್ನು ಮತ್ತಷ್ಟು ಬಲಹೀನತೆಗೊಳಪಡಿಸುವ ಪ್ರಕ್ರಿಯೆಯಂತೆ ಕಾಣಿಸುತ್ತದೆ. ಜೊತೆಗೆ ಊರಿನ ಪ್ರಮುಖರೆನಿಸಿದ ಗೌಡನ ಮಗ ಮಾರಪ್ಪನ ಕುರಿತು "ಎಷ್ಟೇ ಆಗಲಿ ಈ ಹೊಲಗೇರಿಯವರು ಅಷ್ಟೇ... ಇವರ ಸಹವಾಸವೇ ಸರಿ ಇಲ್ಲ ಎಂದು ಮೂಗು ಮುರಿದರು."[೨೬]ಹೇಳಿದಮಾತು ಆತನ ಒಡನಾಟವಿರುವ ವರ್ಗವೊಂದರ ಕೊಂಡಿ ಕಳಚಿಬೀಳಲು ಉತ್ತೇಜಿಸುತ್ತಿರುವುದಲ್ಲದೆ, ಜಾತಿ-ಭೇಧಗಳ ಗೋಡೆಯನ್ನು ಭದ್ರಪಡಿಸಿಕೊಳ್ಳುವ ಹುನ್ನಾರದಂತೆನಿಸುತ್ತದೆ. ಜಾತೀಯತೆಯಿಂದ ಗ್ರಾಮಗಳು ಇನ್ನೂ ಮುಕ್ತಿ ಹೊಂದಿಲ್ಲವೆನ್ನುವುದಾಗಲಿ, ಅಂತಹ ವ್ಯವಸ್ಥೆಯೊಂದು ಇನ್ನೂ ಮುಂದುರೆಯುತ್ತಿರುವುದರಿಂದ ಅಂತರ್ ಧರ್ಮಗಳ ಸಮನ್ವಯತೆಗೆ ಧಕ್ಕೆಯುಂಟಾಗುತ್ತಿದೆ. ಜೊತೆಗೆ ಕ್ರೌರ್ಯದ ರೂಪವನ್ನು ತಾಳುತ್ತಿದೆಂಬುದನ್ನು "ಈ ಸಾಬರನ್ನು ಮಟ್ಟಹಾಕಲು ಇದೇ ತಕ್ಕ ಸಮಯ ಎಂದು ಯಾರೊ ಕೇಸು ಬರೆಸಿ ಇಷ್ಟೆಲ್ಲ ಅಕ್ರಮವಾಗಿ ದೋಚಿಕೊಂಡು ಬಡವರಿಗೆ ಅನ್ಯಾಯ ಮಾಡಿದ್ದಾರೆಂದು ಬಲವಾಗಿ ದೂರು ಸಲ್ಲಿಸಿದ್ದರು. ಆ ಸಾಬರ ಮೇಲೆ ದ್ವೇಷ ಇದ್ದ ಯಾವನೊ ಇನ್ನೊಬ್ಬ ಈ ಸಾಬಿ ಹಾಜಿ ಮಸ್ತಾನ್ ಜೊತೆ ಸಂಬಂಧ ಇಟ್ಟುಕೊಂಡು ದೇಶ ದ್ರೋಹ ಕೃತ್ಯ ಎಸುಗುತ್ತಿದ್ದಾನೆಂದು ಸರ್ಕಾರಕ್ಕೆ ಮೂಗರ್ಜಿ ಬರೆದು;"[೨೭] ಇದು ಸ್ಪಷ್ಟಪಡಿಸುತ್ತದೆ. "ಇದ್ರಲ್ಲಿ ನಮ್ದೇನು ಇಲ್ಲ; ನೀನುಂಟು ಸರ್ಕಾರ ಉಂಟು"[೨೮]ಎಂದು ಪಂಚಾಯಿತಿ ಸದಸ್ಯರಾಡುವ ಮಾತುಗಳು ಅಧಿಕಾರಶಾಹಿಗಳು ಸಮಸ್ಯೆಗಳನ್ನು ಸಮರ್ಥವಾಗಿ ಪರಿಹರಿಸುವಲ್ಲಿ ವಿಫಲರಾಗಿದ್ದು, ಅದಕ್ಕೆ ಅವರಲ್ಲಿರುವ ಅಧಿಕಾರಶಾಹಿತ್ವದ ಸ್ವಾರ್ಥ ಮನೋಭಾವನೆಯೆ ನೇರ ಹೋಣೆಯಾಗುತ್ತಿದೆಯಾ? ಎಂಬ ಸಂಶಯವನ್ನು ಹುಟ್ಟಿಸುತ್ತದೆ. ಅತಂತ್ರ ಸ್ಥಿತಿಯಲ್ಲಿರುವ ಊರ ದೊಡ್ಡೇಗೌಡ ಗೌಪ್ಯವಾಗಿ ಮಾರಪ್ಪನ ಬಳಿ ಬಂದು "ತಡಮಾಡಬೇಡ... ಊರುಬಿಟ್ಟು ಎಲ್ಲಿಯಾದರೂ ತಲೆ ಮರೆಸಿಕೊ... ನಿನ್ನವರೇ ನಿನ್ನ ವಿರುದ್ಧ ಬಲೆ ಬೀಸವರೇ..."[೨೯] ಎಂದು ಹೇಳುವ ಮಾತುಗಳು ಊರಿನ ಮತ್ತು ಅಲ್ಲಿನ ಜನರ ನಡುವಿನ ಆತನ ಒಡನಾಟವನ್ನು ಅಂತ್ಯಗೊಳಿಸುತ್ತಿರುವ ಸಂದೇಶವೆಂದು ಹೇಳಬಹುದಾಗಿದೆ.

ಊರಿನಲ್ಲಿ ಉಂಟಾದ ಸಮಸ್ಯೆಗಳನ್ನು ಗಮನಿಸಿದ ಭೈರನಂತಹ ಸನ್ಯಾಸಿಯು "ಕೆರೆ ಕಟ್ಟೆ ಬೆಟ್ಟ ಮರೆಯಾಯ್ತದೆ, ಊರು ಕೇರಿ ಮನೆ ಮಂದಿ ಊರಿದೋಯ್ತವೆ, ಎದ್ದಾಡಿದವರು

ಗುದ್ದಾಡಿ ಉಡುಗೋಯ್ತರೆ, ಬಿದ್ದವರು ಎದ್ದು ಗದ್ದುಗೆಯ ಮೇಲೋಯ್ತರೆ, ಮದ್ದಿನ ಮನೆಯಲ್ಲಿ ಮುದ್ದಿನ ಮಕ್ಕಳು ಹುಟ್ಟಿ, ಹಾದಿ ಬೀದಿಯಲ್ಲಿ ತಬ್ಬಲಿ ಮಕ್ಕಳು ಬೆಳೆದು, ಬೆಂಕಿಯೇ ಬೆಳಕಾಗಿ ಬೆಳಗುವುದು, ಬೆಳಕೇ ಬೆಂಕಿಯಾಗಿ ಉರಿಯುವುದು"[೩೦] ಎಂದು ಕಾಲಜ್ಞಾನವೆಂಬಂತೆ ಹೇಳುತ್ತಾನೆ. ಇದು ಊರಿನಲ್ಲಿ ನಿರಾಯಾಸವಾಗಿ ನೆಲೆಗೊಳ್ಳುತ್ತಿರುವ ಅಶಾಂತಿಯುತವಾದ ವಾತವರಣಗಳು ಮುಂದೊಂದು ಗ್ರಾಮಬದುಕಿಗೆ ಕಂಠಕವಾಗಿ ನಿಲ್ಲುತ್ತದೆಂಬ ಸೂಚನೆಯನ್ನು ಕೊಟ್ಟಂತಿದೆ. ಜೊತೆಗೆ ಅಶಾಂತಿಯ ನೆಲೆಗಳನ್ನು ಸರಿಯಾಗಿ ಅರ್ಥೈಸಿಕೊಂಡು ಶಾಂತಿಯುತವಾದ ಗ್ರಾಮಗಳನ್ನು ಉಳಿಸಿಕೊಳ್ಳುವಲ್ಲಿ ಹೆಜ್ಜೆಗಳನ್ನಿಡಬೇಕಾಗಿದೆ. ಎಂಬ ಆಶಯವನ್ನು ಇಲ್ಲಿ ಕಾಣುತ್ತವೆ. ಅಂದರೆ ಸಮಕಾಲೀನ ಗ್ರಾಮಗಳ ಬದುಕು ಸರಿಯಿಲ್ಲವೆಂದೆ ಒಪ್ಪಿಕೊಂಡಂತಲ್ಲವೆ?

ಮಾರಪ್ಪ ಕಷ್ಟಪಟ್ಟು ಆಗಿನ ಸರಕಾರದ ಚುಕ್ಕಾಣಿ ಹಿಡಿದಿದ್ದ 'ದೇವರಾಜ ಅರಸು'ರವನ್ನು ಭೇಟಿಯಾಗಿ ತನಗಾದ ಅನ್ಯಾಯವನ್ನು ಬಿಚ್ಚಿಡುತ್ತಾನೆ. ಇವನ ಅಳಲನ್ನು ಆಲಿಸಿದ 'ಅರಸು'ರವರು "ನೋಡೂ... ಏಕಾಕೀ ಒಂದು ಸಮಾಜದಲ್ಲಿ ಒಳ್ಳೇದು ಮಾಡ್ಬೇಕು ಅನ್ನೊ ಸಂಕಲ್ಪದಿಂದ ನಿರ್ದಾಕ್ಷಿಣ್ಯವಾಗಿ ಹೊರಟಾಗ ಇಂತಹ ತಪ್ಪುಗಳು ಸಂಭವಿಸುತ್ತವೆ. ಕೆಳಗಿನ ಮಟ್ಟದಲ್ಲಿ ಅವೆಲ್ಲ ಹೇಗೆ ಅನುಷ್ಠಾನಕ್ಕೆ ಬರುತ್ತವೆ ಎಂಬುದು ಮೇಲೆ ಕೂತುಬಿಡುವ ನಮಗೆ ಸರಿಯಾಗಿ ತಿಳಿದಿರುವುದಿಲ್ಲ. ನೀನು ನನ್ನ ಬಳಿ ಬಂದು ಕೇಳಿದಾಗಲೇ ಸರ್ಕಾರ ಎಚ್ಚರವಾಗಿರೋದು"[೩೧]ಎಂದು ಹೇಳುವ ಅವರ ಮಾತು ಗ್ರಾಮೀಣ ಪ್ರದೇಶಕ್ಕೂ ಅಧಿಕಾರಶಾಹಿತ್ವಕ್ಕೂ ಇರುವ ಅಂತರವನ್ನು ತಿಳಿಸುತ್ತದೆ. ಗ್ರಾಮೀಣ ಬದುಕಿಗೆ ಅನುಕೂಲತೆಯನ್ನು ಒದಗಿಸಲು ಮುಂದಾದ ಸಂದರ್ಭದಲ್ಲಿ ಅನುಭವದ ಕೊರತೆ ಎದ್ದುಕಾಣುತ್ತಿದ್ದು, ಅದರಿಂದ ಗ್ರಾಮಗಳ ಅಭಿವೃದ್ಧಿಗಿಂತ ವಿನಾಶಕಾರಿಯಾದ ಘಟನೆಗಳು ಸಂಭವಿಸುವ ಸಾಧ್ಯತೆಗಳೆ ಹೆಚ್ಚು. ಹೀಗಾಗಿ ಗ್ರಾಮಗಳಲ್ಲಿನ ಜನರ ಅಭಿಪ್ರಾಯಗಳ ಸಂಗ್ರಹಣೆಯೊಂದಿಗೆ ಅವುಗಳ ಅಭಿವೃದ್ಧಿ ಕಾರ್ಯಗಳು ಜರುಗಬೇಕು. ಆಗ ಗ್ರಾಮಗಳಲ್ಲಿ ಸಂಭವಿಸುವ ದುರಂತಗಳ ಪ್ರಮಾಣ ಕಡಿಮೆಯಾಗುತ್ತದೆ.

ಕಥೆಯಲ್ಲಿನ ನೈಜ ಚಿತ್ರಣಗಳು ಮನಕಲಕುವಂತಿದ್ದು, ಪ್ರಸ್ತುತ ಗ್ರಾಮಸಮುದಾಯದ ವಾಸ್ತವ ಚಿತ್ರಣವನ್ನು ಬಿಂಬಿಸುತ್ತದೆ. ಸಮಾಜದ ಏಳಿಗೆಗೆ ನಡೆಸುವ ಹೊಸ ಪ್ರಯತ್ನಗಳ ಉದ್ದೇಶಗಳು ಏನಿದ್ದರೂ, ಬಡವರ ಪರವಾಗಿದ್ದರೂ ಅದು ಶ್ರೀಮಂತರ ಬಳಕೆಗೆ ಒಳಗಾಗಿದ್ದೇ ಹೆಚ್ಚು. ಸಮಾಜದಲ್ಲಿ ಕಾಣಿಸಿಕೊಳ್ಳುವ ವಿಧಾನದ ಮೇಲೆ ಸರಿ ತಪ್ಪುಗಳ

ನಿರ್ಣಯವಾಗುತ್ತದೆ. ಇಂತಹ ಪ್ರಯತ್ನಗಳನ್ನು ನಡೆಸಿದ ಪ್ರತಿ ಸಂದರ್ಭದಲ್ಲೂ ಶ್ರೀಮಂತರ, ಅಧಿಕಾರಶಾಹಿಗಳ, ಸಾಮ್ರಾಜ್ಯಶಾಹಿಗಳ ಪಾಲಾದುದೆ ಹೆಚ್ಚು. ಹೀಗಿರುವಾಗ ಮಾನವನ ಸ್ವಾರ್ಥತೆಗೆ ಮುಖ್ಯ ಕಾರಣವಾಗಿರುವ ಅರ್ಥವ್ಯವಸ್ಥೆಯ ಹಿಡಿತದಲ್ಲಿರುವ ಇಂದಿನ ಜನಸಮುದಾಯದ ನಿಲುವುಗಳು ಬದಲಾಗದೆ ಇರಲು ಹೇಗೆ ಸಾಧ್ಯ. ಸಿಕ್ಕ ಅವಕಾಶಗಳನ್ನು ಎಲ್ಲರೂ ಬಳಸಿಕೊಳ್ಳುವ ಮೂಲಕ ತಮ್ಮ ಸ್ವಾರ್ಥಸಾಧನೆ ಗೈಯಲು ಮುಂದಾಗುತ್ತಾರೆ. ಆಗ ಸಮಾಜದಲ್ಲಿ ಅಶಾಂತಿ ನೆಲೆಯೂರದೆ ಇರಲಾರದು. ಎಲ್ಲಾ ಹಂತದ ಜನರಲ್ಲಿಯೂ ಸ್ವಾರ್ಥ ಮನೋಭಾವನೆ ಎಂಬುದು ಮೈಗೂಡಿಕೊಂಡಿದ್ದು, ಅದು ಎಂತಹ ಹೀನ ಸ್ಥಿತಿಗೂ ಇಳಿಯಲು ಮುಂದಾಗುವಂತೆ ಪ್ರಚೋದಿಸುತ್ತಿದೆ. ಇದರಿಂದಾಗಿಯೆ ಹತ್ಯೆಯಂತಹ ಕೃತ್ಯಗಳಲ್ಲಿ ತೊಡಗಿಕೊಳ್ಳುವ ಮೂಲಕ ಅಮಾನವೀಯವಾಗಿ ನಡೆದುಕೊಳ್ಳುತ್ತಿದ್ದಾನೆ. ಇಂತಹ ನಿದರ್ಶನಗಳಿಗೆ ಗ್ರಾಮೀಣ ಬದುಕು ಹೊರತಾಗಿಲ್ಲವೆಂಬುದನ್ನು ಈ ಕತೆಯು ನಿರೂಪಿಸುತ್ತದೆ. ಈ ಕಥೆಯು ತುರ್ತುಪರಿಸ್ಥಿತಿಯ ಕಾಲದ ಗ್ರಾಮಭಾರತದಲ್ಲಿ ಶ್ರೀಮಂತರ ಮತ್ತು ಬಡವರ ನಡುವಿನ ತಾರತಮ್ಯವನ್ನು ಮತ್ತು ಬಡವರೂ ತಮ್ಮೊಡನಾಡಿಗಳ ಮಧ್ಯೆ ಅನೈತಿಕ ಸ್ಪರ್ಧೆಗಿಳಿಯುವ, ಸ್ವಾರ್ಥವನ್ನು ಒಳಗೊಂಡಿದೆ. ಆದರೆ ತುರ್ತುಪರಿಸ್ಥಿತಿ ಕಥೆಯನ್ನು ವಿವರಿಸಿಕೊಳ್ಳುವ ಒಂದು ಕಾಲಧರ್ಮ ಮಾತ್ರ. ಬಂಡವಾಳವಾದವು ಸಾಮಾಜಿಕ ಸಂಕಟವನ್ನು ಹೆಚ್ಚಿಸಿ, ತುರ್ತುಪರಿಸ್ಥಿತಿ ಕಾಲಕ್ಕಿಂತಲೂ ಕೆಟ್ಟ ಮೇಲಾಟದ ಸಮಾಜವನ್ನು ಸೃಷ್ಟಿಸಿದೆ. ಇಂದಿಗೂ ಬಡವರ ಪರವಾಗಿ ಸರಕಾರಗಳು ಜಾರಿಗೆ ತರುವ ಯಾವುದೇ ಯೋಜನೆಗಳ ಫಲವನ್ನು ಅವರಿಗೆ ನಿಲುಕದ ಹಾಗೆ ಮಾಡಲು ಬಂಡವಾಳಶಾಹಿಗಳು ಪ್ರಯತ್ನಿಸುತ್ತಾರೆ. ಬಡತನ ಮತ್ತು ಕೆಳಜಾತಿಗಳೆರಡೂ ಒಂದೇ ಆಗಿರುವ ದೇಶದಲ್ಲಿ ಹೀಗೆ ಅವರನ್ನು ಅಸಹಾಯಕರನ್ನಾಗಿ ಮಾಡುವುದು ಸುಲಭವಾಗುತ್ತದೆ. ಇಂದಿಗೂ ಅನ್ನಭಾಗ್ಯ, ಇಂದಿರಾ ಕ್ಯಾಂಟಿನ್‌ಗಳಂತಹ ಯೋಜನೆಗಳಿರಲಿ, ಗ್ರಾಮಪಂಚಾಯತ್ –ಮಂಡಲ್ ಪಂಚಾಯತ್‌ಗಳ ಅಧಿಕಾರ ನಿರ್ವಹಣೆಯ ಪ್ರಶ್ನೆಯಿರಲಿ, ಬಡವರ ಹೆಸರಿನಲ್ಲಿ ಲಾಭವನ್ನು ಪಡೆಯುವುವವರು; ಬಡವರನ್ನು ಮುಂದಿಟ್ಟುಕೊಂಡು ತಮ್ಮ ಬೇಳೆಯನ್ನು ಬೇಯಿಸಿಕೊಳ್ಳುವವರು, ಶ್ರೀಮಂತ ಬಂಡವಾಳಿಗರೇ ಆಗಿದ್ದಾರೆ. ಇಂದಿಗೂ ನಮ್ಮ ದೇಶದಲ್ಲಿ ಊಳುವವನೆ ಭೂಮಿಯ ಒಡೆಯ –ಕಾಯ್ದೆಯು ಸರಿಯಾಗಿ ಜಾರಿಗೆ ಬರಲಿಲ್ಲ. ಬಂದಿದ್ದರೆ ಇಂದಿಗೂ ನೂರಾರು ಸಾವಿರಾರು ಎಕರೆ ಜಮೀನ್ದಾರರುಗಳು ಎಲ್ಲಿರುತ್ತಿದ್ದರು? ಅವರೇ ಇಂದು ಬಂಡವಾಳಶಾಹಿಗಳಾಗಿ ಲೋಕವನ್ನೇ ತಮ್ಮ ಮುಷ್ಠಿಯಲ್ಲಿಟ್ಟುಕೊಂಡಿರುವವರು ಅಲ್ಲವೇ?

ಬಸವಣ್ಣೆಪ್ಪ ಕಂಬಾರ ಅವರ 'ಸರ್ಕಸ್' ಎಂಬ ಕಥೆಯು ರೈತಪರ ಹೋರಾಟದ ಹಿಂದಿರುವ ಸ್ವಾರ್ಥಹಿತಾಸಕ್ತಿಗಳ ಹುನ್ನಾರವನ್ನು ಬಿಂಬಿಸುತ್ತದೆ. ಇದರ ಜೊತೆಗೆ ಜಾಗತೀಕರಣ ಸಂದರ್ಭದ ವ್ಯಕ್ತಿಯ ಹೋರಾಟದ ನೆಲೆ ಮತ್ತು ಅದರ ಮೂಲ ಸ್ವರೂಪವನ್ನು ಬಿಚ್ಚಿಡುತ್ತದೆ. ಸಮಾಜದಲ್ಲಿ ಚಳುವಳಿ, ಹೋರಾಟಗಳಂತಹ ಚಟುವಟಿಕೆಗಳಿಗೆ ಒಂದು ಮಹತ್ವದ ಸ್ಥಾನವಿದೆ. ಚಳುವಳಿ, ಸಂಪ, ಸತ್ಯಾಗ್ರಹ, ಹೋರಾಟಗಳೆಂದ ತಕ್ಷಣ ಸಮಾಜದ್ರೋಹದಂತಹ ಚಟುವಟಿಕೆಗಳ ವಿರುದ್ಧ ನಡೆಸುವ ಒಂದು ಕ್ರಿಯೆ ಎಂಬುದು ಸರ್ವೇಸಾಮಾನ್ಯವಾಗಿ ಗೊತ್ತಿರುವ ಸಂಗತಿ. ಅದೂ ಅಲ್ಲದೆ ಸ್ವಾತಂತ್ರ್ಯದ ಸಂದರ್ಭದಲ್ಲಿ ಇವುಗಳಿಗೆ ಬಹಳ ಪ್ರಾಮುಖ್ಯತೆಯನ್ನು ನೀಡಲಾಗಿತ್ತು. ಅಂದಿನ ಜನರು ನಿರಂತರವಾಗಿ ಇಂತಹ ಚಟುವಟಿಕೆಗಳಲ್ಲಿ ತೊಡಗಿಕೊಂಡಿದ್ದರಿಂದಲೇ ಭಾರತ ದೇಶವು ಬ್ರಿಟೀಷರಿಂದ ಸ್ವಾತಂತ್ರ್ಯವನ್ನು ಪಡೆಯಲು ಸಾಧ್ಯವಾಯಿತೆಂಬುದನ್ನು ಇತಿಹಾಸದ ಪುಟಗಳು ನಿರೂಪಿಸುತ್ತವೆ. ಆದರೆ ಇಂದಿನ ಹೋರಾಟಗಳಲ್ಲಿ ಇಂತಹ ಸದುದ್ದೇಶಗಳಿಗಿಂತ ದುರುದ್ದೇಶಗಳ ಪ್ರಮಾಣವೇ ಹೆಚ್ಚಾಗಿದೆ. ಜನರ ಭಾವನೆಯನ್ನು ಅಸ್ತ್ರವಾಗಿ ಬಳಸಿಕೊಳ್ಳುವ ಸ್ವಾರ್ಥಹಿತಾಸಕ್ತಿಗಳು ಅದನ್ನು ದುರುಪಯೋಗಪಡಿಸಿಕೊಳ್ಳುತ್ತಿವೆ. ಹೀಗಾಗಿ ಸ್ವಾತಂತ್ರ್ಯಪೂರ್ವ ಇದ್ದ ಹೋರಾಟದ ಕಲ್ಪನೆ ಇಂದು ಕಳೆಗುಂದುತ್ತಿದೆ. ಇಂದಿನ ಹೋರಾಟಗಳು ಹಿಂಸಾಚಾರದ ಕಡೆಗೆ ತಿರುಗಿಕೊಂಡಿವೆ. ಅಷ್ಟೇ ಅಲ್ಲದೆ ಸ್ವಯಂ ಪ್ರೇರಿತವಾಗಿ ಹೋರಾಟದಲ್ಲಿ ತೊಡಗಿಕೊಳ್ಳುತ್ತಿದ್ದ ಜನತೆ ಇಂದು ಯಾರದೋ ಬಲವಂತಕ್ಕೆ ಇಲ್ಲವೆ ಹಣ ಅಥವಾ ಯಾವುದೋ ಆಮಿಷಕ್ಕೆ ಒಳಗಾಗಿ ಅದರಲ್ಲಿ ಭಾಗವಹಿಸುತ್ತಿದ್ದಾರೆ. "ಮುತ್ಯಾ ಒಂದ ಮಾತ ಈಗ ಹೇಳತೀನಿ. ಆಮ್ಯಾಲೆ ಯಾಕ ಹೇಳಲಿಲ್ಲ ನಮಗ ಅನಬಾರ್ದ ನೋಡ... ನಾವು ರೈತರ. ನಾವು ಸಂಪ ಮಾಡಾಕ ಹೊಂಟೇವಿ. ಮಾರ್ಕೆಟಿನಾಗ ಹಾದ ಹೋಗತೀವಿ. ಅಲ್ಲಿಂದ ತಹಶೀಲದಾರ ಆಫೀಸಿನ ತನಕಾ ಎಲ್ಲಾರು ಮೆರವಣಿಗಿ ಹೋಗೋದು, ಅಲ್ಲಿ ತಹಶೀಲದಾರಗ ಮನವಿ ಅರ್ಜಿ ಕೊಟ್ಟ ಮ್ಯಾಲ ಸಂಪ ಮುಗಿತ್ಯೆತಿ. ಬಾಜೂಕಿನ ಹೋಟೆಲದಾಗ ಉಪ್ಪಿಟ ಚಾ ಮಾಡಿಸಿದಾರ. ಅದನ ತಿಂದು ನೀ ನಿನ್ನ ದವಾಖಾನಿಗಿ ಒಯ್ದು ಬಿಡಾಕ ಹೇಳತೀನಿ, ನೀ ಅತ್ತ ಹೋಗು, ನಾವ ನಮ್ಮ ಕೆಲಸಕ ಹೋಗ್ತೀವಿ... ನಿನಗ ಯಾಕ ಬಾ ಅಂತೀವಿ ಅಂದರ ಮೆರವಣಿಗೀಲಿ ಮಂದಿ ಕಾಣಬೇಕಲ್ಲಾ? ಯಾರ ಇದ್ದವರನ ಗ್ವಾಳೆ ಹಾಕೊಂಡ ಹೊಂಟೇವಿ. ಹೆಂಗ ಮಾಡತಿ ನೋಡು"[೩೨] ಇಂತಹ ಸಂಗತಿಗಳನ್ನು ಗಮನಿಸಿದಾಗ ಹೋರಾಟಗಳು ನಿಜವಾಗಿಯೂ ಅನ್ಯಾಯದ ವಿರುದ್ಧ ಹೂಡಿರುವಂತವುಗಳೆ? ಎಂಬ ಸಂಶಯವು ಹುಟ್ಟಿಕೊಳ್ಳುತ್ತದೆ.

ಸ್ವಾತಂತ್ರ್ಯ ಪೂರ್ವದಲ್ಲಿ ನಡೆಯುತ್ತಿದ್ದ ರೈತಪರ ಹೋರಾಟಗಳು ಭಾರತ ದೇಶವನ್ನು ಸ್ವಾತಂತ್ರ್ಯಗೊಳಿಸಲು ಪೂರಕವಾಗಿದ್ದವು. ಸ್ವಾತಂತ್ರ್ಯಾನಂತರ ೭೦ರ ದಶಕದಲ್ಲಿ ರೂಪುಗೊಂಡ ರೈತ ಚಳುವಳಿಗಳು, ರೈತರನ್ನು ಸಂಘಟಿಸಿ ಅವರ ಹಕ್ಕೊತ್ತಾಯಗಳನ್ನು ಸರ್ಕಾರ ಗೌರವಿಸಬೇಕೆಂಬ ನೈತಿಕ ಎಚ್ಚರವನ್ನು ಮೂಡಿಸಿದ್ದವು. ರೈತರ ಮೇಲೆ ನಡೆದ ಗೋಳಿಬಾರ್‌ಗೆ ಸರ್ಕಾರವೇ ಪತನವಾದ ಇತಿಹಾಸವನ್ನೂ ಕರ್ನಾಟಕ ನೋಡಿದೆ. ಆದರೆ ಆ ನಂತರದ ವಿದ್ಯಮಾನಗಳನ್ನು ಗಮನಿಸಿದರೆ, ರೈತಪರ ಹೋರಾಟ ಸಂಘಟನೆಗಳು ಕೂಡ ನುಚ್ಚು ನೂರು ಹೋಳಾಗಿ, ಅಧಿಕಾರ ಕೇಂದ್ರಿತ ರಾಜಕಾರಣದ ಭಾಗವಾಗುತ್ತ; ಬಂಡವಾಳವಾದದ ಕರವಸ್ತ್ರವಾಗುವ ಸ್ಥಿತಿ ತಲುಪಿತು. ಇದರಿಂದಾಗಿ ರೈತರ ಮೇಲೆ ಗೋಳಿಬಾರ್ ಆದರೆ ಸರ್ಕಾರ ಭದ್ರವಾಗುವ ಸ್ಥಿತಿ ಬಂತು. ಹೋರಾಟಗಾರರನ್ನು ಹೋರಾಟಗಳನ್ನು ಸರ್ಕಾರ ಖರೀದಿ ಮಾಡುತ್ತ ರಾಜಕಾರಣದ ಬಂಡವಾಳವಾದಕ್ಕೆ ಲಾಭದಾಯಕ ಉದ್ಯಮವಾಗಿ ಚಳುವಳಿಗಳನ್ನು ಬಳಸಿಕೊಳ್ಳಲಾರಂಭಿಸಿತು. ಅಂತಹ ದುರಂತವನ್ನು ಈ ಕಥೆ ಕಾಣಿಸುತ್ತದೆ. ಆದರೆ ಈಗಿನ ಹೋರಾಟಗಳು ರೈತರಿಗಾದ ಅನ್ಯಾಯವನ್ನು ಸರಿದೂಗಿಸಲು ನಡೆಯುತ್ತಿವೆ ಎಂದು ಮೂಲದಲ್ಲಿ ಬಿಂಬಿಸಲಾದರೂ ಅದರಿಂದ ರೈತರಿಗಾಗುವ ಲಾಭವಾದರೂ ಎಷ್ಟು? ಎಂಬುದು ಮುಖ್ಯವಾಗುತ್ತದೆ. ಜನರ ಹಿತಾಸಕ್ತಿಗಿಂತ ಅನಾನುಕೂಲತೆಯನ್ನೆ ಹೆಚ್ಚಿಸುವ ಇಂತಹ ಚಳುವಳಿಗಳು ಬೇಕೆ? ಹೋರಾಟಗಳು ಶಾಂತತೆಯಿಂದ ಜರುಗಿದರೆ ಯಾವ ಅನಾನುಕೂಲತೆಗಳು ಜರುಗುವುದಿಲ್ಲ. ಆದರೆ ಇಂದು ಅವು ಕ್ರೌರ್ಯತೆಯ ಸ್ವರೂಪವನ್ನು ಪಡೆದುಕೊಳ್ಳುತ್ತಿರುವುದರಿಂದ ಸಮಾಜದ ಶಾಂತತೆ ಕದಡುತ್ತಿದೆ. ಅದಕ್ಕಾಗಿ ಮುಂಜಾಗೃತಾ ಕ್ರಮಗಳ ಅವಶ್ಯಕತೆ ಇದೆ ಎನಿಸುತ್ತದೆ. ಹಾಗೆಂದ ಮಾತ್ರಕ್ಕೆ ಮುಂಜಾಗೃತಾ ಕ್ರಮಗಳು ಎಲ್ಲವನ್ನು ಸರಿದೂಗಿಸುವವತ್ತವೆಂದಲ್ಲ. ಅವುಗಳಿಂದಲೂ ಜನರಿಗೆ ಬಹಳ ಅನಾನುಕೂಲತೆಗಳು ಎದುರಾಗುತ್ತವೆ. "ಮಾರಾಯಾ ವಯಸ್ಸಾಗೆದ. ಹಿಂಬಾಲಕ ಯಾರರ ದೊಡ್ಡವರನ ಕರಕೊಂಡ ಬಂದಿಲ್ಲ...? ಇವತ್ತ ಗೊಕಾವಿಲಿ ಸಂಪ ಹೂಡಿದಾರ... ರೈತರದ ಚಳುವಳಿ ಅದ... ಬಸ್ಸ, ಲಾರಿ, ಕಾರು ಯಾವುದೂ ಊರಾಗ ಹೋಗಾಂಗಿಲ್ಲ... ಏನೆ ಇದ್ದರು ಊರ ಬಿಟ್ಟ ಮೂರ ಕಿಲೊಮೀಟರ ಹೊರಗ ನಿಲ್ಲತಾವ. ರೈತರು ತಾವ ಬೆಳೆದ ಬೆಳಿಗಿ ಸರಿಯಾದ ಬೆಲೆ ಸಿಗತಿಲ್ಲ. ನಮಗ ಸರಿಯಾಗಿ ಗೊಬ್ಬರ, ಬೀಜದ ಕಾಳು ಸಿಗತಿಲ್ಲ ಅಂತ ಸರ್ಕಾರದ ವಿರುದ್ಧ ಚಳುವಳಿ ಹೂಡಿದಾರ."[೩೩] ಎಂಬ ಮಾತುಗಳು ಇಂದಿನ ಹೋರಾಟಗಳ ಸ್ಥಿತಿಯನ್ನು ಬಿಂಬಿಸುತ್ತವೆ. ಹೀಗೆ ಜನರಿಗೆ ಅನಾನುಕೂಲತೆಯನ್ನು ತಂದೊಡ್ಡುವ ಇಂದಿನ

ಹೋರಾಟಗಳು ಹುಟ್ಟಿಕೊಳ್ಳುವುದಾದರು ಯಾವ ಕಾರಣಕ್ಕೆ? ಎಂಬುದು ಇಲ್ಲಿ ಮುಖ್ಯವೆನಿಸುತ್ತದೆ. ಇಂದು ರೈತ ಚಳುವಳಿಗಳು ರಾಜಕಾರಣಿಗಳ ಸ್ವಾರ್ಥದ ಮೂಲಕ ಚನೆಲ್‌ಗೊಳ್ಳುವ ಸ್ಥಿತಿ ಬಂದಿದೆ. ರಾಜಕಾರಣಿಗಳಿಗೆ ಇಂತಹ ಖರೀದಿಯ ಶಕ್ತಿಯನ್ನು ಕೊಟ್ಟಿದ್ದು ಬಂಡವಾಳವಾದ. ಹಣದ ಹರಿವು. ಅದರ ತಳಹದಿಯಾಗಿರುವ ಜಾಗತೀಕರಣ. ಈ ಹಿನ್ನಲೆಯಲ್ಲಿ ಗಮನಿಸಿದಾಗ ಜಾಗತೀಕರಣವು ನೇರ ಹೊಣೆಯಾಗುತ್ತದೆ. ಅಭಿವೃದ್ಧಿಯ ಹೆಸರಿನಲ್ಲಿ ಜಾರಿಗೆ ತರಲಾದ ರೈತಾಪಿವರ್ಗದಲ್ಲಿನ ಹೊಸ ಹೊಸ ಬದಲಾವಣೆಗಳು ಇಂತಹ ದುಸ್ಥಿತಿಯನ್ನು ರೈತನಿಗೆ ತಂದೊಡ್ಡಿವೆ. ಇದೆಲ್ಲದಕ್ಕೂ ಮೂಲ ಕಾರಣ ಉದ್ಯೋಗದಲ್ಲಿ ಮೂಲ ಪದ್ಧತಿಯನ್ನು ಮರೆತಿರುವ ರೈತ ಪರಾವಲಂಬಿಯಾಗಿರುವುದು. "ಮುತ್ತ್ಯಾ ಗಾಡಿ ಗೋಕಾಂವಿಗೆ ಹೊಂಟೆದ. ಆದರ ಗೋಕಾಂವಿ ಇಂದ ಬಂದ ಐತಿ ಗೊತ್ತಿಲ್ಲ ನಿನಗ...? ಸುತಮುತ್ತ ಹಳ್ಳಿ ರೈತರೆಲ್ಲ ಸೇರಿ ಸಂಪ ಹೂಡಿದಾರ. ರೈತ ಚಳವಳಿ ನಡೆದದ. ಬಿತ್ತಾಕ ಬೀಜದ ಕಾಳ ಸಿಗಾನಿಲ್ಲ. ಗೊಬ್ಬರ ಸಿಗಾನಿಲ್ಲ... ಎಲ್ಲ ತುಟ್ಟೀಲಿ ಮಾರಾತಾರ, ರೈತನ ಬೆಳಿ ಯಾಕ ಕಡಿಮಿ ರೇಟನಾಗ ತಗೋಳತಾರ... ಹೀಂಗಾದರ ನಾವ ಹೆಂಗ ಬದಕಬೇಕು...? ಅದಕ ಹೋಗೋದಕ್ಕ ಯಾವ ಗಾಡಿ ಇಲ್ಲ. ನೀ ನಮ್ಮ ಸಂಗಾಟ ಬಂದರ ನಿನ್ನ ದವಾಖಾನಿಗಿ ಬಿಡ್ತೀವಿ... ಬರತಿ..?"[೩೪] ಎಂಬುದು ಮೇಲಿನ ಮಾತನ್ನು ಸ್ಪಷ್ಟಪಡಿಸುತ್ತದೆ.

ರೈತನನ್ನು ಮುಂದಿಟ್ಟುಕೊಂಡು ತಮ್ಮ ಕಾರ್ಯಸಿದ್ಧಿಗೆ ಸಮಾಜದ್ರೋಹಿಗಳು ಮುಂದಾಗಿದ್ದಾರೆ. ಸದ್ದೇ ಇಲ್ಲದೆ ನಡೆಯುವ ಅವರ ಸ್ವಾರ್ಥ ರೈತನ ಗಮನಕ್ಕೆ ಬರಲು ಹೇಗೆ ಸಾಧ್ಯ? ಪರಾಧೀನನಾದ ಆತನಿಗೆ ಸರಿಯಾದ ವೇಳೆ ಹಾಗೂ ಪ್ರಮಾಣದಲ್ಲಿ ಬೀಜ, ಗೊಬ್ಬರ, ಹಣ ಕೈಗೆ ಸಿಗುತ್ತಿಲ್ಲ. ಅದರಿಂದಾಗಿ ಪ್ರತಿ ದಿನ ಒಂದಿಲ್ಲೊಂದು ತಾಪತ್ರಯದಲ್ಲಿ ಆತ ಸಿಲುಕಿಕೊಳ್ಳುತ್ತಿದ್ದಾನೆ. ತನ್ನಲ್ಲಿದ್ದ ಮೂಲ ಬೀಜಗಳನ್ನು ಕಳೆದುಕೊಂಡಿರುವ ರೈತ ಈಗ ತನ್ನ ಸ್ವತಂತ್ರ ಬದುಕಿಗೆ ಧಕ್ಕೆಯನ್ನು ತಂದುಕೊಂಡಿದ್ದಾನೆ. ಅಷ್ಟೇ ಅಲ್ಲ ತನ್ನ ಜೀವ ಮತ್ತು ಜೀವನಕ್ಕೂ ಕುತ್ತನ್ನು ತಂದುಕೊಂಡಿದ್ದಾನೆ. ಹೀಗಾಗಿ ಇಂದು ಆತನದು ಪ್ರತಿನಿತ್ಯ, ಪ್ರತಿಕ್ಷಣವು ಹೋರಾಟದ ಬದುಕಾಗಿದೆ. ಸಮಾಜದಲ್ಲಿನ ನಡವಳಿಕೆಗಳು ಆತನನ್ನು ಬಲವಂತವಾಗಿ ದೂಡುತ್ತಿವೆಯೆ? ರೈತರ ಆಯುಧವಾಗಿದ್ದ ಚಳುವಳಿಯನ್ನು ಅವನಿಂದ ಕಸಿದುಕೊಂಡು ಅವನ ವಿರುದ್ಧ ಪ್ರಯೋಗಿಸುವ ದುರಂತವನ್ನು ಕಥೆ ಕಾಣಿಸುತ್ತದೆ. ರೈತರು ಬಳಕೆಯ ಪದಾರ್ಥವಾಗಿದ್ದಾರೆ. ರೈತರ ಹೆಸರಿನಲ್ಲಿ ಪ್ರಮಾಣವಚನ ಸ್ವೀಕರಿಸುವುದೊಂದು ಶೋಕಿಯಾಗಿದೆ. ಎಂಬ ವಿಚಾರಗಳನ್ನು ಕಥೆಯು ಓದುಗನಲ್ಲಿ ಹುಟ್ಟಿಸುತ್ತಪ್ರಸ್ತುತ ರೈತರ ಬದುಕಿನ ಚಿತ್ರಣವನ್ನು ಅನಾವರಣಗೊಳಿಸುತ್ತದೆ.

ಸಂಪ, ದಂಗೆ, ಚಳುವಳಿ, ಹೋರಾಟಗಳು ದಿನದಿಂದ ದಿನಕ್ಕೆ ಒಂದೊಂದು ರೂಪದಲ್ಲಿ ಜನ್ಮ ತಾಳುತ್ತಿವೆ. ಒಂದಿಲ್ಲ ಒಂದು ಕಾರಣಕ್ಕೆ ಹುಟ್ಟಿಕೊಳ್ಳುವ ಇವುಗಳು ರೈತನ ಬದುಕಿನಲ್ಲಿಯೂ ಸಹಜವಾಗಿ ಬೆರೆತುಕೊಳ್ಳುತ್ತಿವೆ. ಮತ್ತೊಬ್ಬರ ಬಲವಂತದಿಂದಲೋ ಇಲ್ಲವೆ ಆಮಿಷಗಳಿಗೆ ಒಳಗಾಗಿಯೋ ನಡೆಯುವ ಹೋರಾಟಗಳು ಯಶಸ್ಸನ್ನು ಪಡೆಯುವುದು ವಿರಳ. ಒಂದು ವೇಳೆ ಯಶಸ್ಸನ್ನು ಪಡೆದರೂ ಅದರಿಂದ ಉಂಟಾದ ದುಷ್ಪರಿಣಾಮಗಳು ಬಹಳ ಘೋರವಾಗಿರುತ್ತವೆಂಬುದನ್ನು ಮರೆಯುವಂತಿಲ್ಲ. ದೇಶದ ಬೆನ್ನೆಲಬು ಎಂದೆನಿಸಿಕೊಳ್ಳುವ ರೈತನ ಬೆನ್ನೆಲಬನ್ನೆ ತುಂಡರಿಸುವಂತ ವಾತಾವರಣ ಇಂದು ಸೃಷ್ಟಿಯಾಗುತ್ತಿದೆ. ಚಳುವಳಿಯ ರೂಪದಲ್ಲಿ ನಡೆಸಲಾಗುವ ಗಲಭೆಗಳು ಅಮಾಯಕರನ್ನು ಬಲಿಪಶುಗಳನ್ನಾಗಿ ಬಳಸಿಕೊಳ್ಳಲಾಗುತ್ತಿದೆ. ಇದರಿಂದ ಎಷ್ಟೋ ಜನರ ಆತ್ಮಬಲಿದಾನ, ಹತ್ಯೆಗಳಂತ ಅನಾಹುತಗಳು ನಡೆದುಹೋಗುವುದಲ್ಲದೇ, ಎಷ್ಟೋ ಜನಸಾಮಾನ್ಯರು ತಬ್ಬಲಿಗಳು, ನಿರ್ಗತಿಕರು, ಅಂಗವಿಕಲರಾಗುವ ಪರಿಸ್ಥಿತಿ ನಿರ್ಮಾಣವಾಗುತ್ತದೆ. "ನೀವ ಸರಳ ಇಲ್ಲಿಂದ ಹೊರಡಲಿಲ್ಲಂದ್ರ ನಿಮ್ಮ ಮ್ಯಾಲ ಲಾಟಿ ಚಾರ್ಜ ಮಾಡಬೇಕಾಗತೈತಿ. ಟ್ರಾಫಿಕ್ ಬ್ಯಾರೆ ಜಾಮ ಆಗಾತೈತಿ... ಬೇಗ ಹೊಂಡ್ರೆಪಾ..."॥೩೫॥ ಅನ್ನುವುದಾಗಲಿ, "ಆ ಕಡೆಯಿಂದ ಢಂ... ಢಂ... ಅಂತ ಗುಂಡಿನ ಸದ್ದು ಬಂತು. ಅಯ್ಯೋ... ಸತ್ನೆಪಾ... ಅಯ್ಯೋ ಸತ್ನೆಪಾ... ವಿಚಿತ್ರ ಕೂಗು... ಒಬ್ಬರನ್ನೊಬ್ಬರು ತುಳಿದು ಜನ ಕಿತ್ತೆದ್ದು ಓಡಲಾರಂಭಿಸಿತು..."॥೩೬॥ ಇದು ಇಂದಿನ ಹೋರಾಟಗಳು ಮೊಟಕುಗೊಳ್ಳುವ ಸಂದರ್ಭದಲ್ಲಿ ಕಾಣಿಸಿಕೊಳ್ಳುವ ಸಾಮಾನ್ಯ ಸಂಗತಿಯಾಗಿದೆ. ಇದನ್ನು ಗಮನಿಸಿದಾಗ ಹೋರಾಟಗಳು ವ್ಯಕ್ತಿಬದುಕಿನಲ್ಲಿ ಯಾವ ಬಗೆಯ ಭಯವನ್ನು ಹುಟ್ಟಿಸಿವೆಂಬುದು ಸ್ಪಷ್ಟವಾಗುತ್ತದೆ.

ಇಂತಹ ಎಲ್ಲ ವಿಚಾರಗಳನ್ನು ರೈತ ಅರಿತಿದ್ದರೂ ಸ್ವತಃ ತಾನಾಗಿಯೇ ಸ್ವಾರ್ಥತೆಯಿಂದ ಕೂಡಿರುವ ಹೋರಾಟಗಳಲ್ಲಿ ಸೇರಿಕೊಳ್ಳಲು ಸಾಧ್ಯವೆ? ಸಾಧ್ಯವಿಲ್ಲವೆಂದು ಹೇಳುವುದಾದರೆ, ಆತನನ್ನು ಯಾರು ಅದರಲ್ಲಿ ಭಾಗಿಯಾಗುವಂತೆ ಮಾಡುತ್ತಿದ್ದಾರೆ? ಏಕೆಂದರೆ ರೈತಪರ ಹೋರಾಟಗಳಿಂದ ರೈತನಿಗೆ ಆಗುವ ಪ್ರಯೋಜನೆಯಗಳಿಗಿಂತ ಅಧಿಕಾರ ರಾಜಕಾರಣದ ಸ್ವಾರ್ಥಿಗಳ ಲಾಭದ ದೃಷ್ಟಿಕೋನ ಮುಖ್ಯವಾಗಿ ಗೋಚರಿಸುತ್ತಿದೆ. ಇಂತಹ ದೃಷ್ಟಿಕೋನ ವ್ಯಕ್ತಿಯ ಮನಸ್ಸಿನಲ್ಲಿ ನೆಲೆಯೂರಿರುವುದರಿಂದ ಇಂದು ದಿನದಿಂದ ದಿನಕ್ಕೆ ಹೋರಾಟಗಳು ಹೆಚ್ಚುತ್ತಿವೆ. ಇದರಲ್ಲಿ ವ್ಯಕ್ತಿಯ ಪ್ರತಿಷ್ಠೆ, ಪ್ರಚಾರಗಳಂತಹ ವಿಚಾರವು ಸೇರಿಕೊಂಡಿವೆ. ಇದರಿಂದಾಗಿ ಹೋರಾಟಗಳು ಇಂದು ಗಂಭೀರಸ್ಥಿತಿ ತಲುಪಿವೆ.

ಇಂತಹ ವಿಚಾರಗಳನ್ನು ಕಥೆಯು ಬಿತ್ತರಿಸುವುದರ ಜೊತೆಗೆ ಚಳುವಳಿಗಳು ಸಾಮಾನ್ಯ ಜನರ, ಮಕ್ಕಳ, ಮುದುಕರ ಜೀವನದ ಮೇಲೆ ಯಾವೆಲ್ಲ ಬಗೆಯ ಪರಿಣಾಮಗಳನ್ನು ಉಂಟುಮಾಡುತ್ತದೆ ಎಂಬುದನ್ನು ತಿಳಿಸುತ್ತದೆ. ಇದನ್ನೆಲ್ಲವನ್ನು ಗಮನಿಸಿದಾಗ ಘೋರ ಯುದ್ಧಗಳು ಸಂಭವಿಸಿದ ಸಂದರ್ಭದಲ್ಲಿ ಉಂಟಾಗುವ ರಣರಂಗ, ಊರಿನ ಮಧ್ಯದಲ್ಲಿಯೇ ನಿರ್ಮಾಣವಾಗುತ್ತಿದಯೇನೋ ಎಂದು ಭಾಸವಾಗುತ್ತದೆ. ಇಂತದ್ದೊಂದು ಸ್ಥಿತಿ ನಿರ್ಮಾಣವಾಗಲು ವಿಶ್ವದಾದ್ಯಂತ ವ್ಯಾಪಕವಾಗಿ ಜಾಗತೀಕರಣದ ಚಟುವಟಿಕೆಗಳು ಹರಡಿಕೊಂಡಿರುವುದೆ ಮೂಲ ಕಾರಣ. ವಿಕೃತ ಮನಸ್ಸುಳ್ಳ ಬಂಡವಾಳಶಾಹಿಗಳು ರೈತರ ಬದುಕಿನಲ್ಲಿ ಹೋರಾಟದ ಕಿಚ್ಚನ್ನು ಹಚ್ಚುತ್ತಿದ್ದಾರೆ. ಇದು ಮೇಲ್ನೋಟಕ್ಕೆ ರೈತಪರ ಹೋರಾಟವೆನಿಸಿದರೂ ಅದರಲ್ಲಿನ ಬೆಳವಣಿಗೆಗಳು ರೈತನನ್ನು ಇಕ್ಕಟ್ಟಿಗೆ ಸಿಲುಕಿಸುವ ಹುನ್ನಾರದಂತೆ ಗೋಚರಿಸುತ್ತವೆ. ಇದರ ಪ್ರಯೋಜನವನ್ನು ಅನಾಯಾಸವಾಗಿ ಬಂಡವಾಳಶಾಹಿಗಳು ಪಡೆಯುತ್ತಿದ್ದಾರೆ. ಇಲ್ಲಿ ರೈತ ನೆಪ ಮಾತ್ರಕ್ಕೆ ಬಳಕೆಯಾಗುತ್ತಿರುವುದರಿಂದ ರೈತ ಬಂಡಾಯಗಳು ಇಂದು ನೆಲಕಚ್ಚುತ್ತಿವೆ.

ಈ ಕತೆಗಳು ಜಾಗತೀಕರಣದ ಗಾಢಪ್ರಭಾವಕ್ಕೆ ಒಳಗಾದ ವ್ಯಕ್ತಿಯ ಬದುಕಿನ ಮೇಲೆ ಬೆಳಕು ಚೆಲ್ಲುತ್ತವೆ. ಸಮಾಕಾಲೀನ ಸಮಾಜದಲ್ಲಿ ವ್ಯಕ್ತಿಯ ಮನೋಧೋರಣೆ, ವೃತ್ತಿ, ಆರೋಗ್ಯ, ಹೋರಾಟದ ಪರಿಕಲ್ಪನೆ, ಶಿಕ್ಷಣ ವ್ಯವಸ್ಥೆಗಳಲ್ಲಿ ಮಾರ್ಪಾಡುಗಳಾಗಿವೆ. ಇವುಗಳಲ್ಲಾದ ಪರಿವರ್ತನೆ ಮೂಲಭೂತ ಮನುಷ್ಯಬದುಕಿಗೆ ಧಕ್ಕೆಯನ್ನುಂಟು ಮಾಡುವಂತದ್ದು. ಆರ್ಥಿಕ ಹಿನ್ನಡೆ, ಜಾತೀಯತೆ, ನಿರುದ್ಯೋಗಗಳಂತ ಅಡಚಣೆಗಳ ಮಧ್ಯೆಯು ಮಾನವೀಯ ಮೌಲ್ಯಗಳೊಂದಿಗೆ ಆರೋಗ್ಯಯುತ, ಪರಿಪೂರ್ಣವಾದ ಬದುಕನ್ನು ನಿರ್ಮಿಸಿಕೊಳ್ಳುವ ಎಲ್ಲ ಸದಾವಕಾಶಗಳಿದ್ದವು. ಸ್ವಾತಂತ್ರ್ಯ ಎಂಬುದು ತೃತೀಯ ರಂಗದೇಶಗಳಿಗೆ ಇಂತಹ ಅವಕಾಶವನ್ನು ದೊರಕಿಸಿಕೊಟ್ಟಿತ್ತು. ಆದರೆ ಸಾಮ್ರಾಜ್ಯಶಾಹಿ ಪ್ರತಿನಿಧಿ ದೇಶಗಳ ಷಡ್ಯಂತ್ರ ಆ ರಾಷ್ಟ್ರಗಳ ಮಾನಸಿಕ ಬಲವನ್ನು ಕುಂದಿಸಿತು. ಶ್ರೀಮಂತ ರಾಷ್ಟ್ರಗಳು ಪರಿಚಯಿಸಿದ ಆರ್ಥಿಕ ಸುಧಾರಣ ನೀತಿಗಳು ಬಡರಾಷ್ಟ್ರಗಳಲ್ಲಿನ ಪ್ರಾದೇಶಿಕತೆ ಗಡಿರೇಖೆಗಳನ್ನು ಮೀರಿನಿಲ್ಲುವಂತೆ ಮಾಡಿತು.

ಆರ್ಥಿಕ ಬಲಾಢ್ಯರಾಷ್ಟ್ರಗಳು ವಿಶ್ವದಾದ್ಯಂತ ತಮ್ಮ ಹಿಡಿತವನ್ನು ಸಾಧಿಸಲು ತಮ್ಮಲ್ಲಿನ ಶ್ರೀಮಂತಿಕೆಯನ್ನು ಪ್ರದರ್ಶಿಸತೊಡಗಿದರು. ಆ ಹಂತದಲ್ಲಿ ದೊರೆತ ಜನರ ಆಕರ್ಷಣೆ ಆರ್ಥವ್ಯವಸ್ಥೆಗೆ ಭದ್ರಬುನಾದಿಯನ್ನು ಹಾಕಿಕೊಟ್ಟಿದ್ದಷ್ಟೇಯಲ್ಲ ಅದಕ್ಕೆ ವಿಶ್ವಮಾನ್ಯತೆ

ದೊರಕುವಂತೆ ಮಾಡಿತು. ಅಂದಿನಿಂದ ಪ್ರಾರಂಭವಾದ ಆರ್ಥಿಕ ಬಲವರ್ಧನೆ ಇಂದಿನ ವರೆಗೂ ಮುಂದುವರೆದಿದೆ. ಇದರ ಮಧ್ಯದಲ್ಲಿ ಹುಟ್ಟಿಕೊಂಡ ಸಾಮಾಜಿಕ, ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ಧೋರಣೆಗಳು ವ್ಯಕ್ತಿ ಬದುಕಿನ ಚಿತ್ರಣವನ್ನು ಬದಲಿಸುತ್ತವೆ.

ಆಡುಕಾಯುವ ಹುಡುಗನ ದಿನಚರಿಯ ಪುಟಗಳಿಂದ ಕನ್ನಡ ಓದುಗ ಜಗತ್ತಿನ ಕದ ತಟ್ಟಿದ ಟಿ.ಎಸ್.ಗೊರವರ ಅವರದು ಉತ್ತರ ಕರ್ನಾಟಕದ ಅಪ್ಪಟ ಜನಪದ ಸಂವೇದನೆ. ಮಲ್ಲಿಗೆ ಹೂವಿನ ಸಖ ಎಂಬ ಕಥಾ ಸಂಕಲನದವರೆಗೆ, ಹಲವಾರು ಕಥೆಗಳ ಮೂಲಕ ಸಂವಹನ ಸಾಧ್ಯತೆಯನ್ನು ಏರ್ಪಡಿಸಿಕೊಂಡವರು. ಬದಲಾಗುತ್ತಿರುವ ಹಳ್ಳಿಯ ಬದುಕು – ಅವರ ಸಂವೇದನೆಯ ಕೇಂದ್ರ ಪ್ರಜ್ಞೆ, ಜರುಗುತ್ತಿರುವ ಬದಲಾವಣೆಯು ಇತ್ಯಾತ್ಮಕವಾಗಿದೆಯೇ? ಅಥವಾ ಮರಳಿ ಯಾವುದೋ ಹಿತಾಸಕ್ತಿಯ, ಯಾರದೋ ಅವಕಾಶವಾದದ ಹರಕೆಯ ಕುರಿಯಂತಾಗುತ್ತಿದೆಯೇ? ಎಂಬ ಪ್ರಶ್ನೆಯನ್ನು ಅವರ ಕಥೆಗಳು ಮರಳಿ ಮರಳಿ ಪ್ರವೇಶಿಸುತ್ತವೆ. ಅಭಿವೃದ್ಧಿ ಎಂದು ಯಾವುದನ್ನು ವಿವರಿಸಿಕೊಳ್ಳಲಾಗುತ್ತಿದೆಯೋ, ಅದು ಮನುಷ್ಯ ಪ್ರಜ್ಞೆಯ ವಿಕಾಸದ ಆಯಾಮವಾಗಿ ಯಾಕೆ ಒದಗುತ್ತಿಲ್ಲ ಎಂಬ ಚರ್ಚೆಯನ್ನು ಎತ್ತಿಕೊಳ್ಳುತ್ತಾರೆ.

ಪ್ರಸ್ತುತ 'ಭ್ರಮೆ' ನಗರ ಜೀವನದ ಪ್ರಭಾವದಿಂದ ಹಳ್ಳಿಗರು ತಮ್ಮ ಜೀವನ ಶೈಲಿಯಲ್ಲಿ ಬದಲಾವಣೆಗಳನ್ನು ಹೇಗೆ ಕಂಡುಕೊಂಡುಕೊಂಡಿದ್ದಾರೆ ಎಂಬುದನ್ನು ವಿಷದಪಡಿಸುತ್ತದೆ. 'ಭ್ರಮೆ' ಕಥೆಯಲ್ಲಿ ಭಾರತದ ಹಳ್ಳಿಗಳಲ್ಲಿ ಸಂಭವಿಸಿದ ಎಡಬಿಡಂಗಿ ಧೋರಣೆಗೂ, ಬಂಡವಾಳಶಾಹಿ ವ್ಯಾಪಾರೋದ್ಯಮದ ಸ್ವಾರ್ಥಕ್ಕೂ ಇರುವ ಸಂಬಂಧಕ್ಕೆ ಕನ್ನಡಿ ಹಿಡಿಯುತ್ತಾರೆ. ಅಂತರಂಗದಲ್ಲಿ ಸಂಪ್ರದಾಯದ ಸೆಳೆತ, ಬಹಿರಂಗದಲ್ಲಿ ಬಂಡವಾಳವಾದದ ಎಳೆತ ಇದು ಸದ್ಯದ ಗ್ರಾಮಭಾರತದ ವಾಸ್ತವ. ಜನರ ಆಲೋಚನಾ ವಿಧಾನವನ್ನು ಏನೇನೂ ಬದಲಿಸದೆ, ಬಂಡವಾಳವಾದ ಹಳ್ಳಿಗಳನ್ನೂ ತನ್ನ ಮಾರುಕಟ್ಟೆ ಏರಿಯಾ ಆಗಿ ಪರಿವರ್ತಿಸಿಕೊಂಡಿದೆ. ಇದರಿಂದ ಬಂಡವಾಳಶಾಹಿ ಗೆದ್ದಿದೆ. ಗ್ರಾಮಭಾರತ ಸೋತಿದೆ. ಸಂಪ್ರದಾಯವಾದಿಗಳ ಮನೋಭಾವ ಯಥಾವತ್ತಾಗಿದ್ದರೂ ಅವರ ಉಡುಗೆ, ತೊಡುಗೆ, ಆಹಾರ, ಆಟ ಮೊದಲಾದವುಗಳಲ್ಲಿ ನಗರದ ಶೈಲಿಯನ್ನೇ ಅಳವಡಿಸಿಕೊಳ್ಳುತ್ತಾರೆ. ಯಾವುದೇ ಹೊಸತೆನ್ನುವುದು ಮೊದಲು ನಗರವನ್ನು ಪ್ರವೇಶಿಸುತ್ತದೆ. ಆನಂತರ ಅದು ಹಳ್ಳಿಗಳಿಗೆ ದಾಳಿಯಿಟ್ಟು ಹೊಸ ವ್ಯವಸ್ಥೆಯಾಗಿ ಹಳೆಯ ಪದ್ಧತಿಯನ್ನು ಮರೆಮಾಚಿಸುತ್ತದೆ. ಹೀಗಾಗಿ ಹಳ್ಳಿಗಳು ನಗರ ಜೀವನಕ್ಕೆ ಒಗ್ಗಿಕೊಳ್ಳುವ ಎಲ್ಲ ಲಕ್ಷಣಗಳನ್ನು

ಮೈಗೂಡಿಸಿಕೊಳ್ಳುತ್ತಿವೆ. ಮಕ್ಕಳ ಆಟ-ಪಾಟಗಳಲ್ಲಿ ಬದಲಾವಣೆಗಳಾಗಿರುವುದನ್ನು ಗೊರವರ ಅವರು ಆಶ್ಚರ್ಯದಿಂದ ನೋಡುತ್ತಾರೆ.

'ಭ್ರಮೆ' ಕಥೆಯಲ್ಲಿ ಕಥಾನಾಯಕ ತನ್ನೂರಿಗೆ ರಜೆಕಳೆಯಲು ಹೋಗಿದ್ದನು. ಊರನ್ನು ಪ್ರವೇಶಿಸುತ್ತಿದ್ದಂತೆ ಅವನಿಗೆ ಆಶ್ಚರ್ಯ ಮತ್ತು ಸೋಜಿಗವನ್ನುಂಟು ಮಾಡುವ ಅನೇಕ ಸನ್ನಿವೇಶಗಳು ಕಾಣುತ್ತವೆ. ಊರಲ್ಲಿದ್ದ ಹಂಚಿನ ಮಾಳಿಗೆಯ ಮನೆಗಳನ್ನು ಕಾಂಕ್ರೇಟ್ ಆವರಿಸಿಕೊಂಡಿತ್ತು. ಸಗಣಿ, ಸುಣ್ಣದ ನೀರಿನಿಂದ ಕೂಡಿರುತ್ತಿದ್ದ ಮನೆಯ ಗೋಡೆಗಳು ವಿವಿಧ ಬಣ್ಣಗಳಿಂದ ರಾರಾಜಿಸುತ್ತಿದ್ದವು. ಹುಡುಗರು ಜೀನ್ಸ್‌ಪ್ಯಾಂಟ್ ಹಾಕಿದ್ದರು. ಹುಡುಗಿಯರು ದಾವಣಿ ಲಂಗಾದ ಬದಲಿಗೆ ಚೂಡಿ ಧರಿಸತೊಡಗಿದ್ದರು. ಟ್ಯಾಕ್ಟರ್‌ಗಳಲ್ಲಿ ಜನಪದ ಹಾಡುಗಳ ಸ್ಥಾನದಲ್ಲಿ ಸಿನೇಮಾ ಹಾಡುಗಳು ಕೇಕೆಹಾಕುತ್ತಿದ್ದವು. ಕೃಷಿಯನ್ನೆ ನೆಚ್ಚಿಕೊಂಡು ಬದುಕುತ್ತಿದ್ದ ಅಲ್ಲಿನ ರೈತರು ಹಳೆಯ ಪರಂಪರೆಯನ್ನು ಮರೆತು ಹೊಸ ವ್ಯವಸ್ಥೆಯೊಂದನ್ನು ರೂಢಿಸಿಕೊಂಡಿದ್ದರು. ಸುಗ್ಗಿಕಾಲದಲ್ಲಿ ಬಳಸುತ್ತಿದ್ದ ರಾಶಿ ಕಣಗಳು ಮಾಯವಾಗಿ ಟಾರು ರಸ್ತೆಯ ಮೇಲೆ ಒಕ್ಕಲುತನ ಮಾಡುವದನ್ನು ಕಲಿತಿದ್ದರು. ಹೀಗೆ ಅಣು ಅಣುವಿನಲ್ಲಿ ಹಳ್ಳಿಗಳು ನಗರವನ್ನು ಹೋಲುವಂತೆ ಬದಲಾವಣೆಗಳನ್ನು ಪಡೆದಿದ್ದವು. ಊರಿನ ಮನೆಗಳು, ಮನಸ್ಸುಗಳು, ರಸ್ತೆಗಳು, ವ್ಯಾಪಾರಗಳು, ವೃತ್ತಿಗಳು ಎಲ್ಲದರಲ್ಲೂ ಹಳೆಯದು ಮಾಯವಾಗಿ ಹೊಸತನವು ತುಂಬಿತ್ತು. ಆದರೆ ಅಲ್ಲೊಬ್ಬ ಮುದುಕಿಗೆ ಹಸಿವು ಮಾತ್ರ ಎಂದಿನಂತೆ ಕಾಡುತ್ತಿತ್ತು. ಅವಳು ನೇರವಾಗಿ ಇವನ ಹತ್ತಿರ ಬಂದು ಹಸಿವಿಗಾಗಿ ಅನ್ನವನ್ನು ಬೇಡುತ್ತಾಳೆ. ಆಕೆಗೆ ತನ್ನ ಮನೆಯಲ್ಲಿದ್ದ 'ಮಡಗೂಳ'ನ್ನು ನೀಡುತ್ತಾನೆ. ಇದರಿಂದ ಅವಳು ತೃಪ್ತಳಾದಂತೆ ನಕ್ಕು. ಅಲ್ಲಿಂದ ಹೊರಟು ಹೋಗುತ್ತಾಳೆ. ಆದರೆ ಕಥಾನಾಯಕನಿಗೆ ಅವಳ ನಗು ಮತ್ತು ನುಡಿ ಕಸಿವಿಸಿಗೆ ಒಳಪಡಿಸುತ್ತದೆ.

ಹಳ್ಳಿಯಲ್ಲಿ ಇಷ್ಟೆಲ್ಲಾ ಬದಲಾವಣೆ, ಹೊಸತನವನ್ನು ಕಂಡರೂ ಈ ಮುದುಕಿ ಏಕೆ ಹಸಿವಿಗಾಗಿ ಪರಿತಪಿಸುತ್ತಿದೆ? ಅಲ್ಲದೇ ಊರಿನ ಯಾರನ್ನೋ ಶಪಿಸುತ್ತಿದೆಯಲ್ಲ! ಎಂದು ಆಲೋಚಿಸುತ್ತಾನೆ. ಆಕೆಯನ್ನೇ ಹಿಂಬಾಲಿಸುತ್ತಾನೆ. ಅವನಿಗೊಂದು ಅಚ್ಚರಿ ಕಾಣಿಸುತ್ತದೆ. ಅವಳು ಊರ ಗೌಡನ ಮನೆಮುಂದೆ ನಿಂತು ಬೈಯುತ್ತಿದ್ದಾಳೆ. ಏಕೆಂದರೆ ಗೌಡನಿಂದಲೇ ತನ್ನ ಗಂಡ ಮತ್ತು ಮಗಳು ಸತ್ಯಾನಾಶವಾಗಿ ಹೋದರು. ಆಕೆಯ ಹೆಸರು ಸಾವಂತ್ರಿ. ಆಕೆಯ ಗಂಡ ಸಾಂತಪ್ಪ. ಇಬ್ಬರು ದಂಪತಿಗಳು ಊರ ಗೌಡನ ಹೊಲದಲ್ಲಿ ಜೀತದಾಳುಗಳಂತೆ ದುಡಿಯುತ್ತಿದ್ದರು. ಅದರಲ್ಲಿ ಅವರಿಗೆ ತೃಪ್ತಿಯಿತ್ತು.

ತುಂಬುಗರ್ಭಿಣಿಯಾಗಿದ್ದ ಸಾವಂತ್ರಿಗೆ ನೂರಾರು ಬಯಕೆ ಅವೆಲ್ಲವನ್ನು ಈಡೇರಿಸುವ ಆಸೆ ಬಡವನಾದ ಗಂಡನಿಗೆ. ಆದರೆ ಸಾಂತಪ್ಪ ಗೌಡನ ಹೊಲದಲ್ಲಿ ಜೋಳದ ತೆನೆಯನ್ನು ಕೊಯ್ಯಲು ಹೋಗಿ ಹಾವು ಕಡಿದು ಅಕಸ್ಮಾತಾಗಿ ಸಾಯುತ್ತಾನೆ. ಈ ಸುದ್ದಿ ಹೆರಿಗೆ ನೋವಿನಲ್ಲಿದ್ದ ಸಾವಂತ್ರಿಯ ಕಿವಿಗೆ ಬೀಳುವುದರೊಳಗಾಗಿ ಆಕೆ ಹೆಣ್ಣುಮಗುವಿಗೆ ಜನ್ಮ ನೀಡುತ್ತಾಳೆ. ಗಂಡನ ಸಾವು ನುಂಗಲಾರದ ಸಂಕಟವಾಗಿ ಕಾಡುತ್ತದೆ.

ಕೆಲವು ವರ್ಷಗಳು ಕಳೆದ ನಂತರ ಮಗಳು ಪಾರಿ ದೊಡ್ಡವಳಾಗುತ್ತಾಳೆ. ನೋಡಲು ಬಹಳ ಆಕರ್ಷಕಳಾಗಿದ್ದರಿಂದ ಗೌಡನ ಮಗ ಆಕೆಯನ್ನು ಸಮೀಪಿಸಿ ತನ್ನ ಕಾಮತೃಷೆಯನ್ನು ಈಡೇರಿಸಿಕೊಂಡು ಬಸಿರುಮಾಡುತ್ತಾನೆ. ಪಾರಿ ಮಾಡಿದ ಈ ಹಾದರಕ್ಕೆ ತಾಯಿ ಸಾವಂತ್ರಿ ಮತ್ತೊಮ್ಮೆ ದುಃಖದ ಮಡುವಿನಲ್ಲಿ ಬೀಳುತ್ತಾಳೆ. ಆದರೆ ಈ ಬಾರಿ ಆಕೆ ಮತ್ತೆ ಆ ಮಡುವಿನಿಂದ ಎದ್ದು ಸುಧಾರಿಸಿಕೊಳ್ಳುವುದಿಲ್ಲ. ಮಗಳಿಗಾದ ಅನ್ಯಾಯವನ್ನು ತಿಳಿಸಲು ಗೌಡನ ಬಳಿಹೋಗುತ್ತಾಳೆ. ಶಾಂತಿಯಿಂದ ಕೇಳಿದ ಗೌಡ ಮಗನದು ಯಾವುದೂ ತಪ್ಪಿಲ್ಲವೆಂದು ತನ್ನ ನಿರ್ಧಾರವನ್ನು ಹೇಳುತ್ತಾನೆ. ತಂದೆ ಮಗನದು ಒಂದೇ ಸ್ವಭಾವ ಮೇಲ್ನೋಟಕ್ಕೆ ಮಾತ್ರ ಸಾಚಾತನವನ್ನು ತೋರಿಸುವ ಊರಿನಗೌಡ 'ಕೆಳಜಾತಿಯಲ್ಲಿರುವ ಆಕೆಯ ಸಂಘ ಬೆಳೆಸಲು ತಲೆಕೆಟ್ಟಿದೆಯಾ?' ಎಂದು ಸಾವಂತ್ರಿಯನ್ನು ದಬಾಯಿಸಿ ಕಳಿಸುತ್ತಾನೆ. ಇಂತಹ ಗೌಡಕಿಯ ದೌರ್ಜನ್ಯದ ಪರಂಪರೆಯೇ ಕನ್ನಡದಲ್ಲಿದೆ. ಯಾಜಮಾನ್ಯ ಹೀಗೆ ತೇಪೆಸಾರಿಸುವ, ಮತ್ತು ಈ ಭಂಡವಾದಕ್ಕೆ ಕಾನೂನು ರಕ್ಷಣೆ ನೀಡಿದ ನಿದರ್ಶನವೂ ಭಾರತದಲ್ಲಿ ಆಗಿಹೋಗಿದೆ. ರಾಜಸ್ಥಾನದ ಭಾನ್ವರಿದೇವಿ ಘಟನೆಯಲ್ಲಿ ಸುಪ್ರೀಂಕೋರ್ಟೇ ಇಂತಹ ತಪ್ಪು ತೀರ್ಮಾನ ನೀಡಿದ ಮತ್ತು ಭಾರತೀಯ ಪ್ರಗತಿಪರರು ವಿರೋಧಿಸಿದ ದಾಖಲೆಯಿದೆ. ಅದೇ ಆಕ್ರೋಶದಲ್ಲಿ ಗೌಡನ ಮಗನನ್ನು ಮನ ಬಂದಂತೆ ಶಪಿಸತೊಡಗಿದಳು. ಪಾರಿಗೆ ತಾನು ಘೋರ ಅಪರಾಧ ಮಾಡಿದೆನೆಂದು, ತಾಯಿಯ ನೋವು, ದುಃಖಗಳನ್ನು ಹೆಚ್ಚಿಸಿದೆನೆಂದು ಅರಿವಾಗಿ ಬೆಂಕಿ ಹಚ್ಚಿಕೊಂಡು ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಪಾರಿ ಬೆಂಕಿಯಲ್ಲಿ ಬೆಯುತ್ತಿರುವುದನ್ನು ಕಂಡ ಸಾವಂತ್ರಿ ಮಾನಸಿಕ ಆಘಾತಕ್ಕೊಳಗಾಗಿ ಹುಚ್ಚಿಯಂತೆ ಊರಿನಲ್ಲೆಲ್ಲ ತಿರುಗಾಡುತ್ತ ಗೌಡನ ಮಗನ ಮೇಲೆ ಸೇಡು ತೀರಿಸಿಕೊಳ್ಳಲು ಹವಣಿಸುತ್ತಾಳೆ. ಇದು ಸಾವಂತ್ರಿಯ 'ಭ್ರಮೆ' ಎಂದು ಕಥಾನಾಯಕನ ಅಭಿಪ್ರಾಯ. ಏಕೆಂದರೆ ಹಳ್ಳಿಯ ಇಡೀ ಬದುಕಿನಲ್ಲಿ ಬದಲಾವಣೆಗಳು ನಡೆದರೂ ಗೌಡನ ಮತ್ತ ಅವನ ಮಗನ ನಡುವಳಿಕೆಯಲ್ಲಿ ಪರಂಪರೆಯಿಂದ ಮಾಡುತ್ತಲೇ ಬಂದ ದಬ್ಬಾಳಿಕೆಯು ತುಳಿತಕ್ಕೆ ಒಳಗಾದ ಒಂದು ಜನಾಂಗದ ಮೇಲೆ ನಿರಂತರವಾಗಿ ಇವತ್ತಿಗೂ

ನಡೆಯುತ್ತಿದೆ ಅಲ್ಲಾ! ಅದಕ್ಕೆ ಮುಕ್ತಿ ಇಲ್ಲವೇ? ಆಳು-ಅರಸನೆಂಬ ಭೇದವನ್ನು ನಗರ ಮತ್ತು ಹಳ್ಳಿಗಳಲ್ಲಿ ಉಳಿಸಿಕೊಂಡು ಬರುತ್ತಿರುವುದು ಗೌಡ ಮತ್ತು ಮಗನ ಸಂಕೇತವಾದರೆ. ಅದನ್ನು ಪ್ರತಿರೋಧಿಸುವುದು ಸಾವಂತ್ರಿಯ 'ಭ್ರಮೆ' ಎಂದು ಕಥಾನಾಯಕ ನಿರ್ಧರಿಸುತ್ತಾನೆ. ಊರು ಮೇಲ್ನೋಟಕ್ಕೆ ಸಾಕಷ್ಟು ಬದಲಾದರೂ, ಕೆಳಜಾತಿಯ ಬಡವರ ಮೇಲೆ ಅದರಲ್ಲೂ ಹೆಣ್ಣುದೇಹದ ಮೇಲೆ ನಡೆಯುವ ದೌರ್ಜನ್ಯದಲ್ಲಿ ಅಂತಹ ಬದಲಾವಣೆಗಳೇನೂ ಇಲ್ಲ. ಯಾಕೆಂದರೆ, ಜಮೀನ್ದಾರರೇ ನವವಸಾಹತುಶಾಹಿ ಕಾಲಘಟ್ಟದಲ್ಲಿ ಬಂಡವಾಳವಾದಿಗಳಾಗಿ ಬದಲಾಗಿದ್ದಾರೆ. ಈ ಅಧಿಕಾರಶಾಹಿ ಬದಲಾವಣೆಗಳು ಶ್ರೀಮಂತರನ್ನು ಶ್ರೀಮಂತರಾಗಿಸುತ್ತ; ಬಡವರನ್ನು ಬಡವರಾಗಿಸುತ್ತ ನಡೆದಿದೆ. ಇದರ ಪರಿಣಾಮವಾಗಿ ಸಾವಂತ್ರಿಯಂತಹ ಅಸಹಾಯಕ ಹೆಣ್ಣುಮಕ್ಕಳು ಮರಳಿ ಮರಳಿ ಭ್ರಮೆಗೆ ಒಳಗಾಗುತ್ತಲೇ ಇರಬೇಕಾಗಿದೆ. ಒಳ-ಹೊರಗುಗಳಿಗೆ ಸಂಬಂಧವೇ ಇಲ್ಲದ ಭಾರತದ ಪರಿಸ್ಥಿತಿಗೆ ಇದೊಂದು ನಿದರ್ಶನವಾಗಿದೆ. ಕಥೆ ಎಂಬ ಸಣ್ಣ ಗುಟುಕಿನಲ್ಲಿ ಭಾರತದ ದುರಂತವನ್ನು ಕಾಣಿಸುವ ಪ್ರಯತ್ನ ಇಲ್ಲಿದೆ.

ಮಂಜುನಾಥ ಲತಾರವರ 'ಪ್ರತಿಕೃತಿ' ಕಥೆಯು ಇಂದಿನ ಸಾಮಾಜಿಕ ಹೋರಾಟದ ಬದುಕಿನ ವಿಭಿನ್ನ ಮುಖಗಳನ್ನು ಪ್ರದರ್ಶಿಸುತ್ತದೆ. ಇಲ್ಲಿ ಜನರನ್ನು ವಂಚಿಸಿ, ಹಣ ಸಂಪಾದಿಸಿದವರ ಸಮುದಾಯವೊಂದು ಸಮಾಜದಲ್ಲಿ ತಲೆ ಎತ್ತುತ್ತಿರುವುದನ್ನು ತಿಳಿಸುವ ಪ್ರಯತ್ನವಿದೆ. ಅಂತಹ ವರ್ಗವು ತನ್ನ ಸಂಪತ್ತನ್ನು ಉಳಿಸಿಕೊಳ್ಳಲು ಹಲವು ವೇಷಗಳನ್ನು ಧರಿಸಿ ಸಮಾಜದ ಕಣ್ಣಿಗೆ ಮಣ್ಣೆರೆಚುವ ಪ್ರಯತ್ನದಲ್ಲಿ ಮುಂದುವರೆಯುತ್ತಿದೆ. ಗಳಿಸಿದ ಸಂಪತ್ತು ತಮ್ಮ ಕೈ ತಪ್ಪುವ ಲಕ್ಷಣಗಳು ಕಂಡಾಗ ಅಲ್ಲಿಂದ ಫಲಾಯನ ಮಾಡಿ, ಬೇರೊಂದುಕಡೆ ತಳ ಊರಲು ಪ್ರಾರಂಭಿಸುತ್ತದೆ. ಈ ರೀತಿಯ ಚಲನವಲನಗಳನ್ನು ಸೂಕ್ಷ್ಮವಾಗಿ ಗಮನಿಸಿದ ಕತೆಗಾರರು ಇದು ಹುಚ್ಚಾಟವೆಂದು ಅರಿತಂತಿದೆ. ಅದಕ್ಕಾಗಿಯೆ ಇಲ್ಲಿ ಹುಚ್ಚನನ್ನೆ ಪ್ರಮುಖ ಪಾತ್ರಧಾರಿಯನ್ನಾಗಿ ಬಳಸಿಕೊಂಡಿದ್ದಾರೆ. ಈತನ ಬಳಿ ಇದ್ದ ಸಂಪತ್ತಿನ ಬೆನ್ನುಬಿದ್ದ ಮಧ್ಯಮ ಸಮುದಾಯದ ಜನರ ಪರಿತಪಿಸುವಿಕೆ, ತಮಗೆ ದಕ್ಕದಿದ್ದಾಗ ಪಡುವ ವೇದನೆ, ಎಲ್ಲವೂ ಒಂದು ಬಗೆಯಲ್ಲಿ ವ್ಯರ್ಥ ಪ್ರಯತ್ನದಂತೆನಿಸುತ್ತದೆ. ಇಂತಹ ವ್ಯರ್ಥಪ್ರಯತ್ನಕ್ಕೆ ಕೈಹಾಕುವ ಜನರಿಗೆ ಕೊನೆಯಲ್ಲಿ ನಿರಾಸೆಯೊಂದೆ ದಕ್ಕುತ್ತದೆಂಬ ಮಹತ್ವದ ಸಂಗತಿಯೊಂದನ್ನು ಈ ಕಥೆಯು ಹೊರಹಾಕುತ್ತದೆ.

ಟಿ.ವಿ. ಮಾಧ್ಯಮವೊಂದರಲ್ಲಿ ಭಯೋತ್ಪಾದಕನೊಬ್ಬ ಮೈಸೂರು ಜಿಲ್ಲೆಯಲ್ಲಿ ನುಸುಳಿಕೊಂಡಿದ್ದಾನೆಂದು ಪ್ರಸಾರವಾಗುತ್ತದೆ. ಈ ಸುದ್ದಿಯನ್ನು ನೋಡಿದ ಗ್ರಾಮವೊಂದರ

ಪ್ರಮುಖರು ತಮ್ಮ ಊರಿನ ಹೋರಾಟಕ್ಕೆ ಈ ಸುದ್ದಿಯನ್ನು ಬಳಸಿಕೊಳ್ಳುತ್ತಾರೆ. ಭಯೋತ್ಪಾದಕನನ್ನೇ ಹೋಲುವ ಅರೆಬರೆ ಹುಚ್ಚನೊಬ್ಬ ತಮ್ಮೂರಿನಲ್ಲಿ ಅಲೆದಾಡುತ್ತಿದ್ದಾನೆಂದು ಸುಳ್ಳು ಸುದ್ದಿಯನ್ನು ಹಬ್ಬಿಸುತ್ತಾರೆ. ಈ ಕುತಂತ್ರಕ್ಕೆ ಕೆಂಚಪ್ಪ ಶೆಟ್ಟಿಯೇ ಪ್ರಧಾನ ನಾಯಕ. ಅವನ ನೇತೃತ್ವದಲ್ಲಿ ಗ್ರಾಮವೊಂದು ತಾಲೂಕಿಗಾಗಿ ಅನೇಕ ಹೋರಾಟಗಳನ್ನು ಮಾಡುತ್ತಾ ಬಂದಿರುತ್ತದೆ. ಅದಕ್ಕಾಗಿ ಅಪಾರ ಹಣವನ್ನು ಕಳೆದುಕೊಂಡಿರುತ್ತದೆ. ತಮ್ಮ ಹೋರಾಟಕ್ಕೆ ಬೇಕಾದ ಹಣ ಆ ಹುಚ್ಚನ ಬಳಿ ಇರಬಹುದೆಂದು ಆತನ ಹಿಂದೆ ಅಲೆದಾಡುತ್ತಾರೆ. ಅದು ವ್ಯರ್ಥ ಪ್ರಯತ್ನವಾಗುತ್ತದೆ. ಕೊನೆಗೆ ಹುಚ್ಚನ ಬಳಿಯಿದ್ದ ಗಂಟೊಂದನ್ನು ಹೋರಾಟದ ಪ್ರತಿಬಿಂಬವನ್ನಾಗಿ ಮಾಡಿ ಸುಟ್ಟು ಹಾಕುತ್ತಾರೆ. ಅದು ಊರಿನ ಪ್ರಮುಖರಿಗೆ ನಿರಾಸೆಯನ್ನುಂಟು ಮಾಡುತ್ತದೆ. ಇದು ಕಥೆಯ ಸಂಕ್ಷಿಪ್ತ ಸಾರಾಂಶ.

ನಾಗರಿಕತೆ ಎಷ್ಟೇ ಅಭಿವೃದ್ಧಿ ಹೊಂದಿರಲಿ ಗ್ರಾಮೀಣ ಸಮುದಾಯು ತನ್ನ ಮೌಢ್ಯತೆಯನ್ನು ಕೈಬಿಡುವುದಿಲ್ಲ. ಕೆಲವೇ ಕೆಲವರು ತಮ್ಮ ಸ್ವಾರ್ಥಕ್ಕಾಗಿ ತಮ್ಮ ಊರಿನ ಜನರನ್ನು ಮೂಢರನ್ನಾಗಿ ಮಾಡುತ್ತಾರೆ. ಮಾಧ್ಯಮಗಳು ಎಲ್ಲೋ ನಡೆದ ಪ್ರಸಂಗವನ್ನು ಪ್ರಸಾರ ಮಾಡಿದ್ದು ವೀಕ್ಷಿಸಿ ಅದು ತಮ್ಮ ಊರಿನದ್ದೇ ಎಂದು ಬಿಂಬಿಸುವ ಹುನ್ನಾರವು ಪ್ರಸ್ತುತ 'ಪ್ರತಿಕೃತಿ' ಕಥೆಯಲ್ಲಿ ವ್ಯಕ್ತವಾಗಿದೆ. ಇಲ್ಲಿ 'ಪ್ರತಿಕೃತಿ' ಎಂಬುದು ತಮ್ಮ ಆಕ್ರೋಶವನ್ನು ನಾಟಕೀಯವಾಗಿ ತೋರಿಸಲು ಹೋರಾಟ, ಚಳುವಳಿಗಳಲ್ಲಿ ಬಳಸುವ ಸಾಂಕೇತಿಕ ವಾಗಿದೆ. ಅಂತಹ 'ಪ್ರತಿಕೃತಿ' ಹುಚ್ಚನ ಗಂಟು. ಇದನ್ನು ಕೊನೆಯಲ್ಲಿ ಸುಟ್ಟು ಹಾಕುವ ಮೂಲಕ ಕಥೆಯು ಮುಕ್ತಾಯವಾಗುತ್ತದೆ. ಅಂದರೆ ಊರಿನ ಜನರ ಭ್ರಮೆಯೊಂದಕ್ಕೆ ಮುಕ್ತಿ ಒದಗುತ್ತದೆ.

ಊರಿನ ಪ್ರಮುಖರಾದ ಕೆಂಚಪ್ಪಶೆಟ್ಟಿ, ಭರಮ, ಹನುಮೇಗೌಡ, ಧನಪಾಲ, ಸುರೇಶಬಾಬು, ಚಿಕ್ಕರಾಜು, ರಾಜಣ್ಣ ಮೊದಲಾದವರು ಹೋರಾಟದ ನಾಯಕರಾಗಿ ಗುರುತಿಸಿಕೊಂಡಿರುತ್ತಾರೆ. ಇದನ್ನೇ ಅವರು ದುರುಪಯೋಗ ಪಡಿಸಿಕೊಂಡು ತಮ್ಮೂರಿನ ಜನಸಮುದಾಯಕ್ಕೆ ಮೋಸ ಮಾಡುತ್ತಾರೆ. ಅಷ್ಟೇ ಅಲ್ಲ ಸರಕಾರದ ವಿರುದ್ಧ ಹರತಾಳಗಳನ್ನು ಮಾಡುತ್ತಾರೆ. ಅದರಲ್ಲೂ ಕೆಂಚಪ್ಪ ಶೆಟ್ಟಿಯ ಕುತಂತ್ರ ಬುದ್ಧಿ, ಮುಂದಾಲೋಚನೆಗಳು ದುಷ್ಟಶಕ್ತಿಯ ಸಂಕೇತವಾಗಿ ಕಥೆಯಲ್ಲಿ ಮೂಡಿಬಂದಿದೆ. ತನ್ನ ಸಹಚರರನ್ನು ಹೋರಾಟಕ್ಕೆ 'ಛೂ...' ಬಿಡುವುದು ಮತ್ತು ಭರಮನಂಥವರನ್ನು ಹಣದಿಂದ ಬಾಯಿಮುಚ್ಚಿಸುವುದು ಅವನ

ಕೆಟ್ಟ ನಡತೆಯನ್ನು ತೋರಿಸುತ್ತದೆ. ಯಾವುದೇ ವಿಷಯವಾಗಲಿ ತಟ್ಟನೆ ಅರ್ಥೈಸಿಕೊಳ್ಳುವ ಶಕ್ತಿ ಕೆಂಚಪ್ಪಶೆಟ್ಟಿಗೆ ಇದ್ದುದರಿಂದಾಗಿಯೇ ಊರಿನಲ್ಲಿ ಮತ್ತೆ ಹೋರಾಟದ ಅಲೆ ಏಳುತ್ತದೆ.

ಊರಿನಲ್ಲಿ ಅಲೆದಾಡುತ್ತಿದ್ದ ಹುಚ್ಚನ ನಡಾವಳಿಗಳು ಆಶ್ಚರ್ಯಚಕಿತಗೊಳಿಸುತ್ತವೆ. ವೇಷಕ್ಕೆ ತಕ್ಕ ಭಾಷಣ, ಪ್ರತಿನಿತ್ಯ ಒಂದೊಂದು ವೇಷ, ಕ್ಷಣಕ್ಷಣಕ್ಕೊಮ್ಮೆ ದೇಶವನ್ನೋ, ಊರನ್ನು, ಹೆಂಡತಿಯನ್ನೋ ಕುರಿತು ಪ್ರತೀಕಾರದ ಮಾತುಗಳನ್ನು ಮಾಡುವುದು ಊರಿನ ಜನಸಮುದಾಯಕ್ಕೆ ಸೋಜಿಗವೆನಿಸುತ್ತದೆ. ಒಮ್ಮೊಮ್ಮೆ ಆತನನ್ನು ಅಪಹಾಸ್ಯಕ್ಕೂ ಒಳಪಡಿಸುತ್ತದೆ. ಇದರಿಂದ ಊರಿನ ಜನರ ಮೌಢ್ಯವನ್ನು ಅರಿಯಬಹುದು. ಯಾರೋ ಹೇಳಿದರೆಂದು ತಟ್ಟನೆ ನಂಬಿ ಆ ಹುಚ್ಚನ ಹಣಕ್ಕಾಗಿ ಹಪಹಪಿಸುವುದು ಅವರ ದುರಾಸೆಯನ್ನು ತೋರಿಸುತ್ತದೆ. ಇಲ್ಲಿಯ ನಾಗರಿಕರಿಗೆ ಸ್ವಿಸ್ ಬ್ಯಾಂಕ್ ಗೊತ್ತು, ಭಯೋತ್ಪಾದಕರು ಗೊತ್ತು, ಅವರ ನಡೆ, ನುಡಿ, ವೇಷ, ಭೂಷಣಗಳು, ಸೋಗುಗಳೆಲ್ಲವೂ ಗೊತ್ತು. ಆದರೆ ತಮ್ಮೂರನ್ನು ತಾಲೂಕು ಮಾಡಿಕೊಳ್ಳುವ ಬಗೆ ಗೊತ್ತಿಲ್ಲ. ಅದಕ್ಕಾಗಿ ಕಳ್ಳದಾರಿಗಳನ್ನು ರೂಪಿಸಿಕೊಳ್ಳುತ್ತಾರೆ.

"ಕಳೆದ ಐದಾರು ತಿಂಗಳ ಹಿಂದೆ ಮೈಸೂರು ಜಿಲ್ಲೆಗೆ ಪ್ರವೇಶ ಪಡೆದಿರುವ ಈ ವ್ಯಕ್ತಿ ಅಂತರಾಷ್ಟ್ರೀಯ ಭಯೋತ್ಪಾದಕನೋ, ದರೋಡೆಕೋರನೋ, ಗೂಢಚಾರನೋ ಆಗಿರಬಹುದೆಂಬ ಸುಳಿವೊಂದು ರಾಜ್ಯ ಗುಪ್ತಚರ ಇಲಾಖೆಗೆ ಸಿಕ್ಕಿದೆ. ಈತ ಜಿಲ್ಲೆಯ ಯಾವ ಮೂಲೆಯಲ್ಲಿ ಅಡಗಿಕೊಂಡಿದ್ದಾನೆಂಬುದರ ತನಿಖೆಯನ್ನು ಆರಂಭಿಸಿರುವ ಪೊಲೀಸರು ಅವನಿಗಾಗಿ ತೀವ್ರ ಶೋಧ ಕೈಗೊಂಡಿದ್ದರೆ. ಎಲ್ಲಕ್ಕಿಂತ ಹೆಚ್ಚಾಗಿ ಪೊಲೀಸರ ತಲೆಕೆಡ್ಸಿರೋದು ಅಂದ್ರೆ ಆತನ ಬಳಿ ಇದೆಯೆನ್ನಲಾಗುತ್ತಿರುವ ಅಪಾರ ಪ್ರಮಾಣದ ಹಣ ಹಾಗೂ ಚಿನ್ನಾಭರಣ... ಅದರಲ್ಲಿ ಇತ್ತೀಚೆಗೆ ತಮಿಳುನಾಡಿನ ಪ್ರಖ್ಯಾತ ದೇವಸ್ಥಾನವೊಂದರಲ್ಲಿ ಕಳುವಾದ ವಜ್ರದ ಕಿರೀಟವೂ ಸೇರಿರಬಹುದು"[೩೭]ಎಂಬ ಸುದ್ದಿಯಲ್ಲಿ ವ್ಯಕ್ತಿಯೊಬ್ಬನ ಭಾವಚಿತ್ರವು ತಮ್ಮನೂರಿನಲ್ಲಿನ ಹುಚ್ಚನನ್ನು ಹೋಲುತ್ತದೆ ಎಂದು ಕೆಂಚಪ್ಪ ಶೆಟ್ಟಿ ಹಬ್ಬಿಸುತ್ತಾನೆ. ಕೊನೆಗೆ ಹುಚ್ಚನ ಬಳಿಯ ಗಂಟು ಹೋರಾಟಗಾರರ ಕೈಯಲ್ಲಿ ಸಿಕ್ಕು 'ಪ್ರತಿಕೃತಿ ದಹನ'ದಂತೆ ಸುಟ್ಟಾಗ ವ್ಯಥೆ ಪಡುತ್ತಾನೆ. ತಾನು ಮಾಡಿದ ಯೋಚನೆ, ಯೋಜನೆ ಹಾಳಾಯಿತೆಂದು ಕೊರಗುತ್ತಾನೆ.

"ಆತ ಹುಚ್ಚನ ಹಾಗೆ ಗಡ್ಡ, ತಲೆಗೂದಲು ಬೆಳೆಸಿಕೊಂಡಿದ್ದರೂ ದಿನಕ್ಕೊಂದು ಬಗೆಯ ಬಟ್ಟೆಗಳನ್ನು ಧರಿಸುತ್ತಾನೆ. ಪ್ರತಿದಿನವೂ ಅವನದು ಒಂದೊಂದು ಬಗೆಯ

ಬಟ್ಟೆಗಳನ್ನು ಧರಿಸುತ್ತಾನೆ. ಪ್ರತಿದಿನವೂ ಅವನದು ಒಂದೊಂದು ವೇಷ. ಒಂದು ದಿನ ಆತ ಸೂಟು, ಬೂಟು ಹಾಕ್ಕೊಂಡಿದ್ರೆ ಇನ್ನೊಂದಿನ ವಕೀಲರ ವೇಷ, ಒಂದಿನ ಅಯ್ಯಪ್ಪ ಭಕ್ತನ ಬಟ್ಟೆ, ಇನ್ನೊಂದು ದಿನ, ಪೊಲೀಸರ ಡ್ರೆಸ್, ಆದರೆ ಕ್ಯಾಪ್ ಮಾತ್ರ ಇಲ್ಲ... ಮತ್ತೊಂದು ದಿನ ಮಠಾಧಿಪತಿಗಳ ಹಾಗೆ ಕಾವಿ ತೊಟ್ಟು ಓಡಾಡುತ್ತಾನೆ... ಈ ವೇಷಗಳನ್ನೂ ತೊಟ್ಟಾಗಲೂ ಅವನ ಬಳಿ ಬೃಹದಾಕಾರದ ಒಂದು ಬಟ್ಟೆಯ ಗಂಟು ಮಾತ್ರ ಇದ್ದೇ ಇರುತ್ತದೆ.”[೩೮] ಎಂದು ಹೇಳಿದ ಮಾತುಗಳು ತಮ್ಮೂರಿನಲ್ಲಿರುವ ಹುಚ್ಚನಂತೆ ತಿರುಗಾಡುವವನೇ ಪೊಲೀಸರಿಗೆ ಬೇಕಾಗಿರುವ ವ್ಯಕ್ತಿಯೆಂದು ನಂಬಲು ಪ್ರಮುಖವಾದವುಗಳಾಗಿ ಗೋಚರಿಸುತ್ತದೆ. ಊರಿನಲ್ಲಿರುವ ಹುಚ್ಚನು ಇದೇ ತೆರನಾಗಿ ವರ್ತಿಸುತ್ತಿದ್ದರಿಂದ ಆತನೆ ಆ ವ್ಯಕ್ತಿಯೆಂದು ನಂಬಿಕೊಂಡರು. ಅಲ್ಲದೇ ಅವನ ಗಂಟಿನಲ್ಲಿ ಅಪಾರವಾದ ಹಣವಿದೆ ಎಂಬ ಸುಳ್ಳು ಸುದ್ದಿ ನಂಬಿ ಕಾವಲು ಕುಳಿತರು. ಇತ್ತ ತಮ್ಮೂರನ್ನು ತಾಲೂಕು ಕೇಂದ್ರವನ್ನಾಗಿ ಮಾಡಬೇಕೆಂದು ಹೋರಾಟ ನಿರಂತರವಾಗಿ ನಡೆದಿತ್ತು. ಅದರ ಮೇಲು ಉಸ್ತುವಾರಿಯನ್ನು ಕೆಂಚಪ್ಪಶೆಟ್ಟಿ ಹಾಗೂ ಆತನ ಸಂಗಡಿಗರು ನೋಡಿಕೊಳ್ಳುತ್ತಿದ್ದರು. ತಮ್ಮೂರಿಗೆ ತಾಲೂಕು ಕೇಂದ್ರ ಮಾಡಲು ಬೇಕಾದ ಎಲ್ಲ ಲಕ್ಷಣಗಳು ಇವೆ ಎಂದು ಸಾಕಷ್ಟು ಹೋರಾಟಗಳನ್ನು ಮಾಡಿಕೊಂಡು ಬಂದಿದ್ದರು. ಆದರೆ ಸರ್ಕಾರ ಹಿಂದೆ ಪ್ರಕಟಿಸಿದ ಹೊಸತಾಲೂಕುಗಳ ಪಟ್ಟಿಯಲ್ಲಿ ಈ ಊರನ್ನು ಸೇರಿಸಿರಲಿಲ್ಲ. ಇದು ಆ ಹೋರಾಟಗಾರರ ಕೆಂಗಣ್ಣಿಗೆ ಗುರಿಯಾಗುವಂತೆ ಮಾಡಿತ್ತು. ಅದಕ್ಕಾಗಿ ಸರ್ಕಾರದ ನಡೆಯನ್ನು ಗಮನಿಸಿ ಅದರ ವಿರುದ್ಧ ಹಲವು ಪ್ರತಿಭಟನೆಗಳನ್ನು ನಿರಂತರವಾಗಿ ಹಮ್ಮಿಕೊಂಡಿದ್ದರು. ಅದಕ್ಕಾಗಿ ಸರ್ಕಾರದ ಪ್ರತಿಕೃತಿಯನ್ನು ದಹನ ಮಾಡಲು ನಿರ್ಧರಿಸಿದ್ದರು. ಅದು ಯಾವುದೇ ಪ್ರತಿಕೃತಿಗಳು ಸಿಗದಿದ್ದ ಕಾರಣಕ್ಕೆ ಹುಚ್ಚನ ಗಂಟೇ ಸರ್ಕಾರದ ಪ್ರತಿಕೃತಿಯಾಗಿ ದಹನಗೊಂಡಿತು.

ಒಂದು ಸಮುದಾಯದ ಬೇಡಿಕೆಗಳಿಗಾಗಿ ನಡೆಯುವ ಹರತಾಳಗಳು, ಚಳುವಳಿಗಳು, ಹೋರಾಟದ ಪ್ರಮುಖ ಅಸ್ತ್ರವಾಗಿವೆ. ತನ್ನ ನ್ಯಾಯಕ್ಕಾಗಿ, ಹಕ್ಕಿಗಾಗಿ ಮಾಡುವ ಈ ಹೋರಾಟಗಳು ಸಮಾಜದಲ್ಲಿ ದಿನೆ ದಿನೆ ಒಂದಿಲ್ಲ ಒಂದುಬಗೆಯಲ್ಲಿ ಉದ್ಭವಿಸುತ್ತಲೇ ಇರುತ್ತವೆ. ಅಂಥ ಒಂದು ಹೋರಾಟದ ಸ್ವರೂಪವನ್ನು 'ಪ್ರತಿಕೃತಿ' ಒಳಗೊಂಡಿದೆ. ಕೆಲವರು ಅದನ್ನೆ ವೃತ್ತಿಯನ್ನಾಗಿ ಮಾಡಿಕೊಂಡಿದ್ದಾರೆ. ಅದಕ್ಕಾಗಿ ಹಣದ ಮೂಲಗಳನ್ನು ಶೋಧಿಸುತ್ತಿದ್ದಾರೆ. ಕಾಳಧನಿಕರನ್ನು ಗುರುತಿಸಿ ಅವರಿಂದ ಹಣ ಪಡೆದು ಹೋರಾಟದ ಕಿಚ್ಚನ್ನು ಹಚ್ಚಲು ಮುಂದಾಗುತ್ತಿದ್ದಾರೆ. ಇದು ಸಮಾಜದಲ್ಲಿನ ಸತ್ಯವನ್ನು ಮರೆಮಾಚಿ

ಮೌಢ್ಯವೇ ಬೆಳೆಯಲು ಕಾರಣವಾಗುತ್ತಿದೆ. ಜನರನ್ನು ವಂಚಿಸಿ ಗಳಿಸಿದ ಸಂಪತ್ತು ವಿದೇಶದಲ್ಲಿ ಭದ್ರವಾಗಿರುವುದು, ಯಾರಿಗೂ ಕಾಣದಂತೆ ಮರೆಯಲ್ಲಿ ಬಚ್ಚಿಟ್ಟುಕೊಂಡಿರುವ ಸಮಾಜಘಾತಕರ ನೈಜ ಬಣ್ಣವನ್ನು 'ಪ್ರತಿಕೃತಿ'ಯು ಬಿಂಬಿಸುತ್ತದೆ. ಸಮಾಜದ ಪ್ರಮುಖ ನೆಲೆಗಳಲ್ಲಿ ಜನರನ್ನು ವಂಚಿಸುವ ಕ್ರಿಯೆಗಳು ಕಥೆಯಲ್ಲಿ ಸಹಜವಾಗಿ ವ್ಯಕ್ತಗೊಂಡಿವೆ. ಮುಖವಾಡ ಧರಿಸಿದ ನಯವಂಚಕರು ಅವುಗಳನ್ನು ದುರುಪಯೋಗ ಪಡಿಸಿಕೊಳ್ಳುತ್ತಿದ್ದಾರೆಂದು ಹುಚ್ಚನ ವೇಷಗಳಿಂದ ನಡೆ, ನುಡಿಗಳಿಂದ ಸಾಕಷ್ಟು ನಿದರ್ಶನಗಳು ಈ ಕಥೆಯಲ್ಲಿ ಮೂಡಿಬಂದಿವೆ. ಹೀಗೆ ಜಾಗತೀಕರಣಕ್ಕೆ ಒಗ್ಗಿಕೊಂಡ ಸಮುದಾಯದ ಬದುಕನ್ನು ಈ ಕಥೆ ಚಿತ್ರಿಸುತ್ತದೆ.

**೫.೪. ಬೆಂಕಿಗೆ ಚಿಮುಕಿಸಿದ ಹನಿಗಳು:**

ಜಾಗತೀಕರಣ ಕಾಲಘಟ್ಟದ ಕನ್ನಡ ಸಣ್ಣಕಥೆಗಳ ಮುಖ್ಯ ಪ್ರವೃತ್ತಿಯನ್ನು ಗಮನಿಸಿದಾಗ, ಇವುಗಳನ್ನು ನಿಸ್ಸಂಶಯವಾಗಿಯೂ ಕೋಮುವಾದಿ ವಿರೋಧಿ ಕಥೆಗಳೆಂದು ಕರೆಯಬಹುದು. ಈ ಅವಧಿಯಲ್ಲಿ ಭಾರತೀಯ ಸಮಾಜ, ಸ್ವತಂತ್ರ ಭಾರತದ ಬಹುದೊಡ್ಡ ಕೋಮು ದಂಗೆಗಳಿಗೆ ಒಳಗಾಯಿತು. ಇನ್ನೂ ಭಯಾನಕವಾದ ವಿಷಯವೆಂದರೆ, ಕೋಮುಭಾವನೆಯು ಸಾಮಾಜಿಕ ಬದುಕಿನ ಸಹಜ ಲಹರಿಯೇ ಆಗಿಬಿಟ್ಟಿತು. ವಸಾಹತು ಪೂರ್ವದ ಭಾರತದಲ್ಲಿ ಬಹುಸಾಂಸ್ಕೃತಿಕ ಧಾರೆಗಳ ಗಾಢವಾದ ಬೆಸುಗೆಯಿತ್ತು. ಸಾವಿರಾರು ವರ್ಷಗಳಿಂದ ಈ ನೆಲವನ್ನು ಆಳಲೆಂದು, ವ್ಯಾಪಾರ ಮಾಡಲೆಂದು, ಅಧ್ಯಯನ ಮಾಡಲೆಂದು, ಲೂಟಿ ಮಾಡಲೆಂದು, ಆಧ್ಯಾತ್ಮಿಕ ಶೋಧನೆಗೆಂದು ಬಂದವರ-ಹೋದವರ ಇರ ಬರುವಿಕೆಯ ಕಾರಣದಿಂದ ಸಂಕರಶೀಲ ಗುಣಧರ್ಮವು ರೂಪಿತವಾಗಿತ್ತು. ಭಾಷೆ, ಸಂಗೀತ, ಚಿತ್ರಕಲೆ, ವಾಸ್ತುಶಿಲ್ಪ, ಸಾಹಿತ್ಯ, ಸಂಸ್ಕೃತಿ, ಊಟ, ಉಡುಗೆ...... ಹೀಗೆ ಬದುಕಿನ ಎಲ್ಲ ಮಗ್ಗಲುಗಳಲ್ಲಿಯೂ ಅಂತಹ ಅವಿಭಕ್ತ ಗುಣಧರ್ಮವನ್ನು ನೋಡುತ್ತೇವೆ. ಭಾರತೀಯ ಸಂಸ್ಕೃತಿಯನ್ನು ಶುದ್ಧರೂಪವಾಗಿ, ಏಕಮಾದರಿಯಾಗಿ ಪರಿಷ್ಕರಿಸುವುದು ಕಷ್ಟ ಮತ್ತು ಹಾಸ್ಯಸ್ಪದ. ಬಹುತ್ವವೇ ಭಾರತದ ನೀತಿ. ಈ ಸಂಸ್ಕೃತಿಯನ್ನು ಗೌರವಿಸುವುದು ಎಂದರೆ ಅದರ ಇಡಿಕಿರಿದ ಈ ಗುಣವನ್ನು ಇರುವಂತೆಯೇ ಸ್ವೀಕರಿಸುವುದಾಗಿತ್ತು. ದೇಶದ ಸ್ವಾತಂತ್ರ್ಯ ಚಳುವಳಿಯನ್ನು ಹತ್ತಿಕ್ಕಬೇಕೆಂಬ ವಸಾಹತುಶಾಹಿ ರಾಜಕಾರಣವು, ಇತಿಹಾಸವನ್ನು ರಾಷ್ಟ್ರೀಯವಾದಿ ಧೋರಣೆಯೊಂದಿಗೆ ನಿರ್ವಚಿಸಿತು. ಹಿಂದೂರಾಷ್ಟ್ರ ಎಂಬ ಪರಿಕಲ್ಪನೆಯು ಈ ಹಂತದಲ್ಲಿ ಕಾಣತೊಡಗಿತ್ತು. ಗಾಂಧೀಜಿ ಮಂಡಿಸುವ ಹಿಂದೂರಾಷ್ಟ್ರ ಎಂಬ

ಪರಿಕಲ್ಪನೆಗೂ, ರಾಷ್ಟ್ರೀಯ ಸ್ವಯಂ ಸೇವಕ ಸಂಘವು ಮಂಡಿಸುವ ಹಿಂದೂರಾಷ್ಟ್ರದ ಪರಿಕಲ್ಪನೆಗೂ ಸಾಕಷ್ಟು ವ್ಯತ್ಯಾಸವಿತ್ತು. ಮ್ಯಾಕ್ಸ ಮ್ಯುಲರ್‌ನ ಇತಿಹಾಸವು ರಾಜಪ್ರಭುತ್ವದ ಕಾಲದಲ್ಲಿ ನಡೆದ ಆಂತರಿಕ ಮತ್ತು ಹೊರಗಿನ ಆಕ್ರಮಣಗಳನ್ನು ಧರ್ಮದ ಮೂಲಕ ವ್ಯಾಖ್ಯಾನಿಸಿದ್ದರಿಂದ; ಧಾರ್ಮಿಕ ಅಸಹನೆಯು ಒಂದು ಸಹಜ ಪ್ರವೃತ್ತಿಯಂತೆಯೇ ಮುಂದುವರಿಯಿತು. ಭಾರತ-ಪಾಕಿಸ್ತಾನ ವಿಭಜನೆಯು ಈ ಅಸಹನೆಯನ್ನು ಇನ್ನಷ್ಟು ಆಳದ ಮಾಯದ ಗಾಯವಾಗಿಸಿತು. ಸ್ವಾತಂತ್ರ್ಯಾನಂತರದ ಭಾರತ ಈ ಗಾಯವನ್ನು ಮಾಯಿಸುವ ಮದ್ದು ಹುಡುಕತೊಡಗಿತ್ತು. ನಮ್ಮ ಹೆಮ್ಮೆಯ ಸಂವಿಧಾನ ಭಾರತವನ್ನು ಸರ್ವತಂತ್ರ ಸ್ವತಂತ್ರ ಗಣರಾಜ್ಯವಾಗಿ ಮಾತ್ರವಲ್ಲದೆ, ಐಕ್ಯತೆ ಮತ್ತು ಭ್ರಾತೃತ್ವವನ್ನು ಧರ್ಮವಾಗಿಸಿಕೊಂಡ ಬಹುತ್ವದ ನೆಲೆ ಎಂದು ಸ್ಥಾಪಿಸಿತು. We the people of India ಎನ್ನುವುದು ಸ್ವತಂತ್ರ ಭಾರತದ ಅತ್ಯಮೂಲ್ಯ ಆತ್ಮಸಮ್ಮಾನದ ಘೋಷಣೆಯಾಗಿತ್ತು. ಆದರೆ ಭಾರತದ ಈ ಕನಸನ್ನು ಕೊಲೆಮಾಡುವ ಕೈಗಳು ಹತಾರವನ್ನು ಮಸೆಯುತ್ತಲೇ ಇದ್ದವು. ಮಹಾತ್ಮ ಗಾಂಧೀಜಿಯನ್ನು ಹೊಡೆದ ಗೋಡ್ಸೆಯ ಗುಂಡುಗಳು ಇದರ ಮೊದಲ ಪ್ರಯೋಗವಾಗಿತ್ತು. ಆಗಾಗ ದೇಶದಲ್ಲಿ ವ್ಯಾಪಾರ-ವಹಿವಾಟಿನ ಲಾಭದ ಪ್ರಶ್ನೆ ಮುಖ್ಯವಾದಂತೆಲ್ಲ ಅದು ಕೋಮುದಂಗೆಯ ಸ್ವರೂಪವನ್ನು ಪಡೆದುಕೊಳ್ಳುವುದು ಸಹಜವಾಗಿತ್ತು.

ಆದರೆ, ಜಾಗತೀಕರಣದ ಬಂಡವಾಳವಾದವು ಯಾವ ಅಡೆತಡೆಯಿಲ್ಲದ ಹಣದ ಹರಿವಾಗಿ ಪ್ರವಹಿಸುವಾಗ, ಅದರ ಆಘಾತಕ್ಕೆ ತತ್ತರಿಸಿದ್ದು ಈ ನೆಲದ ಸೌಹಾರ್ದ ಪರಂಪರೆಯಾಗಿತ್ತು. ರಾಜಕಾರಣವು ತನ್ನ ನೈತಿಕ ಮುಖವಾಡದ ಅಗತ್ಯ ಕೂಡ ಇಲ್ಲದಂತೆ, ಹಣ ಹೂಡಿಕೆ ಮತ್ತು ಲಾಭದ ಕೋಟ್ಯಂತರ ಬಂಡವಾಳದ ಉದ್ಯಮ ಎಂಬ ಸ್ವರೂಪವನ್ನು ಪಡೆಯುತ್ತಿದ್ದಂತೆ; ಅದನ್ನು ಕಾರ್ಯರೂಪಕ್ಕೆ ತರಲು ಕೋಮುವಾದಿ ಭಾವನೆಯನ್ನು ಬಳಸಿಕೊಳ್ಳಲಾಯಿತು. ಸಮಾಜವನ್ನು ಜಾತಿ, ಧರ್ಮಗಳ ಮೂಲಕ ವಿಭಜಿಸಿದರೆ ಚುನಾವಣೆಯ ವೋಟ್‌ಬ್ಯಾಂಕ್‌ನ್ನು ಸಾಧಿಸಿಕೊಳ್ಳುವುದು ಸುಲಭವಾಗತೊಡಗಿತ್ತು. 'ಕಡಿಮೆ ಹೂಡಿಕೆ ಮತ್ತು ಅತೀ ಲಾಭ' ಎಂಬ ಬಂಡವಾಳವಾದಿ ಸಿದ್ಧಾಂತವು ಕೋಮುವಾದದ ಕಾರಣದಿಂದ ಗೆಲ್ಲತೊಡಗಿತು. ಗೆಲುವಿನ ರುಚಿ ಮಸ್ತಕಕ್ಕೆ ಏರತೊಡಗಿದಂತೆ, ಜನರನ್ನು ಧರ್ಮದ ಗುರುತುಪಟ್ಟಿ ಅಂಟಿಸಿಯೇ ನೋಡುವ ವಿಕೃತತನ ಬಲಿಯತೊಡಗಿತು.

ಜಾತಿ ವ್ಯವಸ್ಥೆಯ ಅಸಹಜ ಸ್ಥಿತಿಯಿಂದ ಬಳಲುತ್ತಿದ್ದ ಭಾರತವು ಧರ್ಮದ ರೋಗವನ್ನೂ ತಗುಲಿಸಿಕೊಂಡು ಬಹು ಅಂಗಾಗ ವೈಫಲ್ಯದ ದುರಂತದತ್ತ ಸರಿಯಿತು.

ಆಧುನಿಕತೆಯ ಪ್ರಾರಂಭದೊಂದಿಗೆ ಶಿಕ್ಷಣ ಉದ್ಯೋಗಗಳ ನಾಗರಿಕ ನಡಾವಳಿಗಳು ಪ್ರಾರಂಭಗೊಂಡು, ವ್ಯಕ್ತಿತ್ವವನ್ನು ಜಾತಿಯ ಗಾಜುಗೋಳದಿಂದ ಅಳೆವ ತಪ್ಪು ಮಾದರಿಯು ಒಂದಿಷ್ಟು ಹಿಂದೆ ಸರಿದಿತ್ತು.

ಸಾಧುವಿನ ಜಾತಿಯನ್ನು ನೋಡಬೇಡ, ಜ್ಞಾನವನ್ನು ನೋಡು.

ತಲ್ವಾರವನ್ನು ನೋಡು, ಅದನ್ನು ಮುಚ್ಚಿದ ಬಟ್ಟೆಯನ್ನಲ್ಲ

–ಎನ್ನುತ್ತಾನೆ ಸಂತ ಕಬೀರ. ಇಂತಹ ತಿಳಿವು ಶಿಕ್ಷಣದ ಮೂಲಕ ಪ್ರವೇಶವಾಗತೊಡಗಿತ್ತು. ದಲಿತರು ತಮ್ಮ ಕೀಳರಿಮೆಯಿಂದ ಮುಕ್ತರಾಗಬೇಕು, ಮೇಲ್ಜಾತಿಯವರು ತಮ್ಮ ಮೇಲರಿಮೆಯಿಂದ ಮುಕ್ತರಾಗಬೇಕಾದ ಅನಿವಾರ್ಯತೆಯನ್ನು ಆಧುನಿಕ ಸಮಾಜವು ಮುಂದಿಕ್ಕಿತ್ತು. ಆಧುನಿಕತೆಯ ಕಾಲದಲ್ಲಿ ನಗರಗಳು ಜಾತಿ–ಧರ್ಮಗಳ ಕಶ್ಮಲದಿಂದ ಮುಕ್ತವಾದ ಜಾಗಗಳಾಗಿದ್ದವು. ಆದರೆ ಬಂಡವಾಳವಾದಿ ಸಮಾಜದ ಕೋಮುವಾದಿ ವಿಷವು ಶಿಕ್ಷಣ, ಉದ್ಯೋಗಗಳ ಆಯ್ಕೆಯಲ್ಲಿಯೂ, ನಾಗರಿಕ ಪ್ರಜ್ಞೆಯಲ್ಲಿಯೂ ತೀವ್ರವಾಗಿ ಪ್ರವೇಶಿಸಿದೆ. ಯಾವ ನಗರಗಳು ಮುಕ್ತ ಮಾನವೀಯತೆಯ ಜಾಗೆಗಳಾಗಬಲ್ಲವು ಎಂದು ಆಧುನಿಕ ಕಾಲದಲ್ಲಿ ತಿಳಿಯಲಾಗಿತ್ತೋ, ಅದೇ ನಗರಗಳೀಗ ಜಾತೀಯತೆಯ ಸೆಂಟರ್‌ಗಳಾಗಿ ಬದಲಾಗತೊಡಗಿದ್ದವು. ನಗರಗಳಲ್ಲಿ ಜಾತಿಯಾಧಾರಿತ ನಿವೇಶನಗಳು, ನಿವೇಶನಗಳ ಹಂಚಿಕೆ, ಅಪಾರ್ಟಮೆಂಟ್‌ಗಳ ಗುರುತುಗಳು, ಕೊನೆಗೆ ವ್ಯಾಪಾರಿ ಸೆಂಟರ್‌ಗಳನ್ನೂ ಜಾತಿ–ಧರ್ಮಗಳ ಆಧಾರದಲ್ಲಿ ಬಳಸಿಕೊಳ್ಳುವ ಸ್ಥಿತಿ ನಿರ್ಮಾಣವಾಯಿತು.

ಆಧುನಿಕತೆಯ ಪ್ರಾರಂಭದ ಕಾಲದಲ್ಲಿ ಅದೇ ತಾನೇ ಹೊಟೇಲ್ ಉದ್ಯಮವು ಶುರುವಾದಾಗ; ಅದು ದಲಿತರಿಗೆ ಪ್ರತ್ಯೇಕ ಕಪ್ಪುಗಳನ್ನು ತೆಗೆದಿರಿಸುವ ಪದ್ಧತಿಯನ್ನು ಪ್ರಾರಂಭಿಸಿತ್ತು. ಇದರ ವಿರುದ್ಧ ನಾಡಿನಾದ್ಯಂತ ಬಲು ದೊಡ್ಡಮಟ್ಟದ ಚಳುವಳಿಗಳೆಲ್ಲ ನಡೆದು, ಜಾತಿ–ಧರ್ಮಗಳ ಐಡೆಂಟಿಟಿಯನ್ನು ಉದ್ಯಮಗಳು ಪರಿಗಣಿಸಬಾರದು ಎಂಬ ಎಚ್ಚರಿಕೆಯನ್ನು ನೀಡಿದವು. ಇಂತಹ ಸಮಾನತೆಯ ಆಶಯಗಳನ್ನು ಜನಬದುಕಿನ ಭಾಗವಾಗಿಸುವುದು ಸುಲಭವಾಗಿರಲಿಲ್ಲ. ಒಳಗೊಳಗೇ ತಮ್ಮ ಜಾತಿ–ಧರ್ಮಗಳ ಐಡೆಂಟಿಟಿಯನ್ನೇ ಹುಡುಕಿ ತೃಪ್ತರಾಗುವ, ಸಂಪ್ರದಾಯವಾದಿ ಮನಸ್ಥಿತಿಗಳಿಗೇನೂ ಕೊರತೆಯಿರಲಿಲ್ಲ. ಉದ್ಯಮಿಗಳಿಗೆ ಹೀಗೆ ಜಾತಿ/ ಧರ್ಮದ ಐಡೆಂಟಿಟಿಯು ಲಾಭವನ್ನು ತಂದುಕೊಡುವ ವಿಷಯವೂ ಆಗಿತ್ತು. ಆದರೆ, ಈ ಬದಲಾವಣೆಯ ಗತಿಯನ್ನು ತಡೆದು,

ವಿರುದ್ಧ ದಿಕ್ಕಿಗೆ ತಿರುಗಿಸಿದ್ದು ಜಾಗತೀಕರಣ. ಇದರಿಂದಾಗಿ ಯಾವ ಜಾತಿಯವರು ಯಾವ ಉದ್ಯಮ ಮತ್ತು ಕಂಪನಿಗಳಲ್ಲಿ ಕೆಲಸ ಮಾಡಬೇಕು ; ಯಾವ ವ್ಯಾಪಾರಸ್ಥರೊಂದಿಗೆ ಒಡನಾಡಬೇಕು ಎಂಬುದೆಲ್ಲ ಪೂರ್ವನಿರ್ಧರಿತವಾಗತೊಡಗಿತು, ಮುಂಬೈಯ ಪ್ರತಿಷ್ಠಿತ ಕಂಪನಿಯೊಂದು, ತನ್ನ ಉದ್ಯೋಗದ ಜಾಹೀರಾತಿನಲ್ಲಿ, 'ಮುಸ್ಲಿಮರು ಅರ್ಜಿ ಹಾಕುವ ಅಗತ್ಯವಿಲ್ಲ'– ಎಂದು ರಾಜಾರೋಷವಾಗಿ, ಸಂವಿಧಾನ ವಿರೋಧಿಯಾಗಿ ಹೇಳಿಕೆ ನೀಡಿತು. ಊಟ ಸರಬರಾಜು ಮಾಡುವ ಕಂಪನಿಯ ನೌಕರನು ಮುಸ್ಲಿಂ ಎಂದು ತಿಳಿದು, ಅವನು ತಂದಿದ್ದರಿಂದ ಊಟವೇ ಮೈಲಿಗೆಯಾಗಿದ್ದರಿಂದ ಊಟವನ್ನೇ ತಿರಸ್ಕರಿಸಿದ ಸುಶಿಕ್ಷಿತರ ವರ್ತನೆಯೂ ದಾಖಲಾಯಿತು. ಅಂಗನವಾಡಿಯ ಮತ್ತು ಪ್ರಾಥಮಿಕ ಶಾಲೆಯ ಬಿಸಿಯೂಟದ ಕಾರ್ಯಕರ್ತೆಯರು ದಲಿತರಾದ್ದರಿಂದ, ಅವರು ತಯಾರಿಸಿದ ಆಹಾರವನ್ನು ಸ್ವೀಕರಿಸಬಾರದು– ಎಂದು ತಿಳಿದ ಹಳ್ಳಿಯ ಪರಿಸ್ಥಿತಿಗಿಂತಲೂ ನಗರವು ಪೂರ್ಣವಾದ ವಿಭಿನ್ನತೆಯನ್ನೇನೂ ಹೊಂದಲಿಲ್ಲ. ಇದು ಕೋಮುವಾದಿ ಸಮಾಜದ ವಾಸ್ತವಿಕ ಸ್ಥಿತಿಯಾಗತೊಡಗಿತ್ತು. ಇಂತಹ ಸಾಮಾಜಿಕ ಬಿಕ್ಕಟ್ಟಿನ ಕಾಲದಲ್ಲಿ, ದೇಶದ ಒಟ್ಟೂ ಸೃಜನಶೀಲತೆಯು ತನ್ನ ಆದ್ಯತೆಯನ್ನು ಬದಲಿಸಿಕೊಳ್ಳಬೇಕಾದ ಜರೂರತ್ತು ಸೃಷ್ಟಿಯಾಯಿತು. ಸೃಜನಶೀಲತೆಯ ಶಕ್ತಿಯಿರುವುದು ಅದರ ಅಂತರ್ಮುಖಿ ಪಯಣದಲ್ಲಿ ಮಾತ್ರವಲ್ಲ. ಆ ಅಂತರ್ಮುಖತೆಯನ್ನು ಅಂತರಗಂಗೆಯಾಗಿಸಿಕೊಂಡು, ಸಮಾಜದ ಉರಿಯನ್ನು ಶಮನಗೊಳಿಸುವಲ್ಲಿ– ಎಂಬ ಆಯ್ಕೆಯನ್ನು ಸೃಜನಶೀಲತೆಯ ಎಲ್ಲ ಆಯಾಮಗಳೂ ಪ್ರಸ್ತುತಪಡಿಸಿದವು. ಸಿನೆಮಾ, ಕಾವ್ಯ, ನಾಟಕ, ಚಿತ್ರ, ಕಾದಂಬರಿ, ಕಥೆ ಹೀಗೆ... ಪ್ರಭುತ್ವವು ತನ್ನ ಅಧಿಕಾರಲೋಭಕ್ಕಾಗಿ ಮನುಷ್ಯ ಸಮಾಜವನ್ನು ಜಾತಿ, ಧರ್ಮಗಳ ಹೆಸರಿನಲ್ಲಿ ಒಡೆದಿಡುವಾಗ; ಮಾಧ್ಯಮಗಳನ್ನು ಕಾನೂನನ್ನು ಆಡಳಿತಶಾಹಿಯನ್ನು ತನ್ನ ಅನುಕೂಲಸಿಂಧುವಾಗಿ ಬಗ್ಗಿಸಿಕೊಂಡಿರುವಾಗ; ಅಬದ್ಧಗಳನ್ನೇ ಸುಂದರವಾಗಿ ಸಮಾಜದಲ್ಲಿ ಬಿತ್ತುವಾಗ... ತುಂಬ ಅಗತ್ಯವಾಗಿ ಸೃಜನಶೀಲತೆ ವಿರೋಧ ಪಕ್ಷವಾಗಿ ನಿಂತಿತು. ಸೃಜನಶೀಲವಾಗಿ ತನ್ನನ್ನು ಅಭಿವ್ಯಕ್ತಗೊಳಿಸಿಕೊಳ್ಳುವ ಸಂವೇದನಾಶೀಲ ಮನಸ್ಸನ್ನು ಕೊಂಡುಕೊಳ್ಳುವುದು ಸುಲಭವಾಗಿರಲಿಲ್ಲ. ಸಲೀಸಾಗಿರಲಿಲ್ಲ. ಎಲ್ಲೋ ತುಂಬ ಕನಿಷ್ಠ ಪ್ರಮಾಣದಲ್ಲಿ ಅಂತಹ ಎಳೆತವು ಕಾಣುತ್ತದೆಯಾದರೂ, ಸೃಜನಶೀಲ ಸಾಮರ್ಥ್ಯದ ಪ್ರಧಾನವಾದ ನೆಲೆಯು ಮನುಷ್ಯಪರವಾಗಿತ್ತು. ಜೀವಪರವಾಗಿತ್ತು. ಸಣ್ಣಕಥೆ ಎಂಬ ಈ ಸಾಹಿತ್ಯ ಪ್ರಕಾರವು ಪ್ರಸ್ತುತ ಸವಾಲನ್ನು ಅತ್ಯಂತ ಯಶಸ್ವಿಯಾಗಿ ಎದುರಿಸಿತು.ಕನ್ನಡದ

ಮಹತ್ವದ ಕಥೆಗಳು ಈ ಅವಧಿಯಲ್ಲಿ ಸೃಷ್ಟಿಯಾದದ್ದು ಈ ಸವಾಲನ್ನು ಮುಖಾಮುಖಿಯಾಗಿಸಿಕೊಂಡ ಕಾರಣಕ್ಕಾಗಿಯೇ.

'ಕಥೆ ನನಗೆ ಕಸುಬಲ್ಲ, ಅದು ಬಿಡುಗಡೆಯ ಪಯಣ' ಎಂದವರು ಮೊಗಳ್ಳಿ ಗಣೇಶ. ತನ್ನೂರು, ತನ್ನ ಅನುಭವಗಳನ್ನು ಲೋಕವನ್ನು ಅರ್ಥೈಸಿಕೊಳ್ಳುವ ಮತ್ತು ವಿವರಿಸಿಕೊಳ್ಳುವ ದುರ್ಬೀನು ಮಾಡಿಕೊಂಡ ಕಥೆಗಾರರಿವರು. ಸದ್ಯದ ವರ್ತಮಾನವು ಸೃಜನಶೀಲತೆಯನ್ನು ಮಾರುಕಟ್ಟೆಯ ಸರಕಾಗಿಸಬಲ್ಲದು ಎಂಬ ಎಚ್ಚರದ ಸಂವೇದನೆ ಇವರದು. "ಕಾಲದ ಮಾರುಕಟ್ಟೆ ವಿಚಿತ್ರವಾದುದು. ಸಾರಾಸಗಟಾಗಿಯೂ ಅದು ಸೃಜನಶೀಲತೆಯನ್ನು ಖರೀದಿಸಬಲ್ಲದು" (ನನ್ನ ಮಾತು– ದೇವರದಾರಿ) ಎಂದು ಹೇಳುತ್ತಾರೆ. ಬಂಡಾಯ ಸಾಹಿತ್ಯದ ಕಾಲದಿಂದಲೂ ಅಪ್ಪಟ ದಲಿತ ಸಂವೇದನೆಯ ನಿಲುವುಗಳನ್ನು ತಮ್ಮ ಕಥೆಗಳಲ್ಲಿ ಮೂಡಿಸುತ್ತ ಬಂದ ಮೊಗಳ್ಳಿಯವರು– ವೈಚಾರಿಕವಾಗಿ, ಜಾಗತೀಕರಣವು ದಲಿತರ ಅನಾಥ ಪ್ರಜ್ಞೆಯನ್ನು ತೊಡೆಯುವ ಅವಕಾಶಗಳ ಹೆದ್ದಾರಿ ಆದೀತೇ ಎಂದು ಕನಸಿದವರು. "ನಾನು ಜಾಗತೀಕರಣದ ಪರ ಎಂಬ ಒಂದು ಬೀಸು ಅಭಿಪ್ರಾಯವಿದೆ. ಇರಬಹುದು. ಆದರೆ ಕಥೆ ಬರೆಯುವಾಗ ನಾನು ಅದನ್ನು ಅನುಮಾನಿಸುತ್ತೇನೆ. ವೈಚಾರಿಕ ನಿರ್ವಚನದಲ್ಲಿ ಅದರ ಬಗ್ಗೆ ಉದಾರವಾಗಿರುತ್ತೇನೆ" ಎನ್ನುತ್ತಾರೆ. ಜಾಗತೀಕರಣದ ಮೂಲಚೂಲಗಳನ್ನು ತಿಳಿಯುವಲ್ಲಿ ಉಂಟಾಗುವ ಈ ಅಡಚಣೆಯೇ ಅದರ ನಿಜವಾದ ಲಕ್ಷಣ ಮತ್ತು ಅದರ ಯಶಸ್ಸಿನ ಅಡಿಪಾಯ ಎನ್ನುವುದನ್ನು ಗಮನಿಸಬೇಕು. ಸಂವೇದನಾಶೀಲ ಮನಸ್ಥಿತಿಯು ತೆರೆಯುವ ಆಳದ ಅರಿವಿಗೆ ಇವರ ಕಥೆಗಳಲ್ಲಿ ಪುರಾವೆಗಳಿವೆ.

'ದೇಶದ್ರೋಹ' ಎಂಬ ಕಥೆಯು, ಮನಸ್ಸು ಹೊಗೆಯಾಡುತ್ತಿರುವ ಊರು ಬುಸುಗುಡುತ್ತಿರುವ ವರ್ತಮಾನ ಭಾರತದ ಬಣ್ಣವನ್ನು ಕಾಣಿಸುತ್ತದೆ. ಈ ಕಥೆಯ ಪರಿಸರ ಮಾರಪ್ಪನ ಹೊಟೇಲು. ದಲಿತರಿಗೆ ಹೊರಗೆ ಚಾ ಕಪ್ಪು ಇಟ್ಟಿದ್ದ ದೇಶದಲ್ಲಿ ದಲಿತರೇ ಹೋಟ್ಲು ಅಂತ ಅಂದಾಜು ಬರುವ ಬಿಸಿನೆಸ್ಸನ್ನು ಶುರುಮಾಡಿದ್ದಾರೆ. ಮೇಲ್ಜಾತಿ ಓಣಿಗೆ ಹೋಗಬಾರದವ್ರು, ದೇವರ ಸನಿಹ ಸುಳಿಯಬಾರದವ್ರು ಈಗ ತಮ್ಮದೇ ಒಂದು ಗುಡಿ ಎಂಬ ಇಮಾರತನ್ನೂ ಕಟ್ಟಿಕೊಂಡಾಗಿದೆ. ಇಷ್ಟಕ್ಕೇ ಇದು ಅಭಿವೃದ್ಧಿ ಎಂದು ಕರೆಯುವವದಾದರೆ, ಇದು ಅಭಿವೃದ್ಧಿಯೇ. ಆದರೀಗ, ಇಷ್ಟಾದ ಮೇಲಾದರೂ ಅವರವರು ಅವರವರ ಪಾಡಿಗಿರಲು 'ಅವರು' ಸುಮ್ಮನೆ ಬಿಡುತ್ತಿಲ್ಲ. ಮಾರಪ್ಪನ ಹೋಟ್ಲಲ್ಲಿ ಚಹಾ ಕುಡಿಯುತ್ತ

ಕುಳಿತುಕೊಂಡಿರುವ ಮುದುಕರಿಗೆ, ತಾವು ಮೆಚ್ಚಿ ಉಂಡು ಬದುಕಿ ಬಂದ ಆಹಾರವನ್ನು ಕನಿಷ್ಠವೆಂದು ಜರೆಯುವ, ಅದನ್ನೇ ಮುಖ್ಯ ವಿಚಾರವಾಗಿಸಿಕೊಂಡು ಚರ್ಚಿಸುವ ಜನರ ಬಗ್ಗೆ ಬೇಸರವಾಗಿತ್ತು. ಸನಾತನ ಹಿಂದೂ ಧರ್ಮಕ್ಕೂ ನಮಗೂ ಇರುವ ಸಂಬಂಧವಾದರೂ ಏನು? ಅವರು ಧರ್ಮ-ಕರ್ಮ ಅಂತೆಲ್ಲ ಮಾತನಾಡುವುದರಲ್ಲಿ ಏನಾದರೂ ಸ್ವಾದ ಇದೆಯಾ? ಮನುಷ್ಯರಾದವರು ಏನೇನು ತಿನ್ನುವರೋ ಅದೆಲ್ಲ ಕೊಡುವವನು ದೇವರೇ ಅಂದಮೇಲೆ ಇದು ನೀಚ, ಇದು ಶ್ರೇಷ್ಠ ಎಂಬುದಾದರೂ ಹೇಗೆ? ಎಂಬ ತುರ್ತಿನ ವಾಗ್ವಾದಗಳಲ್ಲಿ ಮುಳುಗಿದ್ದರು. ಗಂಡಸರು ಹೀಗೆ ಹರಟೆಯಲ್ಲಿ ಮುಳುಗಿರುವಾಗ, ತೋಪಮ್ಮ ಹಸುವಿನ ಮಾಂಸದ ಸರ ಮಾಡಿ, ಒಣಗಿಸುತ್ತ ಇವರ ಮಾತಿಗೆ ಕಿವಿಯಾಗಿದ್ದಳು. ಗೋಮಾತೆ-ಮಾಂಸ-ದೇಸದ್ರೋಹ-ಮಾರಂಗಿಲ್ಲ-ತಿನ್ನಂಗಿಲ್ಲ- ಇವೆಲ್ಲ ಅವರುಗಳಿಗೆ ವಿಚಿತ್ರವಾಗಿ, ತಾವು ದಿಢೀರನೆ ಯಾವುದೋ ಕಾಲದಿಂದ ಇನ್ಯಾವುದೋ ಕಾಲಕ್ಕೆ ಕತ್ತು ಹಿಡಿದು ನೂಕಿಸಿಕೊಂಡವರ ಹಾಗೆ ಒದ್ದಾಡುತ್ತಿದ್ದರು.

ತೋಪಮ್ಮನ ಮೊಮ್ಮಗ ಕಾಲೇಜು ಅರ್ಧಕ್ಕೆ ಬಿಟ್ಟ ಹುಡುಗ, ಮಾರಪ್ಪನ ಹೊಟೇಲಿಗೆ ಬಂದು ಗೋ ಹತ್ಯೆ ನಿಷೇಧ ಕಾನೂನಿನ ಬಗ್ಗೆ ಹೇಳಿ ಇನ್ನಷ್ಟು ಅವರುಗಳ ತಲೆಕೆಡಿಸಿದ್ದ. ಕೇಸರಿಯ ಸ್ವಾಮಿಯೊಬ್ಬರು ರಾಜಕಾರಣಿಗಳ ಜೊತೆ ಸೇರಿ ಊರೂರುಗಳ ಪಾಳುದೇವಾಲಯಗಳ ಜೀರ್ಣೋದ್ಧಾರ ಮಾಡುವ ಸಲುವಾಗಿ ಕಾರ್ಯಯೋಜನೆಯನ್ನು ರೂಪಿಸಿದ್ದರು. ಹೊಲಗೇರಿಯ ದೇವಿಗುಡಿಯನ್ನು ಜೀರ್ಣೋದ್ಧಾರ ಮಾಡಲು ಅವರು ಒಳಹೊಕ್ಕು, ಮಾರವ್ವನ ಮೂರ್ತಿಯನ್ನು ಬದಲಿಸಿ ಬ್ರಾಹ್ಮಣಮಯ ಮಾಡಿ, ಪುರೋಹಿತರನ್ನು ನೇಮಿಸಿ, ಇದೀಗ ಸ್ವತಃ ಹೊಲೆಯರೇ ಒಳಹೋಗಲು ಅನುಮತಿ ಪಡೆಯುವಂತಹ ಸ್ಥಿತಿ ನಿರ್ಮಾಣವಾಗಿತ್ತು. ಮಾರವ್ವನ ಗುಡಿಯ ಮೇಲೀಗ ಕೇಸರಿ ಬಾವುಟಗಳು ಈ ಮೊದಲಿದ್ದ ಮಾರವ್ವನ ಪೂಜಾರಿ ಕಾಳಪ್ಪ ಈಗ ಗುಡಿ ಕಸ ಗುಡಿಸೋ ಜೀತಗಾರ ಮಾತ್ರ ಆಗಿದ್ದಾನೆ.

ದಲಿತ ಕೇರಿಯ ಬೀರ, ಈ ಎಲ್ಲ ವಿದ್ಯಮಾನಗಳ ಬಗ್ಗೆ ಮುದುಕರ ಗಮನಕ್ಕೆ ತಂದು, ಅವ್ರು ತಲೆ ಮೇಲೆ ಕಲ್ಲು ಹಾಕ್ತವ್ರೆ, ಹಾಕಿಸ್ಕಳಿ- ಎಂದು ಕೋಪಿಸಿಕೊಳ್ಳುತ್ತಾನೆ. ಈಗಿನ ಹುಡುಗರಿಗಂತೂ ಇದ್ಯಾವುದೂ ಕಣ್ಣಿಗೆ ಬೀಳುತ್ತಿಲ್ಲ. ಅವ್ರು ಗಿಲೀಟಿನ ಪ್ಯಾಟೆ ಜೀತಕ್ಕೆ ಒಗ್ಗಿಕೊಂಡಿದ್ದಾರೆ ಎಂದು ಸಂಕಟಪಡುತ್ತಾರೆ. ಅಂತೂ, ತಮಗಾದ ಅನ್ಯಾಯವನ್ನು ಘೋಷಣೆ ಮಾಡಿಕೊಂಡು ಹೊರಟ ಚಳುವಳಿಗಾರರ ಗುಂಪಿನಲ್ಲಿ, ಧರ್ಮ ಬ್ಯಾಡ,

ಮಾನವತೆ ಬೇಕು ಎಂದು ಕೂಗುಗಳಿದ್ದವು. ಚಳುವಳಿಗೆ ಪಾದ ಸೇರಿಸಿದ್ದ ತೋಪಮ್ಮನ ಮೈಮೇಲೆ ಪೂರ್ವಿಕರ ಆತ್ಮವು ಅವತರಿಸಿದ್ದೂ ಆಗಿತ್ತು. ಹಾಗೆ ಬಂದ ಆ ಆತ್ಮವು 'ನನ್ನ ಯೆದೆಯಾಲು ಬ್ಯಾರೆ ಅಲ್ಲ. ದನದ ಮಾಂಸ ಬ್ಯಾರೆ ಅಲ್ಲ' ಎಂದು ಅಪ್ಪಣೆ ಕೊಡಿಸಿ, ಈಗ ಆಗ್ತಿರೋ ಅನ್ಯಾಯಕ್ಕೆ ಎದೆ ಎದೆ ಬಡಕೊಂಡು ಆಕ್ರಂದಿಸಿದ್ದೂ ಆಯಿತು. ಸಂಘದವರು ಗುಡಿಯಲ್ಲಿ ಬುದ್ಧನ ವಿಗ್ರಹವನ್ನು ಸ್ಥಾಪಿಸುವ ಸೂಚನೆಯನ್ನು ಮುಂದಿಟ್ಟು, ಬಂತೇಜಿಯನ್ನು ಕರೆಯಿಸಿ ಬುದ್ಧ ಮೂರ್ತಿಯನ್ನು ಸ್ಥಾಪಿಸಿಯೂ ಆಯಿತು. ಮೇಲ್ಜಾತಿಯವರು ಸ್ಥಾಪಿಸಿದ್ದ ಅದ್ಯಾವುದೋ ವಿಗ್ರಹವು ಗುಡಿಯ ಆವರಣದ ಒಂದು ಮೂಲೆಗೆ ಬಂತು.ಇದೇ ನೆಪದಿಂದ ಸನಾತನ ಹಿಂದೂಗಳು- ಹೊಲಗೇರಿಯ ಮಂದಿ ಮಾಡುತ್ತಿರುವ ಅಪಮಾನ. ವಿಗ್ರಹದ ಮೇಲೆ ಹೇಸಿಗೆ ಮಾಡಿದ್ದಾರೆ. ಗೋಹತ್ಯೆ ಮಾಡುತ್ತಿರುವ ಇವರನ್ನು ಕೊಂದರೂ ಪಾಪವಿಲ್ಲ- ಎಂದೆಲ್ಲ ಪುಕಾರು ಹಬ್ಬಿಸಿದರು.

ಹಳ್ಳಿಯ ಮೇಲಿನಕೇರಿಯು ಕೇಸರಿಧರಿಸಿ ಮುಸುಕುಹೊದ್ದ ಜನರಿಂದ ತುಂಬಿಹೋಯಿತು. ಊರ ಪಟೇಲರು ಅನಿವಾರ್ಯವಾಗಿ ಸಂಧಾನ ಮಾಡಿಸಲು ಮುಂದಾದರು. ಸನಾತನಿಗಳು ಮತ್ತು ಸಂಘದವರ ಒಪ್ಪಂದ ಅಷ್ಟು ಸುಲಭದ ಸಂಗತಿಯಾಗಿರಲಿಲ್ಲ. ಕೇಸರಿಯವರು ಪಟೇಲರನ್ನು ದಾಳ ಮಾಡಿಕೊಂಡು, ಸ್ವಾಮಿಗಳೇ ದಲಿತಕೇರಿಗೆ ಬಂದು ಸಹಭೋಜನ ಮಾಡುತ್ತಾರೆಂಬ ಪ್ರಸ್ತಾಪವನ್ನು ಮುಂದಿಟ್ಟರು. ಅದರೊಂದಿಗೆ ದೇಗುಲದ ಪವಿತ್ರೀಕರಣ, ದೀಕ್ಷಾಕಾರ್ಯಗಳೆಲ್ಲವೂ ತಗುಲಿಕೊಂಡವು. ಅಂದು ಊರಿಗೆ ಊರೇ ಕೇಸರಿಮಯವಾಗಿತ್ತು. ಸ್ವಾಮಿಗಳ ಪುರಪ್ರವೇಶ ದೇವಾಲಯ ಪ್ರವೇಶ, ಮಂತ್ರಘೋಷಣೆಗಳಿಂದ ತುಂಬಿತ್ತು. ದೇವಾಲಯ ಶುದ್ಧೀಕರಣ ನಡೆಯಿತು.

ಆದರೆ, ಮುದುಕರು ದೀಕ್ಷೆ ನಿರಾಕರಿಸಿದರು. ತಾವು ಸಂಧಾನಕ್ಕೆ ಒಪ್ಪಿದ್ದು, ನೀವು ನಾವು ಕೊಟ್ಟಿದ್ದು ತಿಂದು ನಮ್ಮ ಪಾಡಿಗೆ ನಮ್ಮನ್ನು ಬದುಕಲು ಬಿಡುತ್ತೀರಿ- ಎಂಬ ಕಾರಣಕ್ಕೆ. ನಮಗೆ ನಿಮ್ಮ ಧರ್ಮ ಬೇಡ. ನಮ್ಮ ಬಳಿ ನಮ್ಮ ಮಾನವಧರ್ಮ ಇದೆ. ಮೊದಲು ಊಟಕ್ಕೆ ಕುಳಿತುಕೊಳ್ಳಿ ಆಮೇಲೆ ಮಾತು- ಎಂದು ಸಂಘದವರು ಗಟ್ಟಿಯಾಗಿ ಹೇಳಿದರು. ಯಾರ ಅಂದಾಜಿಗೂ ಸಿಗದೆ, ಬೀರ ಬಡಿಸಿದ ಮಾಂಸದ ಸಾರು ಬಲುದೊಡ್ಡ ರಣರಂಗವನ್ನೇ ಸೃಷ್ಟಿಸಿತು. ಇಂತಹ ನೆಪಕ್ಕಾಗಿಯೇ ಕಾಯುತ್ತಿದ್ದ ಪುಂಡರು, ಕೇರಿಯನ್ನು ಯುದ್ಧಭೂಮಿ ಮಾಡಿದರು. 'ಧರ್ಮಕ್ಕಾಗಿ ಹತ್ಯೆ ನಡೆಸುವುದು ತಪ್ಪಲ್ಲ' ಅದು ದೇವರ ಅಭಿಷೇಕ' ಎಂದು ಮೈಕ್‌ನಲ್ಲಿ ಯಾರೋ ಕೂಗುತ್ತಿದ್ದರು' ಅತ್ಯಾಚಾರಗಳು ನಡೆದವು. ಪ್ರಾಯದ ಹೆಣ್ಣುಮಕ್ಕಳ

ಕೂಗು ಧರ್ಮದ ಗದ್ದಲದಲ್ಲಿ ಯಾರಿಗೂ ಕೇಳುತ್ತಿರಲಿಲ್ಲ. ಮಾರಪ್ಪನ ಹೊಟೇಲಿಗೆ ಬೆಂಕಿ ಹಾಕಲಾಗಿತ್ತು. ಆ ಕತ್ತಲು, ಉರಿ, ಬೆಂಕಿ, ವಿಚಿತ್ರ ಉಸಿರುಗಟ್ಟಿಸುವ ವಾತಾವರಣದಲ್ಲಿ ಅಲ್ಲಲ್ಲಿ ನರಳುತ್ತ ಬಿದ್ದಿರುವ ಊರುಕೇರಿಯ ಜನರ ಕಿವಿತಮಟೆಗೆ ಎರಡು ಬಗೆಯ ಮಾತುಗಳು ಕೇಳುತ್ತಿದ್ದವು. 'ಈ ಹೊಲೆಯರದೂ ತಪ್ಪಲ್ಲವೇ, ಸ್ವಾಮಿಜಿಗಳಿಗೆ ದನದ ಮಾಂಸ ಬಡಿಸಿದ್ದು ತಪ್ಪಲ್ಲವೇ? 'ಎಂಬ ಒಂದು ಧ್ವನಿ. 'ಈ ಭೂಮಿಯ ಬದುಕನ್ನು ನಾಶಪಡಿಸಲು ಕೋಮುದ್ವೇಷ ಒಂದೇ ಸಾಕಲ್ಲವೇ? 'ಎಂಬ ಇನ್ನೊಂದು ಧ್ವನಿ ಕೇಳುತ್ತಿತ್ತು. ತೋಪಮ್ಮ ಮಾತ್ರ ಮಾಯಾವಿಯಂತೆ ಸಣ್ಣ ಮಕ್ಕಳನ್ನು ಕರೆದುಕೊಂಡು ಬದುಕುಳಿಯುವ ದಾರಿಯತ್ತ ನುಸುಳುತ್ತಿದ್ದಳು.

ಈ ಕಥೆಯು ಭಾರತದ ವರ್ತಮಾನದ ಸಂಕಟವನ್ನು ಅಕ್ಷರದಲ್ಲಿ ಚಿತ್ರಿಸುವ ತೀವ್ರ ಪ್ರಯತ್ನದಲ್ಲಿ ತೊಡಗಿಸಿಕೊಂಡಿದೆ. ಕೋಮುವಾದಿಗಳು ಗೋವಿನ ರಾಜಕಾರಣವನ್ನು ಮುನ್ನೆಲೆಗೆ ತಂದು ಸಮಾಜವನ್ನು ಒಡೆದು ಆಳುವ ಪ್ರಯತ್ನದಲ್ಲಿದ್ದಾರೆ. ಸತ್ತ ಕರುವನ್ನು ಆಕಳ ಎದುರು ಮಲಗಿಸಿ, ಹಾಲು ಕರೆದುಕೊಳ್ಳುವ ಸ್ವಾರ್ಥಿ ಮನುಷ್ಯರು, 'ನೀನಾರಿಗಾದೆಯೋ ಎಲೆ ಮಾನವಾ' ಎಂದು ಗೋವು ಕೇಳುತ್ತಲೇ ಇದ್ದರೂ ಗೋ ರಾಜಕಾರಣವನ್ನು ಮಾತ್ರ ಸಲೀಸಾಗಿ ನಡೆಸಿ ತಂದಿದ್ದಾರೆ. ಪ್ರಸ್ತುತ ಕಥೆಯು ಕರ್ನಾಟಕದಲ್ಲಿ ಒಂದು ಚಳುವಳಿಯ ರೀತಿಯಲ್ಲಿ ನಡೆದ ಮೇಲ್ಜಾತೀಕರಣದ ಸಂದರ್ಭವನ್ನು ತನ್ನ ಕೇಂದ್ರವಾಗಿಟ್ಟುಕೊಂಡಿದೆ. ಮಠಾಧೀಶರು ಧರ್ಮಾಧಿಕಾರಿಗಳು, ಹಿಂದೂ ಸ್ವಯಂ ಸೇವಕರು ಎಲ್ಲರೂ ಸೇರಿ –ಗೋಮಾಂಸ ನಿಷೇಧವನ್ನು ನೆಪವಾಗಿಟ್ಟುಕೊಂಡು ದಲಿತರನ್ನು ಸಂಸ್ಕೃತೀಕರಣಗೊಳಿಸಿಕೊಳ್ಳುವ ಹುನ್ನಾರಕ್ಕೆ ಕೈಹಾಕಿದರು. ಇದರಿಂದಾಗಿ ಒಂದು ಕಲ್ಲಿನಲ್ಲಿ ಹಲವು ಹಕ್ಕಿಗಳನ್ನು ಉರುಳಿಸುವುದು ಸಾಧ್ಯವಾಯಿತು. ದಲಿತರನ್ನು ದೀಕ್ಷೆ ನೀಡಿ, ಹಿಂದೂ ಧರ್ಮಕ್ಕೆ ಶುದ್ಧೀಕರಿಸಿ ಸೇರಿಸಿಕೊಳ್ಳುವುದರಿಂದ, ಹಿಂದೂಧರ್ಮದ ಗಡಿಯನ್ನು ವಿಸ್ತಾರವಾಗಿಸಿಕೊಳ್ಳುವುದು ಮತ್ತು ಹಿಂದೂಧರ್ಮವು ಉದಾರವಾದಿ ಎಂದು ಬಿಂಬಿಸುವುದು ಸಾಧ್ಯವಾಗುತ್ತದೆ. ದಲಿತರನ್ನು ಸಂಸ್ಕೃತಿಕರಣಗೊಳಿಸುವುದು ಎಂದರೆ, ಅವರು ವೈದಿಕ ಧರ್ಮದ ಶ್ರೇಷ್ಠತೆಯನ್ನು ಶಿರಸಾವಹಿಸಿಕೊಂಡು ಆ ಯಾಜಮಾನ್ಯವನ್ನು ಒಪ್ಪಿಕೊಳ್ಳುತ್ತಾರೆ ಇದರಿಂದಾಗಿ ಅನ್ಯಧರ್ಮದ ವಿರುದ್ಧ ದಂಗೆ, ಹಲ್ಲೆ, ಹಿಂಸೆಗಳನ್ನು ನಡೆಸಿ 'ಧರ್ಮ ರಕ್ಷಣೆ' ಮಾಡಿಕೊಳ್ಳುವಾಗ ದಲಿತರನ್ನು ಕಾಲಾಳುಗಳಂತೆ ಬಳಸಿಕೊಳ್ಳುವುದು ಮತ್ತು ಬಲಿಪಶುಗಳಾಗಿಸಿಕೊಳ್ಳುವುದು ಸಾಧ್ಯವಾಗುತ್ತದೆ. ಇದರಿಂದ ದಲಿತರನ್ನು ಧರ್ಮದ

ಗಡಿಕಾವಲಿಗೆ ನೇಮಿಸಿಕೊಂಡು, ತಾವು ಹೆಚ್ಚು ಸುರಕ್ಷಿತವಾಗಿರುವುದು ಸಾಧ್ಯವಾಗುತ್ತದೆ. ಆಹಾರದ ಕಾರಣಕ್ಕಾಗಿಯೇ ಆ ನೆಪವನ್ನು ಮುಂದಿಟ್ಟುಕೊಂಡು ಅನ್ಯಧರ್ಮೀಯರಾದ ಅಲ್ಪಸಂಖ್ಯಾತರನ್ನು ಬೆದರಿಸಿ ಹಿಂಸಿಸಿ, ಸುಪರ್ದಿಯಲ್ಲಿ ಇಟ್ಟುಕೊಳ್ಳುವುದು ಸಾಧ್ಯವಾಗುತ್ತದೆ. ಆಹಾರದಲ್ಲಿ ಶ್ರೇಷ್ಠ-ಕನಿಷ್ಠ ಎಂಬುದಿದೆಯೇ? ಅದನ್ನು ನಿರ್ಣಯಿಸುವ ಮಾನದಂಡ ಯಾವುದು? ಪ್ರಾಚೀನ ಕಾಲದಲ್ಲಿ ವೈದಿಕ ಧರ್ಮವನ್ನು ಅನುಷ್ಠಾನಗೊಳಿಸಿದ ಋಷಿಮುನಿಗಳು ಕಟ್ಟಾ ಮಾಂಸಾಹಾರಿಗಳೇ ಆಗಿದ್ದರಲ್ಲವೇ? ಸೀತಾದೇವಿಯು ಗಂಗಾನದಿಯನ್ನು ದಾಟಿ ಬರುವಾಗ ತಾವು ಸುರಕ್ಷಿತರಾಗಿ ಮರಳಿ ಬಂದರೆ, ಕರುವನ್ನು ಬಲಿಗೊಡುತ್ತೇನೆ ಪೂಜೆ ಸಲ್ಲಿಸುತ್ತೇನೆ -ಎಂದು ಪ್ರಾರ್ಥಿಸುವ ಭಾಗವು ರಾಮಾಯಣದಲ್ಲಿದೆಯಲ್ಲವೇ? ಮಾಂಸಾಹಾರವು ಸಹಜ ಆಹಾರವಾಗಿಯೂ ಅದನ್ನು ಅಸ್ಪೃಶ್ಯಗೊಳಿಸಿದ ರಾಜಕಾರಣ ಯಾವುದು? ಯಾಕಾಗಿ ಅದು ಆರಂಭವಾಯಿತು? ಗೌತಮ ಬುದ್ಧನು ಗೋಹತ್ಯೆ ಬೇಡ ಎನ್ನಲು ಕೊಡುವ ಕಾರಣವೇನು? ಅಂದಿನ ಕೃಷಿ ಪ್ರಧಾನ ಬದುಕು ಗೋವಿನ ಸಂತತಿಯ ನಾಶದಿಂದ ನಲುಗಬಹುದೆಂಬುದು ಬುದ್ಧನ ಯೋಚನೆಯಾಗಿತ್ತು. ಬುದ್ಧ ಮಾಂಸಾಹಾರ ಕನಿಷ್ಠ ಎಂದು ಹೇಳಲಿಲ್ಲ. ಸ್ವತಃ ಅವನು ಸೂಕರ (ಹಂದಿ) ಮಾಂಸ ಪ್ರಿಯನಾಗಿದ್ದ. ನಾವಿಂದು ಕೃಷಿ ಭೂಮಿಯು ಕಡಿಮೆಯಾಗುತ್ತಿರುವ, ಕೃಷಿ ಚಟುವಟಿಕೆಗಳು ಕುಂದುತ್ತಿರುವ ಬಿಕ್ಕಟ್ಟಿನ ಕಾಲದಲ್ಲಿದ್ದೇವೆ. ಗೋವಿನ ಸಂತತಿಯು ಸುರಕ್ಷಿತವಾಗಿ ಮುಂದುವರಿಯಲು ನಮಗಿರುವ, ಉಳಿದಿರುವ ಪರ್ಯಾಯ ದಾರಿಗಳು ಏನು? ಹಾಲು ಕೊಡುವುದನ್ನು ನಿಲ್ಲಿಸಿದ ಗೋವುಗಳನ್ನು ಸಾಕುವವರು ಯಾರು? ಮತ್ತು ಹೇಗೆ? ಹೈನುಗಾರಿಕೆಗಿಂತಲೂ ಅತಿದೊಡ್ಡ ಉದ್ಯಮವಾದ ಮಾಂಸೋದ್ಯಮವನ್ನು ನಿಷೇಧಿಸಲು ಸಾಧ್ಯವೇ? ಇಷ್ಟಕ್ಕೂ ಗೋಮಾಂಸ ನಿಷೇಧಿಸಲು ತರ್ಕಬದ್ಧ ಕಾರಣಗಳಿವೆಯೇ? ೧೨ನೆಯ ಶತಮಾನದ ವಚನಕಾರ್ತಿ ಕಾಳವ್ವೆ-

> ಕುರಿಕೋಳಿ ಕಿರಿಮೀನು ತಿಂಬವರಿಗೆಲ್ಲ ಕುಲಜ ಕುಲಜರೆಂಬರು
>
> ಶಿವಗೆ ಪಂಚಾಮೃತವ ಕರೆವ, ಪಶುವ ತಿಂಬ ಮಾದಿಗ ಕೀಳೆಂಬರು
>
> ಅವನೇಕೆ ಕೀಳಾದನು, ಜಾತಿಗಳು ನೀವೇಕೆ ಕೀಳಾಗಿರೋ?

-ಎಂದು ಪ್ರಶ್ನಿಸುತ್ತಾಳೆ. ಶಿವನಿಗೆ ಪಂಚಾಮೃತವಾಗುವುದು. ಆಕಳ ಹಾಲು ಎಂದಾದರೆ, ಆಕಳ ಮಾಂಸ ಹೇಗೆ ನಿಕೃಷ್ಟವಾಗುತ್ತದೆ? ಎಂಬ ತರ್ಕ ಅವಳದು. ಸಸ್ಯಗಳೂ ಮಾಂಸಾಹಾರಿಗಳು, ಸಸ್ಯಗಳಿಗೂ ಜೀವವಿದೆ- ಎಂಬ ಜಗದೀಶಚಂದ್ರ ಬೋಸ್‌ರ ವೈಜ್ಞಾನಿಕ

ಸಂಶೋಧನೆಯ ಕಾಲಾನಂತರದಲ್ಲಿ ಇದ್ದೇವೆ. ಜಗತ್ತಿನ ಮಹಾನ್ ಸಂತರು-ಪ್ರವಾದಿಗಳು-ಅವಧೂತರು ಮಾಂಸಾಹಾರಿಗಳೇ ಎಂಬ ಪುರಾವೆಗಳೂ ಸಾಕಷ್ಟಿವೆ. ಮನುಷ್ಯ ಸ್ವಭಾವದ ತಮೋ-ರಜೋಗುಣಗಳಿಗೂ ಅವನು ತಿನ್ನುವ ಆಹಾರಕ್ಕೂ ಸಂಬಂಧವಿದೆ- ಎಂಬ ಅಬದ್ಧವನ್ನು ಹರಡುತ್ತಿದ್ದೇವೆ. ಯಾವ ವೈಜ್ಞಾನಿಕ ಸಾಕ್ಷಿಗಳಿಲ್ಲದೆಯೂ ಅತ್ಯಂತ, ಆಕ್ರಮಣಕಾರಿಯಾದ ರೀತಿಯಲ್ಲಿ ಆಹಾರ ರಾಜಕಾರಣವನ್ನು ನಡೆಯಿಸಲಾಗುತ್ತಿದೆ. ಈ ಎಲ್ಲ ದುರಂತಗಳಿಗೆ ಮೂಲ, ಇರುವುದು- ಅಲ್ಪಸಂಖ್ಯಾತರನ್ನು ಅಪಮಾನಿಸುವ, ನೋಯಿಸುವ ಕೋಮುವಾದ ಮತ್ತು ಕೆಳಜಾತಿಯವರನ್ನು ತಮ್ಮ ಹದ್ದುಬಸ್ತಿನಲ್ಲಿಟ್ಟುಕೊಳ್ಳಲು ಸಹಾಯಕವಾದ ಜಾತಿವಾದ. ಇದನ್ನು ದಮನಿತ ಸಂವೇದನೆಗಳು ಪ್ರಶ್ನಿಸದೇ ಎದುರಿಸದೇ ಗತ್ಯಂತರವೇ ಇಲ್ಲ. ಸೃಜನಶೀಲತೆಯು ಈ ಬಿಕ್ಕಟ್ಟನ್ನು ಬಗೆಹರಿಸಿಕೊಳ್ಳದೆ ಅನ್ಯಥಾ ಶರಣಂ ನಾಸ್ತಿ ಎನ್ನುವಂತಾಗಿದೆ. ಕನ್ನಡದ ಸಂವೇದನಾಶೀಲತೆಯು ಈ ದುರಂತವನ್ನು ಮತ್ತೆ ಮತ್ತೆ ಅನುಸಂಧಾನಗೊಳಿಸಿಕೊಳ್ಳಬೇಕಾಯ್ತು. ಕನ್ನಡದ ಮಹತ್ವದ ಕವಿ ಎನ್.ಕೆ. ಹನುಮಂತಯ್ಯ-

> ಹೌದು, ನಾನು ಅಸ್ಪೃಶ್ಯ
> ಗೋವು ತಿಂದು ಗೋವಿನಂತಾಗಿದ್ದೇನೆ
> ನೀವು ಕೊಡುವ ಮೇವನ್ನು ತಿನ್ನಲಾರೆ
> ನಿಮ್ಮಂತ ಮನುಷ್ಯನಾಗಲಾರೆ

-ಎಂದು ಕಠಿಣವಾಗಿ ನುಡಿಯುತ್ತಾರೆ. ಜನಪ್ರಿಯ ಸಿನಿಮಾಗಳಲ್ಲಿ ಕೆಡುಕಿನ ವರ್ಣನೆಯ ಸಂದರ್ಭದಲ್ಲಿ ಹಗೂರ ವ್ಯಂಗ್ಯದೊಂದಿಗೆ ಬಳಕೆಯಾಗುತ್ತಿದ್ದ; ಖಳರ ಸ್ವಭಾವ ನಿರೂಪಣೆಗಾಗಿ ವಿಕಾರವಾಗಿ ಬಳಕೆಯಾಗುತ್ತಿದ್ದ ಮಾಂಸಾಹಾರವು ಜಾಗತೀಕರಣದ ಕಾಲಘಟ್ಟದಲ್ಲಿ ಅತ್ಯಂತ ನಿಷ್ಠುರವಾಗಿ ಸಾಂಸ್ಕೃತಿಕ ಮೇಲು-ಕೀಳಿನ ಪರಿಭಾಷೆಯಾಗಿ ಹೇರಿಕೆಯಾಯಿತು. ಇದನ್ನು ತರ್ಕಬದ್ಧವಾಗಿ ವೈಚಾರಿಕವಾಗಿ ಮಾತ್ರ ಎದುರಿಸುವುದರಿಂದ ಉಪಲಬ್ಧವಾಗುವ ಪರಿಣಾಮವು ತೀರಾ ಕಡಿಮೆಯದಾಗಿತ್ತು. ಸಾಂಸ್ಕೃತಿಕ ದಾಳಿಯನ್ನು ಎದುರಿಸುವ ಸಶಕ್ತತೆಯಿರುವುದು ಸೃಜನಶೀಲತೆಗೆ ಮಾತ್ರ ಎಂಬ ತೀವ್ರವಾದ ಕಳಕಳಿಯು ಕನ್ನಡ ಸಾಹಿತ್ಯದಲ್ಲಿ ಕಾಣುತ್ತದೆ. ಪ್ರತಿಭಾ ನಂದಕುಮಾರ ಅವರು 'ದೇವಿ ಪರಿಕಲ್ಪನೆಯ ಪುನರ್ ಶೋಧದ ಪದ್ಯಗಳಲ್ಲಿ, ಮರಿ ಬಲಿಕೊಡಲು ಅಂಜಿ ನೆತ್ತರ ಬಿಸಿಯನ್ನು ಅರ್ಪಿಸುವುದು ಹೇಗೆಂದು ಕಂಗಾಲಾಗಿ; ತೆಂಗಿನಕಾಯಿ ಒಡೆದು ಪೂಜೆ ಸಲ್ಲಿಸಿ ದೇವಿಗೆ ನಮಿಸುವ ಹೆಂಗಸಿನ ಚಿತ್ರವನ್ನು ಕೊಡುತ್ತಾರೆ. ಆ ಹೆಂಗಸಿಗೆ ದೇವಿಯು ತನ್ನ ಮೂಗಿನ ನತ್ತಿನ ಫಳಫಳದೊಂದಿಗೆ ತಿವಿದು ಕೇಳುವ ಪ್ರಶ್ನೆಯೆಂದರೆ- ತೆಂಗಿನಕಾಯಿಯ ಗರ್ಭದ

ಜೀವಜಲವ ಹೀಗೆ ಚೆಲ್ಲನೆ ಚಿಮ್ಮುವುದು ಎಂದರೆ, ಮರಿಯ ನೆತ್ತರು ಚಿಮ್ಮುವುದಕ್ಕಿಂತ ಹೇಗೆ ಬೇರೆ? ಎಂದು. ಎರಡು ಸಾವಿರ ವರ್ಷಗಳ ಹಿಂದೆ ಬುದ್ಧ ತನಗೆ ಮಾಂಸಾಹಾರವನ್ನು ಬಡಿಸಲೊಲ್ಲೆಯೆಂದು ಮೊಳಕೆ ಕಾಳು ಬಡಿಸುವ ಸುಜಾತಾಳಿಗೆ ಕೇಳುವ ಪ್ರಶ್ನೆಯೇ ಇದು. 'ಒಂದು ಜೀವದ ಬದಲಿಗೆ, ಇಷ್ಟು ಜೀವಗಳನ್ನು ಬಲಿ ಹಾಕಬಹುದೇ?' ಎಂದು, ದನಗಳನ್ನು ಮಾರಾಟ ಮಾಡುತ್ತಿದ್ದಾರೆ ಎಂಬ ಶಂಕೆಯಿಂದ ಭಯಾನಕವಾಗಿ ಮನುಷ್ಯರನ್ನು ಹಿಂಸೆಗೀಡುಮಾಡುವುದು, ಹಲ್ಲೆ ಮಾಡುವುದು, ದನದ ಮಾಂಸವು ಮನೆಯ ಫ್ರಿಜ್‌ನಲ್ಲಿ ಇದ್ದಿರಬಹುದು ಎಂದು ಶಂಕಿಸಿ, ಊರಿನ ಆಪ್ತರೇ ಮನೆಗೆ ನುಗ್ಗಿ ಹಲ್ಲೆ ಮಾಡಿ ಸಾಯಿಸಿದ್ದು (ದಾದ್ರಿಯ ಇಕ್ಲಾಖ್ ಘಟನೆ)– ಇಂತಹ ಭಯಾನಕ ದುರಂತಗಳಿಗೆ ಭಾರತ ಈಡಾಯಿತು.

ನಮ್ಮ ಪರಂಪರೆಯುದ್ದಕ್ಕೂ ಮಾಂಸಾಹಾರವು ಬರೀ ಒಂದು ಆಹಾರ ಪದ್ಧತಿಯೇ ಹೊರತೂ ಅದು ಕನಿಷ್ಠವಲ್ಲ ಎಂಬ ಪ್ರಜ್ಞಾವಂತಿಕೆಯಿದೆ. ಆದರೆ ಸಂಸ್ಕೃತಿಯ ಸತ್ವದ ಬೇರನ್ನು, ಪರಂಪರೆಯ ಸ್ಮೃತಿಯ ಮಿದುವನ್ನು ಕಳೆದುಕೊಂಡು ಹಣವೊಂದೇ ಮುಖ್ಯವಾಗಿರುವ ಯುವ ಸಮುದಾಯವನ್ನು ಭ್ರಮಾತ್ಮಕವಾಗಿ ವಶೀಕರಣಗೊಳಿಸುವುದು ಕೋಮುವಾದಿಗಳಿಗೆ ಮತ್ತು ಅಧಿಕಾರ ರಾಜಕಾರಣದ ಆಟಕ್ಕೆ ಸುಲಭವಾಗಿದೆ. ಈ ಕಥೆಯು ಹೇಳುವಂತೆ, ಇಲ್ಲಿಯ ಮಾರಪ್ಪನ ಹೊಟೇಲಿನ ಮುದುಕರು ತಮ್ಮ ಆಹಾರವನ್ನು ಕನಿಷ್ಠವಾಗಿಸುವ ಕ್ರೌರ್ಯವನ್ನು ಅರ್ಥಮಾಡಿಕೊಳ್ಳಬಲ್ಲರು. ತಮ್ಮ ಅತ್ಯಂತ ಇಕ್ಕಟ್ಟಿನ ಅವಕಾಶದಲ್ಲೂ ನ್ಯಾಯಸಮ್ಮತವಾದುದಕ್ಕೆ ಧ್ವನಿಯೆತ್ತಬಲ್ಲರು. ಬೀರನ ಹಾಗೆ ಒಂದಿಷ್ಟು ತಿಳುವಳಿಕೆ ಪಡೆದವರು ಅಲ್ಲಿ ವಿರಳ. ಬೀರನಿಗೆ ಕೊನೆಗೂ ಮುದುಕರೇ ಧ್ವನಿಗೂಡಬೇಕಾಗುತ್ತದೆ. ಯುವಕರಿಗೆ ತಿಳುವಳಿಕೆ ಸಿಗುತ್ತಿಲ್ಲ ಎಂದಲ್ಲ. ಪಡೆದುಕೊಳ್ಳುವುದು ಕಷ್ಟ ಎಂದೂ ಅಲ್ಲ. ಅದು ಅವರ ಆದ್ಯತೆಯಾಗೇ ಉಳಿದಿಲ್ಲ. ಗಿಲೀಟಿನ ಪ್ಯಾಟೆ ದುಡಿಮೆ, ಮೊಬೈಲ್, ಗೋಮಾಂಸ ಬ್ಯಾಡಾದ್ರೆ ಚಿಕನ್ ತಿಂದ್ರಾಯ್ತು ಎಂಬ ಸುಲಭದ ರಾಜಿಗೆ ಅವರು ತಲುಪಿಯಾಗಿದೆ. ತೋಪಮ್ಮ ತನ್ನ ಧ್ಯಾನಸ್ಥ ಸ್ಥಿತಿಯಲ್ಲಿ, ತಾನೇ ತಾನಾಗಿ ಪೂರ್ವ ಪರಂಪರೆಯ ಆಧಾರದಿಂದ ಎಷ್ಟೆಲ್ಲವನ್ನೂ ಕಾಣಬಲ್ಲಳೋ ಅದರ ಒಂದು ಅಂಶವನ್ನೂ ಕಾಣುವ ತಾಕತ್ತು ಇಂದಿನ ಹುಡುಗರಿಗಿಲ್ಲ– ಇದು ಮುಖ್ಯ ದುರಂತ.

ಇಂತಹದೊಂದು ಸಾಂಸ್ಕೃತಿಕ ಸಂಘರ್ಷ ನಡೆಯುವಾಗ ಉಂಟಾಗುತ್ತಿರುವ ವಿಷಾದನೀಯ ವಾಸ್ತವಕ್ಕೆ ಈ ಕಥೆಯು ಧ್ವನಿಯಾಗುತ್ತದೆ. ಅದರ ಪಾಡಿಗೆ ಅದು ಇದ್ದ ಊರೊಟ್ಟಿನ ಬದುಕಿನಲ್ಲಿ ಕೇಸರಿ ಪಾಳಯದವರು ಅಕಾರಣವಾಗಿ ಆಹಾರ ರಾಜಕಾರಣದ

ತಳ್ಳಂಕವನ್ನು ಬಿತ್ತನೆ ಮಾಡುತ್ತಾರೆ. ಶತಮಾನಗಳ ಅನ್ಯಾಯವನ್ನೂ ಸಹಿಸಿಕೊಂಡೂ ತಮ್ಮ ದೇವರು, ತಮ್ಮ ಆಚರಣೆ ಎಂದು ಒಂದಿಷ್ಟು ಅವಕಾಶ ಕಲ್ಪಿಸಿಕೊಂಡು ಆಧುನಿಕ ಬದುಕಿನ ವಿನ್ಯಾಸಕ್ಕೆ ಅದೇತಾನೇ ಬೇರೂರಲು ಯತ್ನಿಸುತ್ತಿರುವ ದಲಿತರನ್ನು ಕೋಮುವಾದ ಕದಡುತ್ತದೆ. ಅವರ ದೇವರ-ಸಂಪ್ರದಾಯದ ಒಳಗೆ ಪ್ರವೇಶಿಸುತ್ತದೆ. 'ಶುದ್ಧೀಕರಣ' ಮಾಡುತ್ತದೆ. ಊರಿಡೀ ಕೇಸರಿಮಯವಾಗುತ್ತದೆ. ಮಾರಮ್ಮನ ಮೂರ್ತಿ ಕಿತ್ತು ಬೇರೆ ದೇವರ ಮೂರ್ತಿ ಕೂಡಿಸಲಾಗುತ್ತದೆ. ದಲಿತರಿಗೇ ಅವರ ಗುಡಿಯಿಂದ ಅಲಿಖಿತ ಬಹಿಷ್ಕಾರವಾಗುತ್ತದೆ- ಈ ಎಲ್ಲ ಅನ್ಯಾಯ ಪರಂಪರೆಗಳನ್ನು ಆ ಕಡೆ ಒತ್ತರಿಸಿ, ಕಡೆಗೆ ಉಳಿಯುವುದು 'ಸ್ವಾಮಿಗಳಿಗೆ ಬಾಡೂಟ ಬಡಿಸಬಹುದೇ?' ಎಂಬ ಪ್ರಶ್ನೆ ಮಾತ್ರ. ಇದಕ್ಕಾಗಿ ಕೇರಿಗೆ ಕೇರಿಯೇ ಬೆಂಕಿ ಉಂಡಿದೆ. ಬಡಿಸಿಕೊಂಡಿದೆ. ಗಮನಿಸಬೇಕಾದದ್ದು- ಬಡವರ ದಲಿತರ ಕೋಪದ ಒಂದು ಸಣ್ಣ ಪ್ರತಿಕ್ರಿಯೆಗೆ ಎಷ್ಟೆಲ್ಲ ಅಧ್ವಾನಗಳು ಆಗುತ್ತವೆ. ಅವರನ್ನು ಅದಕ್ಕಾಗಿ ಕ್ರೂರವಾಗಿ ಶಿಕ್ಷಿಸಲಾಗುತ್ತದೆ. ಆದರೆ, ಅವರು ತಳಮಳಿಸುವಂತೆ, ಕೋಪಿಸಿಕೊಳ್ಳುವಂತೆ, ಶರಣಾಗತಿ ಅಥವಾ ಪ್ರತಿಭಟನೆ ಅಲ್ಲದೆ ಬೇರೆ ದಾರಿಯೇ ಇಲ್ಲದಂತೆ ಒತ್ತುವರಿ ಮಾಡುವಾಗ ಅದು ಯಾವುದೂ ಅನ್ಯಾಯವೆನಿಸುವುದಿಲ್ಲ. ತಪ್ಪು ಎನಿಸುವುದಿಲ್ಲ. ಇದು ಸಾಮಾಜಿಕ ವಿಷಮ ಸ್ಥಿತಿಯೆನ್ನುವುದನ್ನು ಈ ಕಥೆಯು ಕಾಣಿಸುತ್ತದೆ.

ಸಾಮಾಜಿಕ ಅಸ್ವಸ್ಥತೆಯ ಕಾಲದಲ್ಲಿ ಬರಹಗಾರ ಅನುಭವಿಸುವ ಉಸಿರುಗಟ್ಟಿಸುವ ಸಂಕಟದಿಂದ ಬಿಡುಗಡೆ ಪಡೆಯಲು ಇನ್ನೇನು ತಾನೆ ಮಾಡಬಲ್ಲ? ಆ ಉಸಿರುಗಟ್ಟಿಸುವ ಅನುಭವಗಳ ಬಗ್ಗೆಯೇ ಹೇಳಬೇಕು ಅಲ್ಲವೇ? ಅದನ್ನೇ ನೀಷೆ ಹೇಳುವುದು-

> ಕರಾಳ ದಿನಗಳಲ್ಲೂ ಬರೆಯುವುದೇ?
> ಹೌದು, ಕರಾಳತೆಯ ಬಗೆಗೇ ಬರೆಯುವುದು.

ಬೊಳುವಾರು ಮಹಮದ್ ಕುಂಞ ಅವರ ಬರಹದ ಬದುಕನ್ನು ನೋಡುವಾಗ ಈ ಮಾತು ಮರಳಿ ನೆನಪಾಗುತ್ತದೆ. ಕೂಡು ಬದುಕಿನ ರೂಪಕವಾಗಬೇಕಾದ ಭಾರತವನ್ನು ಒಡಕು ಬಿಂಬವಾಗಿಸುತ್ತಿರುವ ಕೋಮುವಾದಿ, ರಾಜಕಾರಣಕ್ಕೆ ಸಂವೇದನಾಶೀಲ ಪ್ರಜ್ಞೆ ನೀಡಬಹುದಾದ ಉತ್ತರ ಯಾವುದಾಗಿರುತ್ತದೆ? ಈ ಬದುಕಿನ ಆಳದಾಳದಲ್ಲಿ ಜಾತಿ-ಧರ್ಮಗಳ ಗೊಡವೆಯಿಲ್ಲದೆ, ಇದ್ದರೂ ಅದು ಮುಖ್ಯವಾಗದೆ ಬಹುವೈವಿಧ್ಯತೆಗಳಲ್ಲಿ ಏಕತೆಯನು ಬಾಳಿದ ಸೌಹಾರ್ದತೆಯ ಸೆಲೆಗಳನ್ನು ಶೋಧಿಸುವುದು ಮತ್ತು ಅದನ್ನು ಉತ್ತರವಾಗಿ ಮುಂದಿಡುವುದು. ಹಾಗೆ ಶೋಧಿಸುವ ದಾರಿಗೆ ಎರಡು ಕವಲುಗಳಿವೆ ಒಂದು,

ಪರಂಪರೆಯೊಳಗೆ ಬೆರೆತ ಆ ಅಂತರ್‌ಧಾರೆಯನ್ನು ಹುಡುಕುವುದು. ಇನ್ನೊಂದು ಇಂದಿನ ಜನಸಾಮಾನ್ಯರ ಬದುಕಿನಲ್ಲಿ ಸಹಜವಾಗಿಯೇ ಹುದುಗಿರುವ ಜೀವಗೌರವದ ಸಾತತ್ಯದ ನಿಲುವುಗಳನ್ನು ಎದುರಿಡುವುದು. ಈ ಎರಡೂ ಪರಿಣಾಮೀ ದಾರಿಗಳೇ. ಆದರೆ ವರ್ತಮಾನದ ಗಾಯಕ್ಕೆ ವರ್ತಮಾನದ್ದೇ ಮದ್ದು ಅರೆಯುವ ಎರಡನೆಯ ಹಾದಿಯು ಸವಾಲಿನದೂ ಹೌದು. ಮತೀಯ ಭ್ರಾಂತತೆಯನ್ನು ನಿರುತ್ತರಗೊಳಿಸುವುದೂ ಹೌದು. ಬೊಳುವಾರು ಅವರ ಮುಖ್ಯ ತ್ರಾಣ ಈ ಎರಡೂ ದಾರಿಗಳನ್ನು ಹಸನುಗೊಳಿಸುತ್ತ ನಡೆದಿದೆ. ಜಿಹಾದ್ ಕಾದಂಬರಿಯಲ್ಲಿಯೇ, ಮನುಷ್ಯ ಸಂಬಂಧವನ್ನು ಧರ್ಮದ ದುರ್ಬಲ ಗೋಡೆಯಿಂದ ವಿಂಗಡಿಸಲಾದೀತೇ? ಎಂಬ ಪ್ರಶ್ನೆಯನ್ನು ಮುಂದಿಡುತ್ತಾರೆ. ಆಧುನಿಕತೆಯು ಮನುಷ್ಯ ಸಂಬಂಧವನ್ನು ಮರುಬೆಸೆಯುವ ವೇದಿಕೆಯಾಗುತ್ತದೆ- ಎಂಬ ನಂಬಿಕೆಯು ಬಲುಬೇಗನೆ ಕುಸಿದು ಹೋಯಿತು. ಬಂಡವಾಳೋದ್ಯಮಕ್ಕೆ ಮನುಷ್ಯ ಸಮಾಜದಲ್ಲಿ ದ್ವೇಷ ತಳಮಳಗಳಿದ್ದಷ್ಟೂ ಲಾಭ ಎಂಬ ಸತ್ಯ ಮನದಟ್ಟಾಗಿತ್ತು. ವ್ಯಕ್ತಿ ನಂಬಿಕೆಗಿಂತಲೂ ವಸ್ತು ನಂಬಿಕೆಯು ಹೆಚ್ಚಬೇಕು. ಅದರಿಂದ ಮಾರುಕಟ್ಟೆಯು ಜನರು ನೆಮ್ಮದಿಯನ್ನು ಅರಸುವ ತಾಣವೂ ಆಗಿ ಬದಲಾಗುತ್ತದೆ. ಬದಲಾಗಬೇಕು. ಈ ಕಾಲಘಟ್ಟದ ವಿಷಾದ ವಾಸ್ತವವು ಆಧುನಿಕ ಸೌಲಭ್ಯಗಳಿಂದ ಮೂಲಭೂತವಾದವು ಬಲಿಯುತ್ತ ಹೋಗಿದ್ದಕ್ಕೆ ಸಾಕ್ಷಿಯಾಗಬೇಕಾಯಿತು.

ಬಾಬರಿ ಮಸೀದಿ ಧ್ವಂಸದ ರಾಮಜನ್ಮಭೂಮಿ ವಿವಾದವು ಈ ದೇಶದ ಮತೀಯ ಸೌಹಾರ್ದತೆಯನ್ನು ಅಡ್ಡಡ್ಡ-ಉದ್ದುದ್ದ ಸೀಳಿಹಾಕಿತು. ಅಥವಾ ರಾಜಕೀಯ ಅಧಿಕಾರವನ್ನು ಪಡೆಯಲು ರಾಮಜನ್ಮಭೂಮಿ ವಿವಾದವನ್ನು ತೀವ್ರಗೊಳಿಸಲಾಯಿತು. ಇದು ದೇಶದ ಆ ತುದಿಯಲ್ಲಿ ನಡೆಯುತ್ತಿರುವ ಸಂಗತಿಯೆಂದು ಕನ್ನಡ ಪ್ರಜ್ಞೆ ಸ್ವಸ್ಥವಾಗುಳಿಯುವುದೂ ಸಾಧ್ಯವಿಲ್ಲವಾಯಿತು. ಭಾಜಪ ಪಕ್ಷದಲ್ಲಿ ಈಗ ತುಂಬ ಮೃದು ಧೋರಣೆಯ ರಾಜಕಾರಣಿಯಂತೆ ಕಾಣುತ್ತಿರುವ ಎಲ್.ಕೆ.ಅಧ್ವಾನಿಯವರ ರಥಯಾತ್ರೆಯು ದೇಶದ ಊರೂರಿನ ಓಣಿ ಓಣಿಗಳನ್ನು ಹೊಕ್ಕಾಡಿ, ಹಿಂದೂ-ಮುಸ್ಲಿಂ ದ್ವೇಷದ ಕರಾಳ ಅಧ್ಯಾಯವನ್ನು ಪುನರ್ ಸಂಘಟಿಸಿತು. ಹಿಂದೂ-ಮುಸ್ಲಿಂರನ್ನು ಶಾಶ್ವತ ವೈರಿಗಳಾಗಿಸಿ, ಹಿಂದೂತ್ವ ಎಂಬ ಭ್ರಮಾತ್ಮಕ ಐಕ್ಯವನ್ನು ಬಿಂಬಿಸುವ ಮೂಲಕ ಬಹುಸಂಖ್ಯಾತರನ್ನು ಒಲಿಸಿಕೊಂಡು ಅತ್ಯಂತ ಸುಲಭವಾಗಿ ರಾಜಕೀಯ ಅಧಿಕಾರವನ್ನು ಸ್ಥಾಪಿಸುವ ಹಾಗೂ ಆರ್ಥಿಕ ಪ್ರಾಬಲ್ಯವನ್ನು ಪಡೆಯುವ ಕಾರ್ಯತಂತ್ರವನ್ನು ಹಿಂದೂತ್ವ ಪಕ್ಷವೆಂದೇ ಗುರುತಿಸಿಕೊಂಡಿರುವ ಬಿಜೆಪಿ ಮತ್ತು ಆರ್.ಎಸ್.ಎಸ್.ಗಳು ಕಾರ್ಯಾಚರಣೆಗೆ ತಂದವು. ಇದರ

ಪ್ರಯೋಗ ಪ್ರದರ್ಶನಗಳು ಹಲವು ಕಾರಣಗಳಲ್ಲಿ ಹಲವು ರೂಪಗಳಲ್ಲಿ ನಡೆದವು. ಕ್ರಿಶ್ಚಿಯನ್ ಪಾದ್ರಿಯ ಮೇಲೆ ಭೀಕರ ಹಿಂಸೆ, ಕ್ರೈಸ್ತ ಸನ್ಯಾಸಿನಿಯರನ್ನು ಬರ್ಬರವಾಗಿ ಅಪಮಾನಿಸಿದ್ದು, ಗುಜರಾತ್‌ನಲ್ಲಿ ನಡೆಯಿಸಿದ ನರಮೇಧಗಳೆಲ್ಲವೂ ಹಿಟ್ಲರಶಾಹಿ ಆಳ್ವಿಕೆಯನ್ನು ರೂಢಿಸಲು ಕಾರಣಗಳಾದವು. ದೇಶದ ನರನಾಡಿಗಳನ್ನೇ ಸತ್ವಹೀನಗೊಳಿಸಿದ ಇಂತಹ ಘಟನೆಗಳ ಜೊತೆಜೊತೆಯಲ್ಲಿಯೇ ಸ್ಥಳೀಯವಾಗಿರುವ ಸೌಹಾರ್ದತೆಯ ಬದುಕನ್ನು ಕದಡುವ ಪ್ರಯತ್ನಗಳೂ ನಡೆದವು. ಕರ್ನಾಟಕದ ವಾಸ್ತವದಲ್ಲಿ ಬಾಬಾಬುಡನ್‌ಗಿರಿಯ ವಿವಾದದ ಘಟನೆಯನ್ನು ನೆನಪಿಸಿಕೊಳ್ಳಬಹುದು. ದೇಶದಲ್ಲಿ ಕೋಮುವಾದಿ ರಾಜಕಾರಣವು ಅಧಿಕಾರಕ್ಕೆ ಬಂದಂತೆ, ಇಡೀ ದೇಶವನ್ನು ಏಕರೂಪೀ ಸಂಕಥನದಲ್ಲಿ ಮರಳಿ ರೂಪಿಸುವ ಪ್ರಯತ್ನಗಳು ನಡೆದವು. ಕೋಮುವಾದದ ವಿಷ ಯಾವ ಸ್ವರೂಪದಲ್ಲಿ ಮತ್ತು ಅದೆಷ್ಟು ತೀವ್ರವಾಗಿ ಹರಡಿತು ಎಂದರೆ, ಅದನ್ನು ತಣಿಸುವ ತಣಿಗೆ ಬಟ್ಟಲು ಕಾಣೆಯಾಗಿ ಬಿಟ್ಟ ಯಾತನೆ ಆವರಿಸತೊಡಗಿತು. ಸಮುದ್ರ ಮಥನದ ಕಾಲದಲ್ಲಿ ಉದ್ಭವವಾದ ವಿಷವನ್ನು ಹೀರಿ ಶಿವನು ನೀಲಕಂಠನಾದ. ಈ ಲೋಕವನ್ನು ಕಾಪಾಡಿದ. ಭಾರತದ ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಬಾಪೂಜಿ 'ಈಶ್ವರ ಅಲ್ಲಾ ತೇರೋ ನಾಮ್' ಎಂಬ ಪ್ರಾರ್ಥನೆಯನ್ನು ಕಲಿಸುತ್ತ, ಹಿಂದೂ–ಮುಸ್ಲಿಂ ದಳ್ಳುರಿಗೆ ತಮ್ಮನ್ನೇ ತಾವು ಒಡ್ಡಿಕೊಂಡರು. ಜಾಗತೀಕರಣ ಸಂದರ್ಭದ ಭಾರತದ ಸ್ಥಿತಿಯು ದೇಶವಿಭಜನೆಯ ಕಾಲದ ಸ್ಥಿತಿಗಿಂತಲೂ ಭಯಾನಕವಾಗಿತ್ತು. ಆಗಿನ ಹಿಂಸೆಯಲ್ಲಿ ಜನಸಮುದಾಯದ ರೋಷ ಮತ್ತು ತಕ್ಷಣದ ಪ್ರತಿಕ್ರಿಯೆಗಳಿದ್ದವು. ಪ್ರಭುತ್ವ ಅದನ್ನು ಉಪಶಮನಗೊಳಿಸುವ ಸಾಧ್ಯತೆಗಳಿದ್ದವು. ಹಿಂಸೆಯನ್ನು ಹಿಂಸೆಯಿಂದಲ್ಲ, ಕ್ಷಮೆಯಿಂದ ಎದುರಿಸಬೇಕೆಂಬ ಗಾಂಧೀಜಿಯ ತತ್ತ್ವಾದರ್ಶಗಳಿದ್ದವು. ವ್ಯಕ್ತಿಗತ ಶಾಂತಿ ಮತ್ತು ಉದಾರತೆಯ ಮೂಲಕವೇ ಸಮಾಜದ ಶಾಂತಿ ಮತ್ತು ಉದಾರತೆಯನ್ನು ಕಾಪಾಡಿಕೊಳ್ಳಬಹುದೆಂಬುದು ಗಾಂಧೀ ಚಿಂತನೆಯಾಗಿತ್ತು. ಕೋಮುಹಿಂಸೆಯ ಆ ದಳ್ಳುರಿಯಲ್ಲಿ ತನ್ನ ಮಗನನ್ನು ಕಳೆದುಕೊಂಡ ಹಿಂದೂಧರ್ಮದ ವ್ಯಕ್ತಿಯೊಬ್ಬರು, ಗಾಂಧೀಜಿಯವರನ್ನು ಒಂದು ಸಾರ್ವಜನಿಕ ಸಭೆಯಲ್ಲಿ ಆವೇಶಭರಿತರಾಗಿ ಪ್ರಶ್ನಿಸುತ್ತಾರೆ. 'ಹೇಳಿ ಬಾಪೂ ಈಗ ನಾನೇನು ಮಾಡಬೇಕು? 'ಗಾಂಧೀಜಿ ಶಾಂತ ಮತ್ತು ದೃಢ ಚಿತ್ತದಿಂದ ಹೀಗೆ ಉತ್ತರಿಸುತ್ತಾರೆ "ಈ ಕೋಮು ಹಿಂಸೆಯಲ್ಲಿ ಹೆತ್ತವರನ್ನು ಕಳೆದುಕೊಂಡು ಅನಾಥನಾಗಿರುವ ಒಬ್ಬ ಮುಸ್ಲಿಂ ಬಾಲಕನನ್ನು ದತ್ತು ತೆಗೆದುಕೊಳ್ಳಿರಿ. ಅವನನ್ನು ನಿಮ್ಮ ಮಗನಂತೆಯೇ ಪ್ರೀತಿಸಿ ಬೆಳೆಸಿರಿ.ಅವನಿಗೆ ಅವನ ಧರ್ಮದ ತತ್ತ್ವಗಳನ್ನು ತಿಳಿಯಲು ಮತ್ತು ಪಾಲಿಸಲು ಅವಕಾಶ ಕಲ್ಪಿಸಿರಿ. ಈ ಪ್ರಯಾಣದ ಕೊನೆಯಲ್ಲಿ ನಿಮ್ಮ ಪ್ರಶ್ನೆಗೆ ಸರಿಯಾದ

ಉತ್ತರ ಸಿಗುತ್ತದೆ. ನಿಮ್ಮ ಕೋಪಕ್ಕೆ ಸರಿಯಾದ ಉಪಃಶಮನ ದೊರೆಯುತ್ತದೆ" ಮಾತು ಮುಗಿಸುತ್ತ ಗಾಂಧೀಜಿ ಕಣ್ಣೊರೆಸಿಕೊಂಡರಂತೆ. ಆ ವ್ಯಕ್ತಿಯೂ ಕಣ್ಣೊರೆಸಿಕೊಂಡರಂತೆ. ನಮ್ಮೀ ಕಾಲದಲ್ಲಿ ಅಸಂಗತ ಚಿತ್ರದಂತೆ ಕಾಣುವ ಕಥನವಿದು. ಇದನ್ನು ಉಲ್ಲೇಖಿಸಿಕೊಂಡ ಕಾರಣ ಏನೆಂದರೆ, ಭಾರತ–ಪಾಕಿಸ್ತಾನ ವಿಭಜನೆಯ ಹಿಂಸೆಯನ್ನು ತಣಿಸುವ, ಮನುಷ್ಯರಿಗೆ ಮರಳಿ ಮಾನವೀಯ ಘನತೆಯನ್ನು ನೆನಪಿಸುವ ಕಾಲ–ಸಂದರ್ಭ ಅದಾಗಿತ್ತು. ಆದರೆ, ಆಧುನಿಕೋತ್ತರ ಕಾಲಘಟ್ಟದ ಕೋಮುವಾದವು ಪ್ರಭುತ್ವ ಪ್ರೇರಿತವಾಗಿತ್ತು. ರಾಜಕೀಯ ಲಾಭವನ್ನು ಉದ್ಧೇಶಿಸಿಕೊಂಡಿತ್ತು. ಇದಕ್ಕಾಗಿ ಜನಸಾಮಾನ್ಯರನ್ನು ಮುಖ್ಯವಾಗಿ ಬಡ ಕುಟುಂಬಗಳ ಯುವಕರನ್ನು ಕೋಮುವಾದದ ಕೇಡರ್‌ಗಳನ್ನಾಗಿ ಬಹುಕಾಲ ತರಬೇತಿಗೊಳಿಸಿ ತಯಾರು ಮಾಡಲಾಗಿತ್ತು. ಸಮಾಜದಲ್ಲಿ ಆರ್ಥಿಕ ಅಸಮಾನತೆ, ನಿರುದ್ಯೋಗಗಳಂತಹ ವೈಪರೀತ್ಯಗಳು ಬೆಳೆಯತೊಡಗಿದಂತೆ ಜನರನ್ನು ನಿಜವಾದ ಕಾರಣದಿಂದ ದೂರವಿಡುವ, ಅವರ ಮನಸ್ಸಿನಲ್ಲಿ 'ಕಲ್ಪಿತ ವೈರ' ವನ್ನು ಜೀವಂತವಾಗಿಡುವ ಕೋಮುವಾದಿ ರಾಜಕಾರಣ ಬೆಳೆಯಿತು. ಅಂತರಾಷ್ಟ್ರೀಯ ಸಂಬಂಧಗಳಲ್ಲಿ ದೇಶದ ಘನತೆಯನ್ನು ಹೆಚ್ಚಿಸುವುದು ಅಣುಬಾಂಬು ಮತ್ತು ಸೈನ್ಯವೆಂದೂ; ದೇಶದೊಳಗಿನ ಆಂತರಿಕ ಪ್ರಶ್ನೆಗಳನ್ನು ಅಡಗಿಸಲು, ಅಭಿವೃದ್ಧಿ ಎಂಬುದರ ಸರಿಯಾದ ವಿಶ್ಲೇಷಣೆಯನ್ನು ಜನರು ಮಾಡದಂತೆ ತಡೆಯಲು ಕೋಮುಹಿಂಸೆಯಲ್ಲಿ ಅವರನ್ನು ಸದಾ ಸಿಡಿಯಲು ಸಿದ್ಧವಾದ ಬಾಂಬರ್‌ಗಳಾಗಿ ಇಡುವುದು ಎಂದು ವಿಕೃತ ಅನುಶಾಸನವನ್ನು ರೂಪಿಸಿಕೊಂಡ ಪರಿಣಾಮವಾಗಿ– ಭಾರತ ಇನ್ನಿಲ್ಲದ, ಈ ಹಿಂದೆ ಎಂದೂ ಅನುಭವಿಸದ ಕೋಮುಹಿಂಸೆಯ ಯಾತನೆಯಲ್ಲಿ ಸಿಲುಕಿಕೊಂಡಿತು. ಜಾತಿವಾದಿತನ ಎನ್ನುವುದು ಸಂಸ್ಕೃತಿ ಎಂದು ಅರ್ಥೈಸಲಾಯಿತು. ಧರ್ಮಾಂಧತೆಯನ್ನು ಭಾರತೀಯತೆ ಎಂದು ಘೋಷಿಸಲಾಯಿತು. ಭಾರತದ ಈ ದಾರುಣ ವಾಸ್ತವವನ್ನು ವಿವರಿಸಿಕೊಳ್ಳುವ, ವಿವರಿಸುವ ತೀವ್ರತೆಯಲ್ಲಿಯೇ ಸರಿ–ತಪ್ಪುಗಳನ್ನು ಮನಸ್ಸಿನ ಆಳಕ್ಕೆ ಎದುರಿಡುವ, ತಪ್ಪನ್ನು ಸರಿಪಡಿಸುವ, ನೋವಿಗೆ ಮುಲಾಮು ಹಚ್ಚುವ ಹಾದಿಗಳನ್ನು ತೆರೆದಿಡುವ ವಿಭಿನ್ನ ಅವತಾರಗಳಲ್ಲಿ ಸಂವೇದನಾಶೀಲತೆಯು ಶ್ರಮಿಸಬೇಕಾಯಿತು. ಯಾಕೆಂದರೆ, ಈ ಕಾಲಘಟ್ಟದಲ್ಲಿ ಸೃಜನಶೀಲ ಮನಸ್ಸುಗಳು, ಸಂಶೋಧನಾ ಪ್ರಜ್ಞೆಗಳೂ ಮತೀಯ ಜಾಡ್ಯತೆಯಿಂದ ಕೋಮುವಾದದ ಪರವಾಗಿ ಕೆಲಸ ಮಾಡಿವೆ. ಎಸ್.ಎಲ್. ಭೈರಪ್ಪನವರ 'ಆವರಣ' ಎಂಬ ಕಾದಂಬರಿ ಬಂದ ಕಾಲವಿದು. ಮುಸ್ಲಿಂ ಮತೀಯರನ್ನು ಅಪಮಾನಿಸುವುದೇ ಸೃಜನಶೀಲತೆಯಾದ ಈ ಕಾದಂಬರಿಯು ಒಂದು ಸಿದ್ಧಾಂತದ ಕರಪತ್ರದಂತೆ ಕೆಲಸ ಮಾಡಿದ ಕಾಲವಿದು.

ಕನ್ನಡದಲ್ಲಿಯೇ ಅತೀಹೆಚ್ಚು ಮಾರಾಟವಾದ ಕೃತಿ 'ಆವರಣ' ಎಂಬ ಘೋಷಣೆಯನ್ನು ಮಾಡಿಕೊಂಡ ಕಾಲವಿದು. ಆವರಣವನ್ನು ಕನ್ನಡದ ಪ್ರಮುಖ ಐತಿಹಾಸಿಕ ಕಾದಂಬರಿ ಎಂದು 'ವಿಮರ್ಶಕರು' ಹೇಳಿದ ಕಾಲವೂ ಇದು. ಆವರಣದಂತಹ ಕಾದಂಬರಿಯನ್ನು 'ಸೃಜನಶೀಲ ಕೃತಿ' ಎನ್ನುವುದಾದರೆ ಸೃಜನಶೀಲತೆ ಎನ್ನುವ ಪದಕ್ಕಿರುವ ಅರ್ಥವಾದರೂ ಏನು? ಎಂಬ ಪ್ರಶ್ನೆಯನ್ನು ಕನ್ನಡದ ವೈಚಾರಿಕ ಮನಸ್ಸುಗಳು ಚರ್ಚೆಯ ಮುನ್ನೆಲೆಗೆ ತಂದ ಕಾಲವೂ ಇದು. ಆವರಣದಂತಹ ಒಂದು ಕೃತಿಯ ಕೋಮುವಾದಿ ನಿಲುವನ್ನು ಕನ್ನಡ ಸಂವೇದನೆ ತೀಕ್ಷ್ಣವಾಗಿ ವಿರೋಧಿಸಿ, ಅದಕ್ಕೆ ಪ್ರತಿಯಾಗಿ ಪರ್ಯಾಯ ನಿಲುವುಗಳನ್ನು ಮಂಡಿಸಿದ ಕಾಲವೂ ಇದಾಗಿತ್ತು. ಆವರಣ ಕೃತಿಯನ್ನು ಕೋಮುವಾದಿ ಸಂದರ್ಭದಲ್ಲಿ ಕನ್ನಡದ ರೂಪಕವಾಗಿಸಿಕೊಂಡರೆ ಈ ಕಾಲಘಟ್ಟವು ಅನುಭವಿಸಿದ ಸಂಘರ್ಷದ ಪುಟಗಳು ತೆರೆಯುತ್ತವೆ.

ಸಾಹಿತ್ಯ, ಕಲೆ, ವಿಮರ್ಶೆಗಳ ಎಲ್ಲ ಸಂಘಟನಾ ಸಂಸ್ಥೆಗಳಲ್ಲಿ ಸರ್ಕಾರೀ, ಅರೆಸರ್ಕಾರೀಗಳಲ್ಲಿ ಕೋಮುವಾದಿ ಮನಸ್ಸುಗಳು ಪ್ರವೇಶಿಸಲು ಆ ಮೂಲಕ ವರ್ತಮಾನದ ಸಾಂಸ್ಕೃತಿಕ ಚಹರೆಯನ್ನೇ ಕೋಮುವಾದೀಕರಣಗೊಳಿಸಲು ಶತಾಯಗತಾಯ ಪ್ರಯತ್ನಿಸಿದ ಕಾಲಾವಧಿ ಇದಾಗಿತ್ತು. ರಾಜ್ಯ–ಕೇಂದ್ರ ಆಡಳಿತಗಳಲ್ಲಿ ಯಾವ ಪಕ್ಷವು ಅಧಿಕಾರವನ್ನು ಹಿಡಿಯುತ್ತದೆ ಎನ್ನುವುದು; ಆ ಅವಧಿಯ ಸಾಂಸ್ಕೃತಿಕ ವಿದ್ಯಮಾನವನ್ನು ನಿರ್ಣಯಿಸುವ ಸಂಗತಿಯಾಯಿತು. ಜಾಗತೀಕರಣದ ಈ ಕಾಲಘಟ್ಟದಲ್ಲಿಯೇ ದೇಶದಾದ್ಯಂತ ಸಾಹಿತ್ಯ–ಸಂಸ್ಕೃತಿ ಕ್ಷೇತ್ರದಲ್ಲಿ ವಿಭಿನ್ನ ಸ್ಥಿತ್ಯಂತರಗಳು ಸಂಭವಿಸಿದವು. ಅದುವರೆಗೂ ಪ್ರಜಾಸತ್ತಾತ್ಮಕ ನಿಲುವಿನಲ್ಲಿದ್ದ ಸಾಹಿತ್ಯ–ಕಲೆಗಳ ಸಂಘಟನೆಯನ್ನು ಮತೀಯ ಗುಂಪುಗಾರಿಕೆಯ, ಜಾತಿಯಾಧಾರಿತ ಚುನಾವಣೆಯ ಅಖಾಡವಾಗಿಸಲಾಯಿತು. ಬಂಡವಾಳೋದ್ಯಮಗಳು ಮತ್ತು ಬಂಡವಾಳಶಾಹಿ ಗುಂಪುಗಳು ಸಾಹಿತ್ಯಿಕ ಹಬ್ಬ–ಹರಿದಿನಗಳನ್ನು ವಿಜೃಂಭಣೆಯಿಂದ ಆಚರಿಸುತ್ತ; ಸಾಹಿತ್ಯವು ತನ್ನ ಪ್ರಶ್ನಿಸುವ ಶಕ್ತಿಯನ್ನು ಕಳೆದುಕೊಂಡು ಪೇಲವವಾಗಲು ಶ್ರಮಿಸಿದರು. ಇದರ ಜೊತೆ ಜೊತೆಗೇ ಕೋಮುವಾದಿ ಅಜೆಂಡಾಗಳನ್ನು ತಮ್ಮ ಪಾದಗಳಾಗಿಸಿಕೊಂಡಿರುವ ರಾಜಕೀಯ ಪಕ್ಷಗಳ ಸರ್ಕಾರಗಳು ಊರೂರುಗಳಲ್ಲಿ ಸೀಮೆ ಸೀಮೆಗಳಲ್ಲಿ ಸಾಂಸ್ಕೃತಿಕ ಉತ್ಸವಗಳನ್ನು ಆಚರಿಸತೊಡಗಿದವು. ಇವು ಅದೆಷ್ಟು ಭರಾಟೆಯಿಂದ ನಡೆಯಿತು ಎಂದರೆ– ಜನಸಾಮಾನ್ಯರು ಮತ್ತು ಸಾಹಿತ್ಯ ಸಾಂಸ್ಕೃತಿಕ ವಲಯಕ್ಕೆ ಅದೇ ತಾನೇ ಪ್ರವೇಶ ಪಡೆಯುತ್ತಿರುವ ಯುವಕರು– ಸಾವಿರಾರು ವರ್ಷಗಳ ಕಾವ್ಯಮೀಮಾಂಸೆಯ ತಿಳಿವಿಗಿಂತಲೂ ಬೇರೆಯಾದ ಕಾವ್ಯಕಾರಣ–ಪರಿಣಾಮಗಳ

ಸುಳಿಯಲ್ಲಿ ಸಿಲುಕಿಕೊಂಡಿದ್ದರು. ಕೋಮುವಾದವು ಸಮಾಜದ ಜೀವನ ಶೈಲಿಯನ್ನು ಬದಲಿಸಲು ತನ್ನನ್ನು ಪ್ರಾಮಾಣಿಕವಾಗಿ ತೊಡಗಿಸಿಕೊಂಡಿತ್ತು. ಇದು ಯಶಸ್ವಿಯಾಗಲು ಸಾಂಸ್ಕೃತಿಕ ಪರಿವರ್ತನೆಯು ಸಂಭವಿಸಬೇಕಾಗಿತ್ತು. ಕೋಮುವಾದವು ತನ್ನೆಲ್ಲ ನಯವಾದ ರಾಜಕಾರಣದ ದಾಳವನ್ನು ಉರುಳಿಸುತ್ತ, ಸಾಹಿತ್ಯ-ಸಾಂಸ್ಕೃತಿಯನ್ನು 'ಮನರಂಜನಾ ವಿಷಯ'ವಾಗಿಸಲು ಪ್ರಯತ್ನಿಸುತ್ತಿತ್ತು. ಹೀಗಾಗಿ ಜಾಗತೀಕರಣ ಸಂದರ್ಭದ ಭಾರತೀಯ ಸಾಹಿತ್ಯವು, ಕನ್ನಡವನ್ನೂ ಒಳಗೊಂಡಂತೆ ಈ ಇಬ್ಬಾಯ ಕತ್ತಿಯನ್ನು ಎದುರಿಸಿಕೊಂಡು ತನ್ನ ಸ್ವಾಯತ್ತ ನಿಲುವು-ಚೆಲುವುಗಳನ್ನು ಉಳಿಸಿಕೊಳ್ಳಬೇಕಾಗಿತ್ತು. ಇಂತಹ ಹೋರಾಟದ ಹಾದಿಯಲ್ಲಿ ಅರಳಿದ ಹೂಗಳು ಹಲವಾರು. 'ನಮ್ಮೊಳಗೂ ದಿಢೀರನೆ ಹುಟ್ಟಿಬಿಡಬಲ್ಲ ಹಿಟ್ಲರನ' ಕುರಿತ ಆತಂಕದಲ್ಲಿ ಜನಾಂಗೀಯ ಹಲ್ಲೆಯನ್ನು ಅದರ ದೂರಗಾಮಿ ಪರಿಣಾಮವನ್ನು ಮಾನವೀಯ ಅಂತಃಕರಣದ ಸೆಲೆಯಲ್ಲಿ ಅದ್ದಿತೆಗೆದ ನೇಮಿಚಂದ್ರ ಅವರ 'ಯಾದ್ ವಶೇಮ್' ಎಂಬ ಕಾದಂಬರಿ ಹುಟ್ಟಿತು. ಬೊಳುವಾರು ಮಹಮ್ಮದ್ ಕುಂಞ ಅವರು, ಈ ನೆಲದ ತಣಿಗೆ ಬಟ್ಟಲಲ್ಲಿ ಅದ್ದಿರುವ ಬಹುತ್ವದ ಬೇರುಗಳ ಸಾಮರ್ಥ್ಯವನ್ನು ಕಾಣಿಸುವ ಧ್ಯಾನಸ್ಥ ಸ್ಥಿತಿಯಲ್ಲಿ ಬರೆಯುವುದೇ ವ್ರತವೆಂಬ ಹಾಗೆ ಬರೆದರು. ಅವರ ಸ್ವಾತಂತ್ರ್ಯದ ಓಟ, ಉಮ್ಮಾ, ಓದಿರಿ ಈ ಕಾದಂಬರಿಗಳು ಬಂದಿದ್ದು ಈ ಕಾಲದಲ್ಲಿಯೇ. ಕನ್ನಡದ ಕಾವ್ಯವಂತೂ, 'ಗಮ್ ಜೌರ್ ಭಿ ಹೈ ಇಸ್ ಯನಿಯಾಮೆ, ಮೊಹಬ್ಬತ್ ಕೆ ಸಿವಾ' ಎಂಬ ವಾಣಿಯಂತೆ, ವ್ಯಕ್ತಿಗತ ಪ್ರೇಮ-ಕಾಮಗಳಿಗಿಂತಲೂ ಹೊರತಾದ, ವಿಸ್ತಾರವಾದ ಮಾನವೀಯ ಪ್ರೇಮದ ನೆಲೆಯನ್ನು ತಡಕಾಡಿತು. ಅತ್ಯಂತ ಜಾಣ್ಮೆ, ಕೌಶಲ್ಯ, ಪ್ರತಿಭೆಗಳನ್ನು ಹೊಂದಿರುವ ಮನುಷ್ಯನ ಆಳದಲ್ಲಿ ಕೀಳು ಸ್ವಾರ್ಥ, ಅಸಹನೆಗಳು ಪುಟಿದೇಳಲು ಇರುವ ಕಾರಣಗಳಾದರೂ ಏನು? ಎಂಬ ಪ್ರಶ್ನೆಯನ್ನು ಮುಂದಿಟ್ಟುಕೊಂಡು ಮಾನವ ಬದುಕಿನ ಜಿಜ್ಞಾಸೆಗೆ ತನ್ನನ್ನು ತೆತ್ತುಕೊಂಡಿತು. ತನ್ನೊಳಗನ್ನು ಮಾತ್ರವಲ್ಲ, ತನ್ನ ಸುತ್ತಲ ಲೋಕವನ್ನು ಆ ಲೋಕದೊಳಗಿನ ತಳಾದಿಯನ್ನು ಮರುಪ್ರವೇಶಿಸುವ ಹೊಣೆಗಾರಿಕೆಯನ್ನು ಹೊತ್ತುಕೊಂಡಿತು. ಕನ್ನಡದ ವಿಮರ್ಶೆ ಮತ್ತು ಸಂಶೋಧನೆಗಳು ಈ ಸೌಹಾರ್ದತೆಯ ಎಳೆಗಳನ್ನು ಜೋಡಿಸುವ ಪ್ರಯತ್ನದಲ್ಲಿ ನಿರತವಾದವು. ಕನ್ನಡದ ಸೃಜನಶೀಲತೆಯು ತನ್ನ ಬೌದ್ಧಿಕ ಜವಾಬ್ದಾರಿಯನ್ನು ಹೇಗೆಲ್ಲ ಶೋಧಿಸಿಕೊಂಡಿತು ಎನ್ನುವುದಕ್ಕೆ, ಈ ಕಾಲಘಟ್ಟದಲ್ಲಿ ಕನ್ನಡದ ಜನಮಾನಸವನ್ನು ಮಾನವೀಯವಾಗಿ ಸ್ಪರ್ಶಿಸಿದ ಸಿನಿಮಾ, ನಾಟಕಗಳ ಜಗತ್ತು ಪುರಾವೆಯಾಗಿದೆ. ಕಳೆದ ಮೂರು ದಶಕಗಳಲ್ಲಿ ಕನ್ನಡವು ಮರಮರಳಿ ಮಲೆಮಾದೇಶ್ವರ, ಮಂಟೇಸ್ವಾಮಿಗಳಂತಹ ಜನಪದ ಮಹಾಕಾವ್ಯಗಳನ್ನು ಅನುಸಂಧಾನಿಸಿಕೊಂಡಿದ್ದು ಯಾಕೆ?

ಕನ್ನಡ ಸಂವೇದನೆಯು ಸೂಫಿ ಸಂಗೀತದ ಆರಾಧನಾ ಪರವಾದ ತಿಳುವಳಿಕೆಯನ್ನು ವಿಸ್ತರಿಸಿಕೊಂಡಿದ್ದರ ಕಾರಣವೇನು? ಜನಪದ ಸಾಹಿತ್ಯ ಮಾತ್ರವಲ್ಲದೆ ತತ್ತ್ವಪದಗಳ ಹಾಡುಗಾರಿಕೆಯನ್ನು ಸಾಕ್ಷೀಕರಿಸಿಕೊಂಡಿದ್ದರ ಕಾರಣವೇನು? ಸಾಂಸ್ಕೃತಿಕವಾಗಿ ಸಹಜ ಎನ್ನುವಂತೆ ಕಾಣುವ ಈ ಎಲ್ಲ ಬೆಳವಣಿಗೆಗಳ ಹಿಂದೆ ಇರುವ ಕನ್ನಡ ಪ್ರಜ್ಞೆಯ ಒತ್ತಡವನ್ನು ಗಮನಿಸಿದರೆ, ಅದು ಕೋಮುವಾದಿ ಸವಾಲುಗಳಿಗೆ ಉತ್ತರಿಸುತ್ತ ಪರ್ಯಾಯಗಳನ್ನು ರೂಪಿಸಿಕೊಳ್ಳುವುದೇ ಆಗಿತ್ತು. ಇಂತಹ ವಿದ್ಯಮಾನಗಳ ಕಾಲದಲ್ಲಿ ಕನ್ನಡದ ಸಣ್ಣಕಥಾ ಪ್ರಕಾರವು ಕೋಮುವಾದಿ ಶಕ್ತಿಗಳು ಹರಡುತ್ತಿರುವ ಹುಸಿ ಕಲ್ಪಿತಗಳ ವಿರುದ್ಧ ತನ್ನ ದಂಗಲ್‌ನ್ನು ಸಾರಿತ್ತು. ಕೋಮುವಾದವು ಎಷ್ಟೊಂದು ಅಮಾನುಷವಾದದ್ದೆಂಬುದನ್ನು ವಿವರಿಸುವ ಮಾದರಿಯ ಕಥನಗಳದ್ದು ಒಂದು ಪ್ರಕಾರವಾದರೆ, ಜನಸಂಸ್ಕೃತಿಯಲ್ಲಿರುವ ಸೌಹಾರ್ದತೆಯ ಹೆಣಿಗೆಯು, ಕೋಮುವಾದವನ್ನು ತುಚ್ಛೀಕರಿಸಿಬಿಡಬಲ್ಲಷ್ಟು ಸಮರ್ಥವಾಗಿದೆ ಎಂದು ತೋರಿಸುವುದು ಇನ್ನೊಂದು ಪ್ರಕಾರವಾಗಿದೆ. ಈ ಎರಡನೆಯ ಮಾದರಿಯ ಕಥನಗಳು ವಸಾಹತುಶಾಹಿಯ ದಾರ್ಷ್ಟ್ಯವನ್ನು ಬರಿಗೈಯಿಂದ ನೈತಿಕ ಸದ್ಭಾವದಿಂದ ಎದುರಿಸಿದ ಭಾರತೀಯರ ಸ್ವಾತಂತ್ರ್ಯ ಹೋರಾಟದ ಗಾಂಧೀ ಮಾದರಿಯನ್ನು ನೆನಪಿಸುತ್ತದೆ.

ಬೊಳುವಾರು ಮಹಮದ್ ಕುಂಞ ಬರೆದ 'ಒಂದು ತುಂಡು ಗೋಡೆ' ಕಥೆಯು ಈ ಮಾದರಿಯ ಕ್ಲಾಸಿಕ್ ಕಥೆಯಾಗಿದೆ. "ಗಾಂಧೀಜಿ ಭಾರತದ ಸ್ವಾತಂತ್ರ್ಯ ಹೋರಾಟಕ್ಕೆ ಎರಡು ರೂಪಕಗಳನ್ನು ಬಳಸಿಕೊಂಡರು. ಒಂದು ಚರಕಾ, ಇನ್ನೊಂದು ಉಪ್ಪು. ಈ ಎರಡೂ ನಿರ್ಮಿತೀಯವಾಗಿದ್ದವು" –ಎಂದು ಗುರುತಿಸುತ್ತಾರೆ ಕನ್ನಡದ ಸಂಸ್ಕೃತಿ ಚಿಂತಕರಾದ ಡಿ.ಆರ್.ನಾಗರಾಜ. ಜನರ ಮನಸ್ಸಿನಾಳದಲ್ಲಿ ಅರಳಿ ಗಮಗಮಿಸುವ ಒಳಿತೆಂಬುದಕ್ಕೆ ಬಣ್ಣ, ರುಚಿ, ವಾಸನೆಗಳಿಲ್ಲ. ಅದು ನಿರ್ಮತೀಯವಾದದ್ದು. ಈ ನಿರ್ಮತೀಯ ನಿಲುವುಗಳ ಮೂಲಕವೇ ಕೋಮುವಾದವನ್ನು ಎದುರಿಸುವುದು ಸಾಧ್ಯ ಎಂಬುದನ್ನು ಈ ಕಥೆಯು ನಿರೂಪಿಸುತ್ತದೆ. "ಅಂಗೈಯಗಲದ ರೊಟ್ಟಿ ಆಕಾಶಕ್ಕಿಂತಲೂ ದೊಡ್ಡದು, ಭೂಮಿಗಿಂತಲೂ ವಿಸ್ತಾರವಾದದ್ದು" –ಎನ್ನುವಂತೆ ಈ ಕಥೆಯ ನಾಯಕಿ ರೊಟ್ಟಿ ಪಾತುಮ್ಮ ಇದ್ದಾಳೆ.

ಕಥೆಯೊಳಗಿನ ಕಥನ ದೃವ್ಯ ಹೀಗಿದೆ –ಆ ಊರಿನ ಮೂರು ಮಿಲಿಟರಿ ಹೊಟೇಲುಗಳಿಗೆ ಅಕ್ಕಿರೊಟ್ಟಿ ತಟ್ಟಿ ಜೀವನ ಮಾಡುವ ಪಾತುಮ್ಮಳ ಕನಸಿನಲ್ಲಿ ದೇವರಾಜ್ ಅರಸು ಅವರು ಕಾಣಿಸಿಕೊಂಡು, ತಾನು ಮುಖ್ಯಮಂತ್ರಿಯಾಗಿದ್ದಾಗ ಸಾಂಕ್ಷ್ಯನ್

ಮಾಡಿಸಿಕೊಟ್ಟ ಭೂಮಿಯಲ್ಲಿ ನೀನು ಇನ್ನೂವರೆಗೆ ಮನೆ ಕಟ್ಟಿಸಲು ಪ್ರಾರಂಭಿಸಿಲ್ಲ ಯಾಕೆ? ಎಂದು ಕೇಳಿ, ಹೀಗೇ ನೀನು ಉದಾಸೀನವನ್ನು ಮಾಡಿದರೆ ಆ ಜಾಗೆಯನ್ನು ಬೇರೆಯವರಿಗೆ ಕೊಟ್ಟಿಬಿಟ್ಟೇನು ಹುಶಾರ್ ಎಂದು ಎಚ್ಚರಿಸಿಯೂ ಬಿಟ್ಟರು. ಇದಕ್ಕೆ ಸಾಥ್ ಕೊಡುವಂತೆ ವಿಲೇಜ್ ಅಕೌಂಟಂಟ್ ಸೀತಾರಾಮ್ ಬೈಪಡಿತ್ತಾಯರು, "ಇನ್ನಾದರೂ ನೀನು ಮನೆ ಕಟ್ಟುವ ಕೆಲಸ ಶುರುಮಾಡದಿದ್ದರೆ ಆ ಜಾಗ ಹೋದ ಹಾಗೆಯೆ" ಎಂದು ಎಚ್ಚರಿಸಿದ್ದರು. ಇದರಿಂದ ಪಾತುಮ್ಮ ಕಂಗಾಲಾದಳು. ೪೦ ರ ವಿಧವೆಯವಳು. ಬೆನ್ನಹಿಂದೆ ನಿಲ್ಲುವವರಿಲ್ಲ. ಕಣ್ಣಮುಂದಿರಬೇಕಾದ ಮಕ್ಕಳಿಲ್ಲ. ಅವಳ ಕೈಯ ಅಕ್ಕಿರೊಟ್ಟಿಗಳು ಮಾತ್ರ ಹೂವಿನಂತೆ ಮೃದು, ಬೆಲ್ಲದಂತೆ ರುಚಿಯಾಗಿದ್ದರಿಂದಾಗಿ ಊರು ಅವಳನ್ನು ಗುರ್ತಿಸುವುದು. ರೊಟ್ಟಿ ಪಾತುಮ್ಮ ಎಂದು. ಪದ್ಮಶ್ರೀ ಪಾತುಮ್ಮ ತರಹ. ಈ ಕನಸು-ನನಸುಗಳ ಜೂಟಾಟದಲ್ಲಿ ಬಳಲಿದ ಪಾತುಮ್ಮ ಮನೆ ಕಟ್ಟಿಸೋ ವಿಚಾರ ಮಾಡಿ, ಇದುವರೆಗೆ ಸಂಗ್ರಹಿಸಿದ್ದ ನೋಟುಗಳನ್ನು ಸುರಕ್ಷಿತವಾಗಿಡಲು ಒಂದು ಪಿಂಗಾಣಿ ಭರಣಿಯನ್ನು ಕೊಂಡು ಅದನ್ನು ಬಾಡಿಗೆ ಮನೆಯ ಖೋಲಿಯ ನೆಲದಲ್ಲಿ ಹೂತಿಟ್ಟಳು. 'ಈ ಇಪ್ಪತ್ತು ರೂಪಾಯಿ ಎರಡು ಸಾವಿರವಾಗಲಿ' ಎಂದು ಅಲ್ಲಾಹುವಿನಲ್ಲಿ ಪ್ರಾರ್ಥಿಸಿಕೊಂಡಳು. ಈಗವಳ ರೊಟ್ಟಿಯ ವ್ಯಾಸ ಬೆರಳಿನಷ್ಟು ದಪ್ಪ ಉಗುರಿನಷ್ಟು ಕಿರಿದಾಯಿತು. ದಿನಕ್ಕೆರಡು ತಾಸು ಹೆಚ್ಚು ದುಡಿಯುತ್ತ, ಒಂದು ಮುಷ್ಟಿ ಅನ್ನ ಕಡಿಮೆ ಉಣ್ಣತೊಡಗಿದಳು. ಕೆಲವೇ ತಿಂಗಳುಗಳಲ್ಲಿ ಭರಣಿಯೊಳಗಿನ ನೋಟು ೩೫೦ ರೂಪಾಯಿ ಮಿಕ್ಕಿ, ಪಾತುಮ್ಮನ ಎದೆ ನಡುಗಿಸಿದವು. ತಾನು ದುಡಿಯಲು ಇಡೀ ದಿನ ಮನೆಯಿಂದ ಹೊರಗೇ ಇರುವಾಗ ಯಾರಾದರೂ ತನ್ನ ಸಂಪತ್ತನ್ನು ಅಪಹರಿಸಿದರೆ -ಎಂಬ ಭಯ ಅವಳನ್ನು ಕಾಡುತ್ತ, ಸಂಪತ್ತನ್ನು ಬಂಗಾರವಾಗಿ ಪರಿವರ್ತಿಸಿಕೊಂಡು ತನ್ನ ದೇಹಕ್ಕೆ ಅಂಟಿಸಿಕೊಂಡು ಬಿಡುವುದು ಎಂದು ಉಪಾಯವನ್ನು ಯೋಚಿಸುತ್ತಾಳೆ.

ಕಥೆಯ ಎರಡನೆಯ ಭಾಗದಲ್ಲಿ ರೊಟ್ಟಿ ಪಾತುಮ್ಮಳ ಸವಾರಿ ಶ್ರೀನಿವಾಸ ಆಚಾರ್ಯರ ಬಂಗಾರದ ಅಂಗಡಿಯ ಕಟ್ಟೆಯನ್ನು ಹತ್ತುತ್ತದೆ. ಮುತ್ತುಪ್ಪಾಡಿ ಆಚಾರ್‍ರ ಕಟ್ಟೆ - ಎಂದೇ ಪ್ರಸಿದ್ಧವಾಗಿರುವ ಶ್ರೀನಿವಾಸ ಆಚಾರ್ಯರ ಬಂಗಾರದಂಗಡಿಯಲ್ಲಿ ಎಲ್ಲರಿಗೂ ಒಂದೇ ಮಣೆ. ಯಾವ ತರತಮವೂ ಇರಲಿಲ್ಲ. ಅದರಲ್ಲೂ ವಾಯಿದೆಗೆ ಮುನ್ನವೇ ಅಡವಿಟ್ಟ ಬಂಗಾರ ಬಿಡಿಸಿಕೊಂಡು ಹೋಗಿದ್ದ ಪಾತುಮ್ಮಳನ್ನು ಅವರು ಮರೆಯುವಂತೆಯೂ ಇರಲಿಲ್ಲ. ಪಾತುಮ್ಮಳ ಹಣಕ್ಕೆ, ಮುರಿಸಿದರೆ ಲುಕ್ಸಾನು ಆಗದ ಯಾವ ಬಂಗಾರದ

ಸಾಮಾನೂ ಕೊಡಲು ಶ್ರೀನಿವಾಸಾಚಾರ್ಯರಿಗೆ ಆಗಲಿಲ್ಲ. ಯಾಕೆಂದರೆ, ಅಂತಹ ದಾಗಿನ ಇಲ್ಲವೇ ಇಲ್ಲವಲ್ಲ. ವೃತ್ತಿ ನಿಯಮಕ್ಕೆ ಭಂಗ ಬರುತ್ತದೆ ಎಂದು ಸುಮ್ಮನೆ ದುಡ್ಡು ಇಟ್ಟುಕೊಳ್ಳಲು ಒಪ್ಪದಿದ್ದ ಶ್ರೀನಿವಾಸಾಚಾರ್ಯರಿಗೆ, ಕಡೆಗೂ ಪಾತುಮ್ಮ ತನ್ನ ವಿಶ್ವಾಸವನ್ನೂ ಅಸಹಾಯಕತೆಯನ್ನೂ ಹೇಳಿಕೊಂಡು ಒಪ್ಪಿಸಿದಳು. ತಾನು ಮನೆ ಕಟ್ಟಲು ಆಚಾರ್‍ರು ತಂದೆಯ ಸ್ಥಾನದಲ್ಲಿ ನಿಂತುಕೊಂಡು ಸಹಾಯ ಮಾಡಬೇಕು' ಎಂಬ ಪಾತುಮ್ಮಳ ಬೇಡಿಕೆಯನ್ನು ಆಚಾರ್‍ರು ತೆಗೆದು ಹಾಕುವುದಾದರೂ ಹೇಗೆ?

ಅಂದಿನಿಂದ ರೊಟ್ಟಿ ಪಾತುಮ್ಮ ಪ್ರತಿ ಸೋಮವಾರ, ಸಂಜೆಹೊತ್ತಲ್ಲಿ ಹತ್ತು ರೂಪಾಯಿ ನೋಟೊಂದನ್ನು ತಂದು 'ಇದನ್ನೂ ಅದರ ಜೊತೆಗಿಡಿ' ಎಂದು ಮೆಲುವಾಗಿ ಕೊಟ್ಟು ಹೋಗುವುದು; ಆಚಾರ್‍ರು ಅಥವಾ ಅವರ ಮಕ್ಕಳು ಲೆಕ್ಕದ ಪುಸ್ತಕದಲ್ಲಿ ಬರೆದು ಆ ನೋಟನ್ನು ಒಳಗಿಡುವುದು ನಡೆದು ಬಂತು. ಎರಡು ಎರಡೂವರೆ ವರ್ಷದಲ್ಲಿ ಈ ಪದ್ಧತಿ ತಪ್ಪಲಿಲ್ಲ. ಒಮ್ಮೆಯೂ ಪಾತುಮ್ಮ 'ಎಷ್ಟಾಗಿದೆ?' ಎಂದು ಕೇಳಲಿಲ್ಲ. ಎಂದಾದರೂ ಆಚಾರ್‍ರು ಪುರುಸೊತ್ತಿನಲ್ಲಿ ಇದ್ದಾಗ, "ಅಲ್ಲವೆ ಹೆಂಗಸೆ, ಈ ಮುದುಕ ಗೋವಿಂದ ಆದರೆ ನಿನ್ನ ದುಡ್ಡು ಕೂಡ ಗೋವಿಂದ ಆಗಬಾರದಲ್ಲವಾ?" ಎಂದು ಹಾಸ್ಯ ಮಾಡುತ್ತಾರೆ. ಆದರೆ ಪಾತುಮ್ಮ ವಿಶ್ವಾಸದ ನಿರಾಳತೆಯಲ್ಲಿ, 'ನಾನು ಒಂದು ಮನೆ ಕಟ್ಟಿಸಿಕೊಳ್ಳುವವರೆಗೂ ನಿಮ್ಮ ಆಯುಷ್ಯದ ತಂಟೆಗೆ ಯಾವ ದೇವರೂ ಬರುವುದಿಲ್ಲ' ಎಂದು ಹೇಳುತ್ತಾಳೆ. ಕಾಲ ಉರುಳಿತು. ಆಚಾರ್‍ರ ಕಟ್ಟೆಯ ರೂಪ ಬದಲಿಯಾಯಿತು. ಬೋರ್ಡು ಬದಲಿಯಾಯಿತು. ಆಚಾರ್‍ರ ಹಿರಿಯ ಮಗ ಕೇಶವ ಮತ್ತು ಕಿರಿಯ ಮಗ ಚಂದ್ರಣ್ಣ ಅಂಗಡಿ ನಡೆಸತೊಡಗಿದರು. ಅವರಿಗೂ ಪಾತುಮ್ಮನ ಈ ವ್ಯವಹಾರ ಲಾಭದಾಯಕವೇ ಆಗಿದ್ದರಿಂದ ಅದು ಹಾಗೇ ನಡೆದುಬಂತು. ಆಚಾರ್‍ರು ಗಲ್ಲೆಯ ಮೇಲೆ ಕೂಡುವುದು ಬಿಟ್ಟ ಮೇಲೂ ಪಾತುಮ್ಮ ತನ್ನ ವ್ಯವಹಾರದಲ್ಲಿ ಅನುಮಾನಿಸಿದವಳಲ್ಲ.

ಕಥೆಯ ಮೂರನೆಯ ಭಾಗದಲ್ಲಿ –ಊರೊಳಗೆ ರಥಯಾತ್ರೆಯ ರಥ ಬಂದು ಹೋಗಿದೆ. ಕರಸೇವಕರನ್ನು ಅಯೋಧ್ಯೆಗೆ ಕಳಿಸಲು ತಯಾರಿ ನಡೆಯುತ್ತಿದೆ. ಆಚಾರ್‍ರಿಗಾಗಲಿ, ಕೇಶವನಿಗಾಗಲಿ ಸ್ವತಃ ಚಂದ್ರಣ್ಣನಿಗಾಗಲಿ ಈ ಉಸಾಬರಿಗಳ ಅಗತ್ಯವಿಲ್ಲ ಎನಿಸಿದೆ. ಆದರೆ ಮುತ್ತುಪ್ಪಾಡಿಯಿಂದ ಕರಸೇವಕರನ್ನು ಕಳುಹಿಸಿಕೊಡುವ ಧರ್ಮರಕ್ಷಣೆಯ ಜವಾಬ್ದಾರಿಯನ್ನು ಹೊತ್ತಿರುವ ರಾಮದಾಸ ಕಿಣಿಯವರಿಗೆ ಬಂದೊದಗಿದ ಅನಿವಾರ್ಯತೆಯಿಂದಾಗಿ, ಅವರು ಬಹಳ ಒತ್ತಾಯ ಮಾಡಿ ಕೇಳಿಕೊಂಡರೆಂದು ಚಂದ್ರಣ್ಣ ಕರಸೇವೆಗೆ ಹೊರಡಬೇಕಾಯಿತು.

ದೇವಸ್ಥಾನದ ಅರ್ಚಕರಿಗೆ ಆಚಾರ್ರನ್ನು ಒಪ್ಪಿಸುವ ಹೊಣೆ ಹೊರಿಸಲಾಯಿತು. ರಾಮದಾಸ ಕಿಣಿಯವರು ಕರಸೇವಕರನ್ನು ಮಂಗಳೂರು ತಲುಪಿಸಿ, ಮರಳಿ ಬಂದು ತಮ್ಮ ಜವಳಿ ಅಂಗಡಿಯೆದುರು 'ಕ್ರಿಸ್‌ಮಸ್ ಸೇಲ್' ಬೋರ್ಡು ಹಾಕಿಕೊಂಡು ವ್ಯಾಪಾರದಲ್ಲಿ ಮುಳುಗಿದರು.

ಆದರೆ ಹೀಗೆ ಹೊರಟ ಮಂಗಳೂರಿನ ಕರಸೇವಕರು ಕಾಶಿಯ ಕೋಠಿಯೊಂದರಲ್ಲಿ ದಿನಕಳೆದು ಮರಳಬೇಕಾಯಿತು. ಅವರಿಗೆ ಅಯೋಧ್ಯೆ ತಲುಪುವುದೂ ಆಗಲಿಲ್ಲ. ಅತ್ತಿಗೆ ಹಣಕೊಟ್ಟು ಕಳಿಸಿದ್ದ ಕಾಶಿಯ ಬನಾರಸ್ ಸೀರೆ ತರುವುದೂ ಆಗಲಿಲ್ಲ. ಆದರೆ, ಇವರಂತೆಯೇ ಪೂನಾದಿಂದ ಹೋಗಿದ್ದ ತಂಡದ ಸದಸ್ಯನೊಬ್ಬ ಚಂದ್ರಣ್ಣನಿಗಾದ ನಿರಾಸೆಯನ್ನು ಸಮಾಧಾನಪಡಿಸಲು ಅವನಿಗೆ ಗುಟ್ಟಾಗಿ 'ಆ ಗೋಡೆಯ ಸಣ್ಣ ತುಂಡೊಂದನ್ನು' ಕೊಟ್ಟು, ಕೆಲದಿನ ಈ ವಿಷಯವನ್ನು ಗುಟ್ಟಾಗಿಯೇ ಇಟ್ಟುಕೊಳ್ಳಬೇಕು ಎಂದು ಸೂಚಿಸುತ್ತಾನೆ. ಅಲ್ಲಿಂದ ಸುರಕ್ಷಿತ ಮರಳಿ ಊರು ಸೇರಿದ ಚಂದ್ರಣ್ಣ, ಅತ್ತಿಗೆಯಿಂದ ಸೀರೆ ತರಲಾಗದ್ದಕ್ಕೆ ಬೈಯಿಸಿಕೊಂಡೂ ಆಯಿತು.

ಕಥೆಯ ನಾಲ್ಕನೆಯ ಭಾಗದಲ್ಲಿ ಕರಸೇವಕನಾಗಿ ಹೋಗಿಬಂದ ಚಂದ್ರಣ್ಣನ ಸ್ಥಿತಿಯ ವಿವರಣೆಯಿದೆ. ತನ್ನ ಸೂಟಕೇಸಿನಲ್ಲಿದ್ದ ಆ ಗೋಡೆಯ ತುಂಡನ್ನು ಚಂದ್ರಣ್ಣ ತನ್ನೊಂದಿಗೆ ಹೋಗಿ ಬಂದಿದ್ದ ಜೊತೆಗಾರರಿಗೂ, ರಾಮದಾಸ್ ಕಿಣಿಯವರಿಗೂ ಹಂಚಿದ. ಆದರೆ ಎಲ್ಲರಿಗೂ ಇದನ್ನು ಎಲ್ಲರೊಂದಿಗೆ ಹೇಳುವುದೋ ಹೇಳಿಕೊಳ್ಳದಿರುವುದೋ ಎಂಬ ಹೊಸ ಸಮಸ್ಯೆ ಎದುರಾಯಿತು. ಕಳ್ಳ ಬಸಿರಿನಂತೆ ಮುಚ್ಚಿಡುವುದೇ ಆದರೆ ಇದನ್ನು ಇಟ್ಟುಕೊಂಡಾದರೂ ಏನು ಲಾಭ? ಎಂಬ ಪ್ರಶ್ನೆ ಎದುರಾಗುತ್ತದೆ. ನಾವು ಅರ್ಧದಲ್ಲೇ ಬಂದೆವೆನ್ನಬೇಕೋ? ಹೋಗಿ, ಕರ ಸೇವೆಯನ್ನು ಪೂರೈಸಿದ್ದೇವೆ ಎನ್ನಬೇಕೋ ಎಂಬ ಗೊಂದಲದಲ್ಲಿಯೇ ಚಂದ್ರಣ್ಣನೂ ಅವನ ಸಂಗಡಿಗರೂ ತಲ್ಲಣಿಸುತ್ತಾರೆ. ಚಂದ್ರಣ್ಣ ಕೆಲವೊಮ್ಮೆ ಆಪ್ತರಿಗೆ ಸತ್ಯ ಹೇಳಲು ಹೋದರೆ, ಯಾರೂ ಅವನ ಮಾತನ್ನು ನಂಬುವುದಿಲ್ಲ. ಚಂದ್ರಣ್ಣನೀಗ ಲೋಕ ನೋಡುವ ಕಣ್ಣು ಬದಲಿಯಾಗಿದೆ. ಕೇಶವನ ಸ್ನೇಹಿತ ಬೆಹರಿನ್‌ನಿಂದ ಬಂದ ಅಹ್ಮದ್‌ಬಾವಾ ಈ ಸಲ ಯಾಕೆ ಅವನನ್ನು ಭೇಟಿಯಾಗಲು ಬರಲಿಲ್ಲ? ಪ್ರತಿ ಸೋಮವಾರ ನೋಟು ತಂದು ಒಪ್ಪಿಸುವ ಪಾತುಮ್ಮ ಈಗ ಮುದುಕಿಯಾಗುತ್ತಿದ್ದಾಳೆ. ಇವಳಿಗೇನಾದರೂ ನಾನು ಹೋಗಿಬಂದ ಸುದ್ದಿ ಗೊತ್ತಾಗಿರಬಹುದೇ? ಎಂದು ಕೆದಕು ನೋಟದಲ್ಲಿ ನೋಡುತ್ತಾನೆ.

ಕಡೆಗೂ ಚಂದ್ರಣ್ಣನಿಗೆ, ತನ್ನ ಪಾಲಿಗೆ ಬಂದ ಆ ಗೋಡೆಯ ತುಂಡನ್ನು ಎಲ್ಲಿಡುವುದು ಎಂದು ತಿಳಿಯದೇ, ದೇವರ ಕೋಣೆಯ ಊದುಬತ್ತಿ ಸ್ಟೂಲಿನ ಮೇಲೆ ಇಟ್ಟಿದ್ದ. ಸಂಜೆಯ ಹೊತ್ತಿಗೆ ದೇವರ ಕೋಣೆಗೆ ಹೋಗಿದ್ದ ಅತ್ತೆಗೆ ಅದೇನೆಂದು ತಿಳಿಯದೇ ಅದನ್ನು ಕೈಯಲ್ಲಿ ಹಿಡಿದುಕೊಂಡು ಬಂದು ಕೇಶವಾಚಾರ್ಯನಿಗೆ, 'ಇದೇನೋ?' ಎಂದು ಕೇಳಿದರು. ಕೇಶವಾಚಾರ್ಯ, 'ಇದು ನಮ್ಮ ಚಂದ್ರಣ್ಣನಿಗೆ ಡೆಲ್ಲಿಯಲ್ಲಿ ಸಿಕ್ಕ ಮೆಡಲು' ಎಂದು ನಕ್ಕ. ಅತ್ತೆ ಚಂದ್ರಣ್ಣನನ್ನು ಎಂಥಾ ಕಲ್ಲು ಇದು? ದೇವರ ಕೋಣೆಯಲ್ಲಿ ಯಾಕೆ ಇಟ್ಟಿದ್ದು? ಎಂದು ಕೇಳಿದರು. ಚಂದ್ರಣ್ಣ, ಆದಷ್ಟು ಧ್ವನಿಯನ್ನು ಸಹಜಗೊಳಿಸಿಕೊಂಡು, "ನಾನಾವತ್ತು ಹೋಗಿ ಬಂದೆ ನೋಡು. ಅಲ್ಲಿಂದ್ ತಂದದ್ದು. ಗೋಡೆ ಒಡೆದದ್ದರ ನೆನಪಿಗೆ ಇರಲಿ ಅಂತ" ಎಂದು ಉತ್ತರಿಸಿದ. 'ಅಯ್ಯೋ ರಾಮಾ, ಅವರ ಮಸೀದಿಯ ಕಲ್ಲಿನ ತುಂಡನ್ನು ನಮ್ಮ ದೇವರ ಕೋಣೆಯಲ್ಲಿ ಯಾರಾದರೂ ಇಡುತ್ತಾರಾ? ಎಂದು ಅತ್ತೆ ಆಕ್ಷೇಪಿಸಿ, ಈ ಕಲ್ಲಿನ ತುಂಡನ್ನು ಯಾವುದಾದರೂ ಬಾವಿಗೆ ಬಿಸಾಡಿ, ಸ್ನಾನ ಮಾಡಿ ಬಾ ಎಂದು ಅಜ್ಞಾಪಿಸುತ್ತಾರೆ. ಅವಮಾನ ಹಾಗೂ ಗಾಭರಿಯಿಂದ ಚಂದ್ರಣ್ಣ, "ಹಾಗಲ್ಲ ಅತ್ತೆ ಅದು ನಿಜಕ್ಕೂ ನಮ್ಮ ಹಳೆಯ ದೇವಸ್ಥಾನದ ತುಂಡು" ಎಂದುಬಿಟ್ಟ, ಇದರಿಂದ ಕಂಗಾಲಾದ ಅತ್ತೆ ಹಣೆ ಹಣೆ ಬಡಿದುಕೊಂಡು ಅಯ್ಯಯ್ಯೋ, ಈ ಚಂದ್ರು ಎಂಥದ್ದು ಹೇಳ್ತಾ ಇರುವುದು? ಹಾಗಾದರೆ ನೀವೆಲ್ಲ ಅಷ್ಟು ಸಂಭ್ರಮದಿಂದ ಹೋಗಿ ಒಡೆದು ಹಾಕಿದ್ದು ನಮ್ಮದೇ ದೇವಸ್ಥಾನವನ್ನು?" ಎಂದು ಕೇಳುತ್ತಾರೆ. ಇದು ಕಥೆಯ ಪ್ರಮುಖ ಪ್ರಶ್ನೆ. ಅತ್ತೆ ಎದುರಿಡುವ ಈ ಹೊಸ ಪ್ರಮೇಯಕ್ಕೆ ಉತ್ತರ ಯಾವುದು?

ಮುಂದಿನ ಭಾಗದಲ್ಲಿ, ಪಾತುಮ್ಮ ಮನೆ ಕಟ್ಟುವ ಕೆಲಸ ಪ್ರಾರಂಭಿಸಲು ಯೋಚಿಸಿ, ಹಣ ಕೇಳುವುದು ರಾತ್ರಿ ಊಟದ ವೇಳೆಯಲ್ಲಿ ಈ ವಿಷಯ ಕೇಳಿದ ಆಚಾರ್ಯರು, ಪಾಪ, ಇಷ್ಟು ವರ್ಷ ಒಮ್ಮೆಯೂ ಲೆಕ್ಕ ಕೇಳಲಿಲ್ಲ. ಅವಳ ರೊಕ್ಕ ಲೆಕ್ಕ ಮಾಡಿ ಮೇಲೆ ೫೦೦ ರೂಪಾಯಿ ಕೊಡು. ಮನೆ ಕಟ್ಟಿಸುವವಳಿಗೆ ನಮ್ಮದೂ ಒಂದು ಸಹಾಯ ಅಂತಿರಲಿ ಎನ್ನುತ್ತಾರೆ. ಪಾತುಮ್ಮಳ ರೊಕ್ಕವನ್ನೆಲ್ಲ ಸರಿಯಾಗಿ ಲೆಕ್ಕ ಮಾಡಿಟ್ಟ ಚಂದ್ರಣ್ಣ, ರಾಮದಾಸ ಕಿಣಿಯವರ ಲೆಕ್ಕವನ್ನೂ ಚುಕ್ತಾ ಮಾಡಿ ಬರುತ್ತೇನೆ ಎಂದು ಹೊರಡುತ್ತಾನೆ. ಆದರೆ ಆವತ್ತು ಕಿಣಿಯವರು ಸಿಗದಿದ್ದರಿಂದ ಗೋಡೆಯ ತುಂಡನ್ನು ಅವರಿಗೆ ಒಪ್ಪಿಸಲಾಗಲಿಲ್ಲ. ಶಾಲೆಯ ದಾರಿಯಲ್ಲಿ ಬರುವಾಗ ಮರುಕಳಿಸುವ ಬಾಲ್ಯ, ಅಲ್ಲೇ ಪಕ್ಕದ ಮನೆಯಲ್ಲಿದ್ದ ಗೆಳೆಯ ಅದ್ರಾಮ ಬ್ಯಾರಿ, ಆತ ಇದೇ ಬಾವಿಯಲ್ಲಿ ಬಿದ್ದು ಆತ್ಮಹತ್ಯೆ ಮಾಡಿಕೊಂಡಿದ್ದು ಎಲ್ಲವೂ ಚಂದ್ರಣ್ಣನಿಗೆ ನೆನಪಾಗುತ್ತದೆ. ಜೇಬಿನೊಳಗಿದ್ದ ಗೋಡೆಯ ತುಂಡನ್ನು ಬಾವಿಗೆಸೆದು, ಅದರ

ಗುಳುಂ ಎಂಬ ಸದ್ದನ್ನು ಕೇಳಿ ಸಮಾಧಾನಗೊಂಡು ಅಲ್ಲಿ ಬಯಲಲ್ಲಿ ಆಡುತ್ತಿರುವ ಎಳೆಯ ಮಕ್ಕಳನ್ನು ನೋಡುತ್ತ ಕುಳಿತುಕೊಳ್ಳುತ್ತಾನೆ.

ಕಥೆಯ ಕೊನೆಯ ಭಾಗದಲ್ಲಿ, ರೊಕ್ಕ ತೆಗೆದುಕೊಂಡು, ಆಚಾರ್ರು ತಮ್ಮ ಲೆಕ್ಕದ್ದು ಎಂದು ಕೈಯತ್ತಿ ಕೊಟ್ಟ ೫೦೦ ರೂಪಾಯಿಯನ್ನು ಕಣ್ಣೀರು ಹಾಕಿ ತಗೊಂಡು ಹೋದ ಪಾತುಮ್ಮ ನಾಳೆ ಚಂದ್ರಣ್ಣನನ್ನು ಭೇಟಿಯಾಗಲೆಂದೇ ಬರುವವಳಿದ್ದಾಳೆ. ಅವಳಿಗೆ ಚಂದ್ರಣ್ಣ ತಂದ ಗೋಡೆಯ ತುಂಡಿನ ಒಂದು ಚೂರು ಕೊಟ್ಟರೆ, ಅವಳೂ ಅದನ್ನು ಸೇರಿಸಿಯೇ ತನ್ನ ಮನೆ ಕಟ್ಟುತ್ತಾಳಂತೆ ಹೋದವರ್ಷದಿಂದಲೂ ಅವಳು ಆ ಕನಸನ್ನು ಇಟ್ಟುಕೊಂಡಿದ್ದಾಳಂತೆ ಎನ್ನುವಲ್ಲಿಗೆ ಕಥೆ ಮುಕ್ತಾಯವಾಗುತ್ತದೆ.

ಈ ಕಥೆಯ ವಸ್ತು ಮತ್ತು ನಿರೂಪಣೆಯ ವಿನ್ಯಾಸದಲ್ಲಿ ವರ್ತಮಾನ ಭಾರತದ ಸಮಾಜ ಜೀವನವು ನೂರೊಂದು ಬಣ್ಣಗಳಲ್ಲಿ ಪ್ರತಿಫಲಿಸುತ್ತಿದೆ. ಪದ್ಮಶ್ರೀ ಪಾತುಮ್ಮ ಎನ್ನುವಷ್ಟೇ ಗೌರವದ ರೊಟ್ಟಿಪಾತುಮ್ಮ ಎಂಬ ತನ್ನ ಹೆಸರನ್ನು ಸಂಪಾದಿಸಿಕೊಂಡ ಬಡ ಮುಸ್ಲಿಂ ಹೆಂಗಸಿಗೂ ಆಚಾರ್ರ ಕಟ್ಟೆಯ ಶ್ರೀನಿವಾಸಾಚಾರ್ಯರಿಗೂ ಇರುವ ಸಂಬಂಧ. 'ನೀವು ತಂದೆಯ ಸ್ಥಾನದಲ್ಲಿ....' ಎಂದು ಪಾತುಮ್ಮ ಕೇಳಿಕೊಂಡಾಗ ಅಪ್ಪಟ ವ್ಯಾಪಾರಸ್ಥ ಶ್ರೀನಿವಾಸಚಾರ್ಯರಿಗೆ ಏನೂ ಮುಜುಗರವೆನ್ನಿಸಲಿಲ್ಲ. ಧರ್ಮ ನೆನಪಾಗಲಿಲ್ಲ. ಈ ಬಡ ವಿಧವೆ ಮುಸ್ಲಿಂ ಹೆಂಗಸಿನ ತಂದೆಯ ಸ್ಥಾನವೆಂಬುದು ಬೇಡದ್ದು ಅನ್ನಿಸಲಿಲ್ಲ. ಶ್ರೀನಿವಾಸಾಚಾರ್ಯರಿಗೆ ಈ ಪಾತುಮ್ಮಳ ಬ್ಯಾಂಕಾಗುವ ಜವಾಬ್ದಾರಿ ಕಿರಿಕಿರಿಯದ್ದೇ ಆದರೂ ಅವರದನ್ನು ಮನಸಾ ನೆರವೇರಿಸಿದರು. ಮುಂದೆ ಗಲ್ಲೆ ಬದಲಾಯಿತು. ಅಂಗಡಿ ಬೇರೆಯಾಗಿ ವಿಸ್ತಾರಗೊಂಡಿತು. ಪಾತುಮ್ಮಳೊಂದಿಗೆ ಅಪ್ಪ ಮಾಡಿದ, ಮಾಡುತ್ತಿರುವ ವ್ಯವಹಾರವನ್ನು ಅವನ ಮಕ್ಕಳು ವಿರೋಧಿಸಲಿಲ್ಲ. ತುಂಬ ಪ್ರೀತಿಯಿಂದಲೇ ಮುಂದುವರಿಸಿದರು. ಕರಸೇವೆಗೆ ಹೋಗಿಬಂದ ಚಂದ್ರಣ್ಣನ ಮನಸ್ಸಿನಾಳದಲ್ಲಿಯೂ ಪಾತುಮ್ಮಳ ಬಗ್ಗೆ ಅಂತಃಕರಣವಿದೆ. ಕರಸೇವೆಗೆ ಹೋಗಿ ಬಂದು, ಕೋಮುವಾದಿಗಳ ಮಾತು ಕೇಳಿ ಅವರ ಸಾಮೀಪ್ಯದಲ್ಲಿ ಇದ್ದು ಬಂದ ಮೇಲೂ ಚಂದ್ರಣ್ಣ ಕೋಮುವಾದಿಯೇನೂ ಆಗಲಿಲ್ಲ. ಈ ಕರಸೇವೆಯ ಆತ್ಯಂತಿಕ ತುದಿಯನ್ನು ಅವನು ಮುಟ್ಟದೇ, ಕಾಶಿಯ ಕೋಠಿಯೊಂದರಲ್ಲಿ ಇದ್ದು ಬಂದ ದುರಂತ್‌ದಿಂದ ಆತ ತೀವ್ರ ಪರಿಣಾಮಕ್ಕೆ ಒಳಗಾಗಲಿಲ್ಲ ಎಂದುಕೊಳ್ಳಬುಹುದು. ಆದರೆ, ಗುಮ್ಮಟದ ತುದಿವರೆಗೂ ಏರಿ ಧ್ವಂಸಗೊಳಿಸಿದವರು, ಯಾರೋ ಮೂರನೆಯವರ ಮಾತು ಕೇಳಿ, ನಂಬಿ; ತಮಗೇನೂ ಗೊತ್ತಿಲ್ಲದ ತಮ್ಮಂತಹದೇ ಜೀವವೊಂದರ ಹತ್ಯೆ ಮತ್ತು ಹಿಂಸೆಗೆ ಕಾರಣರಾಗುವವರು

ಚಂದ್ರಣ್ಣನಷ್ಟೇ ಅಮಾಯಕ ಮುಗ್ಧ ಸಾಮಾನ್ಯರೇ ಅಲ್ಲವೇ? ಇಂತಹ ಜನರನ್ನು ತಯಾರು ಮಾಡಿ ಕಳಿಸಿ, ತಮ್ಮ ಶ್ರೀಮಂತಿಕೆಯ ಜೊತೆಗೆ ಯಾವುದೋ ಮುಂದಿನ ರಾಜಕೀಯ ಲಾಭದ ಲೆಕ್ಕಾಚಾರ ಹಾಕುವ ರಾಮದಾಸ ಕಿಣಿಯಂಥವರು ತಮ್ಮ ಘನಂದಾರಿ ಕೆಲಸದಿಂದ ಸಮಾಜದ ಮೇಲೆ ಉಂಟಾಗುವ ಪರಿಣಾಮವನ್ನು ಗಮನಿಸುತ್ತಾರೆಯೇ? ತಮ್ಮ ಜವಳಿ ಅಂಗಡಿಯ ಲಾಭಕ್ಕಾದರೆ ದೀಪಾವಳಿ, ಕ್ರಿಸ್‌ಮಸ್, ರಂಜಾನ ಎಲ್ಲ ಬೇಕಿರುವ ಇವರಿಗೆ ಜನರು ಬಂಧುತ್ವದಿಂದ ಬಾಳಿದರೆ ಲಾಭವೇ ಇದೆ. ಆದರೆ ಶತಮೂರ್ಖತನದ ಲೆಕ್ಕಾಚಾರದಲ್ಲಿದನ್ನು ಪರಿಗಣಿಸುತ್ತಿಲ್ಲ.

ಈ ಕೋಮುವಾದ ಒಂದು ರೀತಿಯಲ್ಲಿ ಭೂಗತ ಪಾತಕಿಗಳು ನಡೆಯಿಸುವ ಕಾಳದಂಧೆ ಇದ್ದ ಹಾಗೆ. ಕರಸೇವಕರಾಗಿ ಊರುಗಳಿಂದ ರಫ್ತಾಗುವ ಚಂದ್ರಣ್ಣನಂತಹ ಯುವಕರಿಗೆ ತಾವು ನಿಜಕ್ಕೂ ಏನು ಮಾಡಲು ಹೊರಟಿದ್ದೇವೆ? ಏನು ಮಾಡುವವರಿದ್ದೇವೆ? ಎನ್ನುವುದು ಗೊತ್ತಾಗುತ್ತಿಲ್ಲ. ತಿಳಿಯಬೇಕೆಂಬ ಇರಾದೆಯೂ ಇಲ್ಲ. ತಾವು ಕರಸೇವಕರು ಯಾರ ಕೈಯ ಕರವಸ್ತ್ರವಾಗಿ ಬಳಕೆಗೊಂಡು ಬಿಸಾಟವಾಗುತ್ತೇವೆ ಎಂಬುದೂ ಗೊತ್ತಿಲ್ಲ. ಕರಸೇವೆ ಮುಗಿಸಿ ಬಂದ ಚಂದ್ರಣ್ಣ ಅನುಭವಿಸುವ ತಳಮಳ, ಬಹುಸಾಂಸ್ಕೃತಿಕ ಪರಂಪರೆಯಲ್ಲಿ ಬೆಳೆದ ಮನಸ್ಸು ಅದನ್ನು ಉಲ್ಲಂಘಿಸಲಾಗದೇ ತನ್ನೊಳಗನ್ನು ತಾನು ಮರಳಿ ಪರೀಕ್ಷಿಸಿಕೊಳ್ಳುವ ಹಂತವಾಗಿದೆ.

ಈ ಕಥೆಯ ನಾಯಕಿ ರೊಟ್ಟಿ ಪಾತುಮ್ಮಳಿಗೆ, ಚಂದ್ರಣ್ಣ ಕರಸೇವೆಗೆ ಹೋಗಿದ್ದು, ಮಸೀದಿ ಧ್ವಂಸ ಮಾಡಿದ್ದು, ಆ ಗೋಡೆಯ ತುಂಡನ್ನು ತಂದಿದ್ದು ಎಲ್ಲ ಗೊತ್ತಾಗಿದೆ. ಆದರೆ ತನ್ನ ವರ್ತಮಾನದ ಅನುಭವಕ್ಕೆ, ತನ್ನ ಮನಸ್ಸಿನ ಒಪ್ಪಿತಕ್ಕೆ ಯಾವುದೋ ಅನ್ಯಾನ್ಯ ಕಾರಣಗಳಿಂದ ಅವಳು ವಂಚಿಸಿಕೊಳ್ಳಲಾರಳು. ಚಂದ್ರಣ್ಣನನ್ನು ದ್ವೇಷಿಸಬೇಕು ಎಂದಾಗಲೀ, ಆಚಾರ್ರ ಕಟ್ಟೆಯನ್ನು, ಶ್ರೀನಿವಾಸ ಆಚಾರ್ಯರನ್ನು ಶಂಕಿಸಬೇಕು ಎಂದಾಗಲೀ ಅವಳಿಗೆ ಅನ್ನಿಸುವುದಿಲ್ಲ. ತನ್ನ ಇಂದಿನ ವಾಸ್ತವವನ್ನು ಪಾತುಮ್ಮ ಅಗೋಚರ ವಿದ್ಯಮಾನಗಳ ಅಂತೆಕಂತೆಯಿಂದ ತೂಗಿ ನೋಡಲು ಇಷ್ಟಪಡುವುದಿಲ್ಲ. ಇದು ಅನಕ್ಷರಸ್ಥ, ಅನಾಥ, ಶ್ರಮಿಕ ಹೆಣ್ಣಿನ ಜೀವನ ವಿವೇಕ. ಇದು ಈ ನೆಲದ ಜನಪದರ ಜೀವನ ವಿವೇಕ.ಆದರೆ ಚರಿತ್ರೆಯ ಯಾವುದೋ ಪುಟದಲ್ಲಿ ನಡೆದಿದೆ ಎಂದು ಭಾವಿಸಲಾದ ಅನ್ಯಾಯವನ್ನು ಇಂದು ಮರುಸೇಡು ತೀರಿಸಿಕೊಳ್ಳುವ ಮೂಲಕ ಸರಿಪಡಿಸಲು ಹೊರಡುತ್ತೇವೆ ಎಂದು ತಿಳಿವ ಕೋಮುವಾದಿಗಳು ಮಾಡುತ್ತಿರುವುದೇನು? ಚರಿತ್ರೆಗೆ ನ್ಯಾಯ ಒದಗಿಸುವುದೋ ಅಥವಾ

ವರ್ತಮಾನದಲ್ಲಿ ಕೆಲವರನ್ನು ಅಧಿಕಾರ ಸ್ಥಾನದಲ್ಲಿ ಕೂಡಿಸುವುದೋ? ಒಂದು ತಪ್ಪನ್ನು ಇನ್ನೊಂದು ತಪ್ಪಿನಿಂದ ಸರಿಪಡಿಸಲು ಸಾಧ್ಯವೇ? ಕರಸೇವಕನಾಗಿ ಹೋಗಿ ಬಂದ ಮೇಲೆ ಚಂದ್ರಣ್ಣ, ಪಾತುಮ್ಮಳನ್ನು, ಅಣ್ಣ ಕೇಶವನ ಗೆಳೆಯ ಅಹ್ಮದ್ ಬಾವಾನನ್ನು ಹೀಗೆ ಮುಸ್ಲಿಮರು ಅನ್ನಿಸಿಕೊಂಡವರ ವರ್ತನೆಯನ್ನು ಒಂದು ಬಗೆಯ ಗುಮಾನಿಯಿಂದಲೇ ನೋಡಲು ತೊಡಗಿರುತ್ತಾನೆ. ಅವನ ಶಂಕೆ ಅವನೆದುರೇ ನಿಶ್ಶಂಕಿತವಾಗುತ್ತದೆ. ಆದರೂ ಮೊದಲಿನ ನಂಬಿಕೆಯಲ್ಲಿ ಏನೋ ಗಡಚು ತುಂಡಾಗಿ ಕೂಡಿಸಿದ ದಾರದಂತೆ.

ದೇಶದ ಮೂಲೆ ಮೂಲೆಗಳಿಂದ ಕರಸೇವಕರಾಗಿ ಹೋಗಿರುವ ಚಂದ್ರಣ್ಣನಂತಹ ಯುವಕರಿಗೆ ದೇಶಪ್ರೇಮದ, ಧರ್ಮನಿಷ್ಠೆಯ ಹೆಸರಿನಲ್ಲಿ ತಪ್ಪುದಾರಿಗೆ ಎಳೆಯಲಾಗುತ್ತದೆ. ಆದರೆ ಇವರ ಶ್ರಮದ ಸಾರ್ಥಕತೆಯಾದರೂ ಏನು? ಮಸೀದಿ ಧ್ವಂಸದ ಕುರುಹು ಆಗಿರುವ ಆ ಮಣ್ಣಿನ ತುಂಡು ಚಂದ್ರಣ್ಣನಿಗೆ ಒಡ್ಡಿದ ಸವಾಲು ಅದೇಷ್ಟು ಸಂಕೀರ್ಣವಾದದ್ದು! ಆ ಮಣ್ಣಿನ ತುಂಡನ್ನು, ನಮ್ಮ ದೇವಸ್ಥಾನದ ಗೋಡೆಯ ತುಂಡು ಎಂದು ಭಾವಿಸಿದರೆ, ಒಡೆದದ್ದು ನಮ್ಮದೇ ದೇವಳದ ಗೋಡೆಯಾಗುತ್ತದೆ. 'ಅವರ ಮಸೀದಿ' ಎಂದು ಆದರೆ, 'ಅವರ ಮಸೀದಿ' ಎಂದು ಒಪ್ಪಿಕೊಂಡಂತೆ ಆಗುತ್ತದೆ. ಆ ಮಣ್ಣಿನ ತುಂಡನ್ನು ನಮ್ಮೊಟ್ಟಿಗೆ ಏನೆಂತ ಮತ್ತು ಹೇಗೆ ಇಟ್ಟುಕೊಳ್ಳಬೇಕು? ಈ ದೇಶದ ಸಂಕೀರ್ಣ ಇತಿಹಾಸದಲ್ಲಿ ನಮ್ಮದು ಮತ್ತು ನಮ್ಮದಲ್ಲದ್ದು ಎನ್ನುವುದರ ವಿಂಗಡನೆಯನ್ನು ಹೇಗೆ ಮಾಡಬೇಕು? ಇಂದಿನ ಕಣ್ಣುಗಳಿಂದ ನಿನ್ನೆಯನ್ನು ಅರ್ಥೈಸುವುದಾಗಲಿ ಮೌಲ್ಯಮಾಪನ ಮಾಡುವುದಾಗಲಿ ಸಾಧ್ಯವೇ? ಚಂದ್ರಣ್ಣನ ಅತ್ತೆ, ಮಹಾ ಪಂಡಿತಳಲ್ಲ. ಈ ನೆಲದ ಸಾಮಾನ್ಯ ಹೆಣ್ಣಿನ ಸಂಕೇತ. ಆ ಹೆಣ್ಣುಮಗಳು ಚಂದ್ರಣ್ಣನ ಎದುರು ಇಡುವ ಈ ಪ್ರಮೇಯವನ್ನು ಬಿಡಿಸುವ ತ್ರಾಣ ಇಂದಿನ ಕೋಮುವಾದಿಗಳಿಗಿದೆಯೇ? ಮುತ್ತುಪ್ಪಾಡಿಗೆ ರಥಯಾತ್ರೆಯ ಗಾಲಿಗಳು ಹಾದಾಡಿಯಾಗಿದೆ. ಚಂದ್ರಣ್ಣನಂತಹ ಕರಸೇವಕರು ಬಾಬರಿ ಮಸೀದಿ ಎಂದು ತಿಳಿದ ಅಯೋಧ್ಯೆಯ ಪ್ರಕರಣದ ಸಮೀಪವರ್ತಿಗಳಾಗಿಯೂ ಆಗಿದೆ. ಆದರೆ, ಕೋಮುವಾದದ ಯಾವ ಪ್ರಯೋಗಕ್ಕೆ ಯಾವ ಕರಸೇವೆಗೆ ಪಾತುಮ್ಮಳ ಮನಸ್ಸಿನ ವಿವೇಕವನ್ನು ಧ್ವಂಸ ಮಾಡುವ ತಾಕತ್ತಿದೆ? ಕಥೆಯು ಕೊನೆಯಲ್ಲಿ ಸಾಂಕೇತಿಕವಾಗಿ ಹೇಳುವಂತೆ, ದೇವರಾಜ ಅರಸರಿಂದ ಜಮೀನಿನ ಹಕ್ಕುಪತ್ರ ಪಡೆದ ಪಾತುಮ್ಮ; ತಾನು ಬೆವರು ಹರಿಸಿ ದುಡಿದ ಹಣದಿಂದ ಕಟ್ಟಿಸಿಕೊಳ್ಳುವ ಮನೆಯ ಗೋಡೆಯನ್ನು 'ಆ' ಗೋಡೆಯ ತುಂಡನ್ನು ಬೆಸೆದು ಕಟ್ಟಿಕೊಳ್ಳಲು ಬಯಸುತ್ತಾಳೆ. ಬಾಬರಿ ಮಸೀದಿಯನ್ನೇನೋ ಒಡೆಯಬಹುದು, ಒಡೆದೂ ಆಯಿತು. ಕೋಮುವಾದದ ಪ್ರವೇಶ ಮತ್ತು ಶಕ್ತಿ ಪ್ರದರ್ಶನ ಅಲ್ಲಿಗೆ ಮುಗಿದುಬಿಡುತ್ತದೆ

ಅಲ್ಲವೇ? ಇದಕ್ಕಿಂತ ದೊಡ್ಡ ಕೆಡಕನ್ನು ಇನ್ನೇನು ಮಾಡಲು ಸಾಧ್ಯ? ಆದರೆ ಈ ಕೆಡುಕಿಗೆ ಈ ನೆಲದ ಸದ್ವಿವೇಕಯುತ ಮನಸ್ಸುಗಳ ಒಳಗೆ ಪ್ರವೇಶವಿಲ್ಲ. ಅದು ಈ ನೆಲದ ಸತ್ವ. ಕೋಮುವಾದ ಯಾರೆಲ್ಲರನ್ನು ತನ್ನ ಕಾಲಾಳುಗಳೆಂದು ಬಳಸುವ ಪ್ರಯೋಗಮಾಡಲು ಯತ್ನಿಸುತ್ತದೆಯೋ, ಅವರೆಲ್ಲರೂ ತಂತಮ್ಮ ಅಪ್ರಜ್ಞಾವಧಿಯಲ್ಲಿಯೂ ಅದಕ್ಕೆ ವಿರುದ್ಧವಾಗಿ ವರ್ತಿಸತೊಡಗುತ್ತಾರೆ. ಕರಸೇವಕರಾಗಿ ಹೋಗುವುದು ಬೇಡ ಎನ್ನುವ, ಅದು ನಮ್ಮಂಥವರಿಗಲ್ಲ ಎನ್ನುವ ಶ್ರೀನಿವಾಸಾಚಾರ್ಯರು, ಅತ್ತೆ ಕೇಳಿದ ಪ್ರಶ್ನೆಗೆ ತನ್ನ ನಗುವಿನ ಧ್ವನಿಯ ಸಮ್ಮತಿ ಸೂಚಿಸುವ ಕೇಶವ, ಚಂದ್ರಣ್ಣ ಕರಸೇವಕನಾಗಿ ತಮ್ಮ ಧರ್ಮಕ್ಕೆ ದ್ರೋಹ ಮಾಡಿದ್ದಾನೆ ಎಂದು ಭಾವಿಸದೆ, ಅವನನ್ನೂ ಉದಾರವಾಗಿ ನೋಡಿ ಎತ್ತರಕ್ಕೇರುವ ಪಾತುಮ್ಮಳ ಧರ್ಮದೃಷ್ಟಿ... ಈ ಎಲ್ಲವೂ ಕೋಮುವಾದವನ್ನು ಎದುರಿಸುವ ಪಡೆಗಳು. ಇದರ ಮುಂದಾಳುವಾಗುವುದು ಅಡುಗೆಮನೆಯಿಂದ ದೇವರ ಕೋಣೆಗೆ ಹೋಗಿ ಅಲ್ಲಿಂದ ಸೀದಾ ಜಗುಲಿಗೆ ಬಂದು ಪ್ರಶ್ನೆಕೇಳಿ ತೀರ್ಪುಕೊಡುವ ಚಂದ್ರಣ್ಣನ ಅತ್ತೆಯ ಪಾರದರ್ಶಕ ನಿಲುವು. ಕಡೆಗೂ 'ಗೆಲುವು ಮನುಷ್ಯ ಬದುಕಿನ ಬಹುತ್ವಕ್ಕೆ' ಎಂಬ ಸಮ್ಮತಿಯನ್ನು ಅಂಕಿತವಾಗಿಸುವ ಕಥೆ ಇದು.

ಬೊಳುವಾರು ಅವರು ಮುಸ್ಲಿಮ್ ಸಂವೇದನೆಯ ಎಚ್ಚರವನ್ನು ಸಡಿಲವಾಗಿಸಿಕೊಳ್ಳದೇ ಆ ಮೂಲಭಿತ್ತಿಯ ಮೇಲೆ ಮಾನವೀಯತೆಯ ರಂಗು ತುಂಬಿ, ವರ್ತಮಾನದ ಚಾದ್ದರವನ್ನು ಅಲ್ಲಾನಿಗೆ ಅರ್ಪಿಸಬೇಕು ಎಂಬ ಅರಿವಿನಲ್ಲಿ ಬರೆದವರು. ಕನ್ನಡದ ಮಹತ್ವದ ಕಥೆಗಾರ ಜಯಂತ್ ಕಾಯ್ಕಿಣಿ ಒಂದೆಡೆ ಹೇಳುತ್ತಾರೆ. ಈ ಜಗತ್ತಿನಲ್ಲಿ ಮನುಷ್ಯ ಪಡೆಯುವ ದೈವಿಕ ಅನುಭೂತಿ ಎಂದರೆ ಯಾವುದು? ವರ್ತಮಾನದ ಕಲೆ, ಹಾಡು, ಕಥೆ, ಸಿನಿಮಾ ಮುಂತಾದವುಗಳೇ ಈ ಕಾಲದ ಆಧ್ಯಾತ್ಮಿಕಗಳಲ್ಲವೇ? ಮನುಷ್ಯರು ಕಲೆಯ ಸಾನಿಧ್ಯದಲ್ಲಿಯೇ ದೈವತ್ವದ ಅನುಭೂತಿಯನ್ನು ಪಡೆಯುವುದು. ಈ ಜಗತ್ತಿನ ಯಾವುದೇ ಶ್ರೇಷ್ಠ ಕೃತಿ, ಶ್ರೇಷ್ಠ ಆಧ್ಯಾತ್ಮವನ್ನೇ ನುಡಿಸುತ್ತದೆ ಎಂದು. ಜಯಂತ್‌ರ ಈ ಮಾತನ್ನು ಬರಹಗಾರರು ನಿರ್ವಹಿಸಲೇಬೇಕಾದ ಅರಿವಿನ ಎಚ್ಚರದ ಭಾಗವಾಗಿಯೂ ನೋಡಬೇಕು. ಬೊಳುವಾರರಂತಹ ಬರಹಗಾರರು ಕೋಮುವಾದದ ವಿಷಯವನ್ನು ಎಚ್ಚರದಿಂದ ಸ್ಪರ್ಶಿಸಬೇಕಾಗುತ್ತದೆ ಮತ್ತು ಮತೀಯವಾದಿ ಸಂಗತಿಗಳ ಕುರಿತು ಉಪೇಕ್ಷಿಸುವುದೂ ಸಾಧ್ಯವಿಲ್ಲ. ಕೋಮುವಾದದ ಅತ್ಯಂತಿಕ ಗೆಲುವು ಅಡಕವಾಗಿರುವುದು ಅದು ತನ್ನ ಗೆಲುವನ್ನು ಮೂಡಿಸುವುದು ಸೋತವರ ಮನೋಭೂಮಿಕೆಯಲ್ಲಿ. ಅಲ್ಪಸಂಖ್ಯಾತರಲ್ಲಿ ದುರ್ಬಲರೆಂಬ ಭಾವವನ್ನು ಕೆಣಕಿ ಇದು ಮೂಲಭೂತವಾದದ

ಬೆಳವಣಿಗೆಗೆ ಮತ್ತು ಉಗ್ರವಾದೀ ನೆಲೆಗೆ ತಳಹದಿಯಾಗುತ್ತದೆ. ಈ ಕಡುಮೂರ್ಖತನವನ್ನು ನೀಗಿಕೊಳ್ಳದಿದ್ದರೆ ಭಾರತದಂತಹ ಬಹುಸಂಸ್ಕೃತಿಯೇ ಜೀವನಾಡಿಯಾಗಿರುವ ದೇಶದ ಬಹುತ್ವಕ್ಕೆ ಧಕ್ಕೆ ಒದಗಿದರೆ, ಆ ದೇಶವು ಅಣುಬಾಂಬಿನ ಅಗತ್ಯವೂ ಇಲ್ಲದೆ ಸಂಪೂರ್ಣ ಸುಟ್ಟುಹೋಗಬಲ್ಲದು. ಸಾವಿರಾರು ವರ್ಷಗಳಿಂದ ಬೇರುಗಳನ್ನು ಚಾಚಿ ಬೆಳೆದು ನಿಂತ ಆಲವನ್ನು ತಾಯಿಬೇರೊಂದನ್ನೇ ಬಿಟ್ಟು ಉಳಿದೆಲ್ಲವನ್ನೂ ಕತ್ತರಿಸಿ ಹಾಕಿದರೆ; ಅದರ ಜೀವಸತ್ವವು ಒಣಗುತ್ತದೆ. ಬದುಕಿನ ಸಾಧ್ಯತೆಯು ಕ್ಷೀಣವಾಗುತ್ತದೆ. ಜೀವತ್ರಾಣದಿಂದ ನಳನಳಿಸಬೇಕಿರುವ ವೃಕ್ಷವು ಜೀವನ್ಮೃತ ಸ್ಥಿತಿಯನ್ನು ತಲುಪುತ್ತದೆ. ಇಂದು ಕೋಮುವಾದಿಗಳ ನಡೆ–ನೀತಿಗಳು ಅಂತರಂಗ–ಬಹಿರಂಗಗಳಲ್ಲಿ ಬೇರೆ ಬೇರೆಯಾಗಿವೆ. ಅವರ ನಾಲಿಗೆ ಒಳಿತನ್ನು ಗಿಳಿಪಾಠದಂತೆ ನುಡಿಯುತ್ತದೆ ಕೃತಿ ಅದಕ್ಕೆ ವಿರೋಧವಾಗಿದೆ. ಈ ಇಂತಹ ವರ್ತನೆಯನ್ನು ಕವಿ ಕೆ.ಎಸ್. ನಿಸಾರ ಅಹ್ಮದ್ ಅವರು ತಮ್ಮ ಕವಿತೆಯೊಂದರಲ್ಲಿ ಹೀಗೆನ್ನುತ್ತಾರೆ–

> "ಒಳಗೊಳಗೇ ಬೇರುಕೊಯ್ವ
> ಲೋಕದೆದುರು ನೀರುಹೊಯ್ವ"

ವರ್ತನೆ ಎಂದು. ಆದರೆ, ಇಂತಹ ದುರ್ಭರ ಪರಿಸ್ಥಿತಿಯಲ್ಲಿಯೂ ವಿಚಾರಹೀನರಾಗದೆ, ಸಿನಿಕರಾಗದೆ ಬಾಳಬೇಕಿರುವುದು ಜನವಿವೇಕದ ಕರ್ತವ್ಯ. ಕವಿ ನಿಸಾರ್‌ರು ಹೇಳುವ ಹಾಗೆ, 'ನಿಮ್ಮೊಡನಿದ್ದೂ ನಿಮ್ಮಂತಾಗದೆ' ಇರುವುದು ವರ್ತಮಾನದ ಸವಾಲು. ಮನುಷ್ಯ ಚರಿತ್ರೆಯ ಈ ಉಧ್ವಸ್ಥತೆಯ ಕಾಲದಲ್ಲಿ ಸಂವೇದನಾಶೀಲ ಪ್ರಜ್ಞೆಯ ಕರ್ತವ್ಯವಾದರೂ ಏನು? ಜಿ.ಎಸ್.ಎಸ್. ಹಿಂದೆಯೇ ಈ ಎಚ್ಚರವನ್ನು ನುಡಿದಿದ್ದರು.

> ಎಂತೆಂಥಹ ದೀಪಾವಳಿಯ ಹಡುಗಗಳೇ
> ಮುಳುಗಿ ತಳ ಕಚ್ಚಿರುವಾಗ, ನಾನು ಹಚ್ಚುವ ಹಣತೆ
> ಶಾಶ್ವತವೆಂಬ ಭ್ರಾಂತಿ ನನಗಿಲ್ಲ.
> ಆದರೂ ಹಣತೆ ಹಚ್ಚುತ್ತೇನೆ ನಾನು.

ಮನುಷ್ಯ ಚರಿತ್ರೆಯ ವಿಧ್ವಸ್ಥತೆಯ ಕಾಲದಲ್ಲಿ ಬರಹಗಾರ ಏನನ್ನು ಮಾಡಬಹುದೋ ಅದನ್ನು ಒಂದು ತಲ್ಲೀನ ಉದಾರತೆಯಲ್ಲಿ ಜೀವತುಂಬಿದವರು ಬೊಳುವಾರರು. ಒಂದು ಕೈಯಲ್ಲಿ ಬೆಂಕಿ, ಒಂದು ಕೈಯಲ್ಲಿ ನೀರು ಹಿಡಿದು ಲೋಕ ಸಮಾನತೆಗಾಗಿ ಹಪಹಪಿಸಿದ ಸಂತ ರಾಬಿಯಾಳಂತಹ ಎಚ್ಚರವನ್ನು ಬರಹಗಾರ ಹೊಂದಿರಬೇಕಾಗುತ್ತದೆ. ಕಳೆದ ಕಾಲು ಶತಮಾನದ ಈಚೆಗೆ ಬೊಳುವಾರರು ತಮ್ಮ ಗದ್ಯದಲ್ಲಿ ಸಂಕಲಿಸಿಕೊಂಡ ಭಾಷಿಕ

ವಿನ್ಯಾಸಗಳನ್ನು, ಪ್ರಯೋಗಗಳನ್ನು ಗಮನಿಸಬೇಕು. ಯಾವ ಧರ್ಮಶಾಸ್ತ್ರಗಳು ಮನುಷ್ಯ ಬದುಕಿನ ಸೌಹಾರ್ದತೆ ಸೋದರತ್ವವನ್ನು ನುಂಗಿ ನೀರು ಕುಡಿಯುತ್ತಿವೆಯೋ, ಮನುಷ್ಯ ಬಾಳಿನ ಗೌರವವನ್ನು ನಾಶ ಮಾಡುತ್ತಿವೆಯೋ ಅದನ್ನು ಆ ಪೌರಾಣಿಕ ಪರಿಭಾಷೆಯಲ್ಲಿಯೇ ಭಂಜಿಸಿ ಪರ್ಯಾಯವನ್ನು ಒದಗಿಸುವ ಪ್ರಯತ್ನವಂತಿಕೆಯನ್ನು ಕಾಣಬೇಕು. ಅವರ ಕಥೆಯೊಂದರ ನಿರೂಪಣೆಯ ಸಾಲುಗಳು ಹೀಗಿವೆ–

ಹೂಂಕರಿಸಿ ಓಡುವವುಗಳ ಆಣೆ
ಕಿಡಿ ಹಾರಿಸುತ್ತಾ ಹೋಗುವವುಗಳ ಆಣೆ
ಪ್ರಾತಃ ಕಾಲದಲ್ಲಿ ಹಲ್ಲೆ ನಡೆಸುವವುಗಳ ಆಣೆ
ಅಲ್ಲಿ ಧೂಳೆಬ್ಬಿಸುವವುಗಳ
ಸೈನ್ಯವ್ಯೂಹದಲ್ಲಿ ಮುನ್ನುಗ್ಗುವವುಗಳ ಆಣೆ
ಭೂಮಿಯ ಮೇಲೆ ಒಡೆತನ ಮತ್ತು ಅಧಿಕಾರಕ್ಕಾಗಿ
ಕಣ್ಣು ಕಿವಿಗಳಷ್ಟೇನೇ ಪ್ರಮಾಣವಾಗಿರಿಸಿಕೊಂಡು
ನಿನ್ನ ದಿವ್ಯ ವಾಣಿಯನ್ನು
ಅವಿವೇಕದಿಂದ ವಿಚಾರರಹಿತವಾಗಿ ಉದ್ಧರಿಸುವವರನ್ನು
ನರಕದ ಕೆಂಡರಾಶಿಯ ಮೇಲೆ ನಿಲ್ಲಿಸು

–ಈ ನಿರೂಪಣಾ ವಿಧಾನದಲ್ಲಿರುವ ವಿಶಿಷ್ಟತೆಯು, ಶೈಲಿಯಲ್ಲಿ ತಂದುಕೊಳ್ಳಬೇಕಾದ ಬದಲಾವಣೆಗೆ ಸಂಬಂಧಿಸಿದ್ದಾಗಿರಲಿಲ್ಲ. ಅವಿವೇಕದಿಂದ ವರ್ತಿಸುವ ಜನರಿಗೆ, ಕೋಮುವಾದಕ್ಕೆ ಮಾನವೀಯತೆಯನ್ನು ಮಾರಿಕೊಂಡವರಿಗೆ ಸತ್ಯದ ಶಾಖವನ್ನು ತಲುಪಿಸುವ ಕಟ್ಟಕಡೆಯ ಪ್ರಯತ್ನದಂತೆ ಕಾಣುತ್ತದೆ.

ಜಾಗತೀಕರಣ ಸಂದರ್ಭದ ಕನ್ನಡ ಸಣ್ಣಕತೆಗಳನ್ನು ಅಧ್ಯಯನ ಮಾಡುವಾಗ, ಗಮನಸೆಳೆಯುವ ವಿಶಿಷ್ಟತೆಯಿರುವುದು ಮಹಿಳಾ ನಿರೂಪಣೆಗಳಲ್ಲಿ. ಆಧುನಿಕ ಕನ್ನಡದಲ್ಲಿ ಮಹಿಳಾ ಅಭಿವ್ಯಕ್ತಿಯ ಪರಂಪರೆಯದ್ದೇ ಒಂದು ಕಥನ. ನಂಜನಗೂಡಿನ ತಿರುಮಲಾಂಬಾ, ಆರ್.ಕಲ್ಯಾಣಮ್ಮ, ಶ್ಯಾಮಲಾದೇವಿ ಬೆಳಗಾಂವಕರ, ಸರಸ್ವತಿಬಾಯಿ ರಾಜವಾಡೆ ಇವರು ನವೋದಯದ ಆರಂಭದಲ್ಲಿಯೇ ಗದ್ಯ ಬರವಣಿಗೆಯಲ್ಲಿ ತಮ್ಮನ್ನು ದಾಖಲಿಸಿಕೊಂಡವರು. ಆಧುನಿಕ ಸಾಹಿತ್ಯದಲ್ಲಿ ಮಹಿಳಾ ಅಭಿವ್ಯಕ್ತಿಯ ಚಹರೆಯನ್ನು ಮೂಡಿಸಲು ಶ್ರಮಿಸಿದವರು.

ಆ ಕಾಲದ ಕನ್ನಡ ಸಾಹಿತ್ಯ ಮತ್ತು ವಿಮರ್ಶೆ ಅವರನ್ನು ಕರುಣೆಯಿಂದ ಕಂಡು ದೂರ ಇಟ್ಟಿತೇ ವಿನಃ ಅವರ ಬರವಣಿಗೆಗಳ ಪ್ರಾಮಾಣಿಕ ಅಧ್ಯಯನವಾಗಲಿ, ಓದಾಗಲಿ ನಡೆಯಲಿಲ್ಲ. ಆದರೆ ಅಕ್ಷರ ಸಂಪರ್ಕ, ಸಾಮಾಜಿಕ ಬದುಕಿನಲ್ಲಿ ಪಾಲ್ಗೊಳ್ಳುವ ಅವಕಾಶ ಈ ಎಲ್ಲವೂ ಅತ್ಯಂತ ಕನಿಷ್ಟಮಟ್ಟದಲ್ಲಿ ಇದ್ದರೂ ಮಹಿಳಾ ಬರವಣಿಗೆಯ ಇತಿಹಾಸ ಪ್ರಾರಂಭವಾಯಿತು. ಹೆಣ್ಣು ಹೆಣ್ಣಾಗಿ ಹೆಣ್ಣಿನ ಬದುಕನ್ನು ಶೋಧಿಸಿಕೊಳ್ಳುವ ಪ್ರಯತ್ನ ನಡೆಯಿತು. ಹೆಣ್ಣಿನ ಕಣ್ಣಿನಿಂದ ಲೋಕವನ್ನು ನೋಡುವ ಬಗೆಯೂ ತೆರೆಯಿತು. ಮಾಸ್ತಿ ವೆಂಕಟೇಶ ಅಯ್ಯಂಗಾರ ಅವರ ಸಮಕಾಲೀನ ಕಥೆಗಾರ್ತಿ ಶ್ಯಾಮಲಾದೇವಿ ಬೆಳಗಾಂವಕರ ಅವರನ್ನು ಕನ್ನಡದ ಮಹಿಳಾ ಸಣ್ಣಕಥೆಗಳ ಆದ್ಯ ಲೇಖಕಿಯಾಗಿ ಗುರುತಿಸಬೇಕಾಗುತ್ತದೆ. 'ಗಂಡ್ಸಿನಾಧಾರ ಇಲ್ದೆ ಯಾವ ಹೆಣ್ಣು ಹೆಂಗ್ಸು ಬಾಳೇ ಮಾಡಬೌದು?' –ಎಂಬ ಅನಾದಿ ಪ್ರಶ್ನೆಯನ್ನು ಎದುರಿಟ್ಟುಕೊಂಡು, ಶ್ಯಾಮಲಾದೇವಿಯವರ 'ದ್ಯಾಂವಕ್ಕ'ನ ಪಾತ್ರದ ನಿರ್ವಚನವಿದೆ. ಹೆಣ್ಣು ಎಂಬ ಜೈವಿಕ ಕಾರಣಕ್ಕಾಗಿಯೇ ಅವಳು ಅನುಭವಿಸಬೇಕಾದ ಅಪಮಾನದ ಅಸಹಾಯಕತೆಯ ರಚನೆಗಳು ನಮ್ಮ ಸಾಮಾಜಿಕ ಕೌಟುಂಬಿಕ ವಾಸ್ತವಗಳಲ್ಲಿ ಅದೆಷ್ಟು ಆಳವಾಗಿ ಹೆಣೆಯಲ್ಪಟ್ಟಿವೆ ಎಂಬುದನ್ನು ಈ ಕಥೆಗಾರ್ತಿಯರು ದಾಖಲಿಸಿದರು. ಸಾಮಾಜಿಕ ರಾಜಕೀಯ ದುರಂತಗಳು ಹೆಣ್ಣಿನ ಖಾಸಗಿ ಬದುಕನ್ನೂ ಹೇಗೆ ನಿರ್ನಾಮಗೊಳಿಸುತ್ತವೆ ಎನ್ನುವುದನ್ನು, ಕೊಡಗಿನ ಗೌರಮ್ಮ ಮತ್ತು ಶ್ಯಾಮಲದೇವಿ ಬೆಳಗಾಂವಕರ ಅವರ ಕಥೆಗಳು ಹೇಳಿದವು. ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಒಟ್ಟಾಗಿ ಹೋರಾಡಿದ ಹಿಂದು–ಮುಸ್ಲಿಮರನ್ನು ದೇಶವಿಭಜನೆಯ ಕರಾಳ ವಿದ್ಯಮಾನವು ಪರಸ್ಪರ ವೈರಿಗಳಾಗಿ ಪ್ರತಿಬಿಂಬಿಸಿತು. ಧರ್ಮಕಾರಣದ ದ್ವೇಷದ ದಳ್ಳುರಿಗೆ ಅಕ್ಷರಶಃ ಬಲಿಯಾದವರು ಎರಡೂ ಧರ್ಮಗಳ ಮಹಿಳೆಯರು ಎನ್ನುವುದನ್ನು ಎಚ್.ವಿ. ಸಾವಿತ್ರಮ್ಮನವರ ಕಥೆಗಳು ದಾಖಲಿಸಿದವು. ದೇಶವಿಭಜನೆಯ ಕರಾಳ ಇತಿಹಾಸವನ್ನು ಅತ್ಯಂತ ಹೃದಯಸ್ಪರ್ಶಿಯಾಗಿ ಮೂಡಿಸಿದ ಕಥೆಗಳಿವು.

ಸ್ವಾತಂತ್ರ್ಯಾನಂತರದ ಕನ್ನಡ ಮಹಿಳಾ ಅಭಿವ್ಯಕ್ತಿಯು ಆದ್ಯತೆಯಾಗಿಸಿಕೊಂಡಿದ್ದು ಬದಲಾಗುತ್ತಿರುವ ಸಮಾಜದೊಂದಿಗೆ ರೂಪಾಂತರಗೊಳ್ಳುತ್ತ ಬಂದ ತನ್ನ ಸಂಕೋಲೆಗಳ ಕುರಿತು.ಶಿಕ್ಷಣ, ಉದ್ಯೋಗಗಳಿಂದ ಹೆಣ್ಣಿನ ವ್ಯಕ್ತಿತ್ವದಲ್ಲಿ ನಡೆದ ಪಲ್ಲಟವನ್ನು ಒಪ್ಪಿಕೊಳ್ಳಲು ಕುಟುಂಬವಾಗಲಿ, ಸಮಾಜವಾಗಲಿ ಸಿದ್ಧವಿರಲಿಲ್ಲ. ಅವಳ ವ್ಯಕ್ತಿತ್ವದ ವಿಕಸನವನ್ನು ಕುಟುಂಬದ ಆರ್ಥಿಕ ಸಬಲೀಕರಣ ಎಂದೇ ಅರ್ಥೈಸಲಾಯಿತು ಮತ್ತು ಮಹಿಳೆಗೆ ಅಂತಹ ಒತ್ತಡವನ್ನೂ ತಂದು ಒಪ್ಪಿಸಲಾಯಿತು. ಇಂತಹ ವಾಸ್ತವದಲ್ಲಿ, ಶೋಷಣೆಯ ಎಳೆಗಳು

ಅದೆಷ್ಟು ನಯವಾಗಿವೆ ಎನ್ನುವುದನ್ನು ವಿವರಿಸಿಕೊಳ್ಳುವಲ್ಲಿ ಮಹಿಳಾ ಅಭಿವ್ಯಕ್ತಿಯ ಮಹತ್ವದ ಗುರುತುಗಳಿದ್ದವು. ಆದರೆ, ಜಾಗತೀಕರಣದ ಕಾಲಘಟ್ಟವು ಇದುವರೆಗಿನ ಬದುಕಿನ ಸವಾಲುಗಳಿಗಿಂತ ಬೇರೆಯಾದ ಸಮಸ್ಯೆಗಳನ್ನು ಎದುರಿಟ್ಟಿತು. ಇದನ್ನೇ ಪ್ರತಿಭಾ ನಂದಕುಮಾರ್ ಅವರ ಕವಿತೆಯ ಸಾಲುಗಳು ಹೀಗೆ ಧ್ವನಿಸಿದವು.

ಬೆಳಗಿನಿಂದ ರಾತ್ರಿಯತನಕದ ಕೆಲಸಗಳ ಬಗ್ಗೆ
ರಾತ್ರಿಯ ಆಕ್ರಮಣದ ಬಗ್ಗೆ.....
ಬಹಳ ಹೇಳಿಯಾಗಿದೆ, ಈಗ, ಮುಂದೇನು?

ವೈದೇಹಿಯವರ ಅಕ್ಕು, ಸೌಗಂಧಿಯರಿಂದ ನಿಧಾನ ಬಿಡಿಸಿಕೊಳ್ಳುತ್ತ ; ವೀಣಾ ಶಾಂತೇಶ್ವರ ಅವರ ಬಿಡುಗಡೆ ಕಥೆಯ ಸರೋಜಾಳನ್ನೂ ದಾಟಿಕೊಂಡು ಅದರಾಚೆಗಿರುವ, ನಿಭಾಯಿಸಲೇಬೇಕಾದ ಸಾಮಾಜಿಕ ಜವಾಬ್ದಾರಿಗಳ ಕಡೆಗೆ ಮಹಿಳಾ ಅಭಿವ್ಯಕ್ತಿಯು ಚಾಚಿಕೊಂಡಿತು. 'ಮಹಿಳೆಯೂ ಮನುಷ್ಯಳು' ಎನ್ನುವುದು ಫೆಮಿನಿಸಂನ ಮೂಲಭೂತ ತಿಳುವಳಿಕೆ. ಇದನ್ನು ಸಾಧಿಸಿ ತೋರಿಸಬೇಕಾದ ಸವಾಲು ಈ ಕಾಲಾವಧಿಯ ಮಹಿಳಾ ಸಂವೇದನೆಗಿತ್ತು. ಇಂತಹ ಪರಿಸ್ಥಿತಿಯನ್ನು ಮಹಿಳಾ ಪ್ರಜ್ಞಾವಂತಿಕೆಯು ನಿಭಾಯಿಸಿದ ಬಗೆಯೇ ಕನ್ನಡದ ಮಹಿಳಾ ಸಂವೇದನೆಯ ಘನತೆಯ ಕುರುಹುಗಳಾಗಿವೆ. ಕಳೆದ ಮೂರು ದಶಕಗಳ ಕನ್ನಡದ ಮಹಿಳಾ ಕಥೆಗಳು, ಅತ್ಯಂತ ಸಾವಧಾನದಿಂದ ನಿರೂಪಿಸಿದ್ದು ಈ ನೆಲದ ಸಹಜ ವಿನ್ಯಾಸವಾದ ಕೂಡುಬಾಳಿನ ಗತಿಯನ್ನು. ಪರಸ್ಪರರ ನಂಬಿಕೆ, ಆಚರಣೆಗಳಲ್ಲಿ ವ್ಯತ್ಯಾಸವಿದ್ದಾಗಲೂ ನೆಲದಾಳದ ಜೀವತ್ರಾಣವಾದ ನೀರನಡೆಯು ಎಲ್ಲವನ್ನೂ ಒಳಗೊಳ್ಳುವ ತಾಯ್ತನದಲ್ಲಿದೆ ಎಂಬ ಅದಮ್ಯ ನಂಬಿಕೆಯನ್ನು ಈ ಕಥೆಗಳು ಕಾಣಿಸಿದವು. ಇವುಗಳ ಪ್ರಾತಿನಿಧಿಕ ಎಂಬ ಮಾದರಿಯನ್ನು ಎಚ್.ನಾಗವೇಣಿಯವರ ಕಥನ ಧರ್ಮದಲ್ಲಿ ಕಾಣಬಹುದು.

ಕಾಬೂಲಿವಾಲಾಗಳ ಕಥೆಗಳಿಂದ, ಅರೇಬಿಯನ್ ನೈಟ್ಸನ ಶಹಜಾದೆಯ ಕಥೆಗಳಿಂದ ಸಮೃದ್ಧವಾಗಿದ್ದ ನಮ್ಮ ಬಾಲ್ಯವನ್ನು ಯಾರೋ ದೋಚಿಬಿಟ್ಟ ಅನುಭವವನ್ನು ಅರಗಿಸಿಕೊಳ್ಳುವುದು ಸುಲಭವಾಗಿರಲಿಲ್ಲ. ಎಂ.ಆರ್.ಕಮಲಾ ಅವರ ಕವಿತೆಯ ಒಂದು ನುಡಿ 'ಭಗ್ನವಾಯಿತು ಬಾಲ್ಯ, ಬಾಗ್ದಾದು' ಎಂದು ವಿಷಾದಿಸುತ್ತದೆ. ಈ ಕೂಡುಬದುಕಿನಲ್ಲಿ ಕಳಚುವುದಾದರೂ ಏನನ್ನು? ಎಂಬ ಯಾತನೆಯ ಸುಡುಬೆಂಕಿಯು ಹಾದಾಡತೊಡಗಿತು.

ಕೋಮುವಾದವು ತನ್ನ ಕೋರೆದಾಡೆಯನ್ನು ಮಸೆದು ಆರ್ಭಟಿಸಿದ ದಿನಮಾನಗಳಲ್ಲಿ ಯಾತನೆಯ ನಾಡಿಯನ್ನು ಹಿಡಿದು ಪರೀಕ್ಷಿಸುವುದೂ ಅಸಾಧ್ಯವಾಗಿಬಿಟ್ಟಿತು. ನಮ್ಮ ನಂಬಿಕೆಯ ದೇವರನ್ನು ನಮ್ಮಿಂದ ಕಸಿದು ಅನಾಥರಾಗಿಸಲಾಗಿದೆ –ಎಂಬ ತಳಮಳ ಉಂಟಾಯಿತು. ಗಾಂಧೀಜಿಯ ರಾಮನನ್ನು ಪ್ರೀತಿಸಿದ್ದ ಮಹಿಳಾ ಮನಸ್ಸಿಗೆ, ಕೋಮುವಾದಿಗಳ ಜೈಶ್ರೀರಾಮ್‌ನನ್ನು ಒಪ್ಪಿಕೊಳ್ಳುವುದಾಗಲಿ, ಅರ್ಥೈಸಿಕೊಳ್ಳುವುದಾಗಲಿ ಸಾಧ್ಯವಾಗಲಿಲ್ಲ. 'ಜನನೀ ಜನ್ಮಭೂಮಿ'ಗಳನ್ನು ಗೌರವದಿಂದ ನೋಡುವ ಸಂಸ್ಕೃತಿಯಲ್ಲಿ, ತಾಯ್ನೆಲದಲ್ಲಿಯೇ ರಕ್ತದ ಕಾಲುವೆಯನ್ನು ಹರಿಸುವ ದೇಶಪ್ರೇಮವನ್ನು ಅರ್ಥಮಾಡಿಕೊಳ್ಳುವ ಬಗೆ ಯಾವುದು? ತಿನ್ನುವ ಆಹಾರವನ್ನು ಕನಿಷ್ಠ ಎಂದು ತೀರ್ಮಾನಿಸಿ, ಆ ಕಾರಣಕ್ಕಾಗಿ ಊರುಕೇರಿಯ ಸೌಹಾರ್ದತೆಯನ್ನು ಹಾಳುಗೆಡಹಿ ಜೀವಹತ್ಯೆಯ ಅತ್ಯಾಚಾರದ ಹಿಂಸಾಕಾಂಡ ವಿಜೃಂಭಿಸುವಾಗ, ಮಹಿಳಾ ಸಂವೇದನೆಯೂ ತನ್ನನ್ನು ಈ ಅಮಾನುಷತೆಯ ಎದುರು ಒಡ್ಡಿಕೊಳ್ಳಬೇಕಾಯಿತು. ಹೆಣ್ಣುದೇಹವನ್ನು ಭೋಗದ ಸರಕು ಎಂದು ತೀರ್ಮಾನಿಸುವ ಅತ್ಯಾಚಾರದಂತಹ ಕ್ರೌರ್ಯಕ್ಕೆ ಈಗ, ಧರ್ಮಕಾರಣವೂ ಸೇರಿಕೊಂಡಿತು. ಉತ್ತರ ಪ್ರದೇಶದ ಕಥುವಾದಲ್ಲಿ ನಡೆದ ಬರ್ಬರ ಅತ್ಯಾಚಾರಕ್ಕೆ ಎಳೆಯ ಬಾಲೆ ಬಲಿಯಾದಳು. ಕಾರಣ ಅವಳ ಅನ್ಯಧರ್ಮೀಯತೆ. ಅತ್ಯಾಚಾರ ಅವಳ ಪ್ರಾಣಬಲಿಯವರೆಗೂ ಸತತವಾಗಿ ನಡೆಯಿತು. ಅದೂ ಧರ್ಮದ ಪವಿತ್ರ ಸ್ಥಳವೆಂದು ತಿಳಿವ ದೇವಾಲಯದೊಳಗೆ. ಇಂತಹ ಹಲವು ಪ್ರಕರಣಗಳು ಮಹಿಳಾ ಪ್ರಜ್ಞೆಯನ್ನು ನಲುಗಿಸಿದವು. ಗುಜರಾತ್‌ನಲ್ಲಿ ನಡೆದ ಕೋಮುಹಿಂಸೆಗೆ ಕಾರಣ ಹಿಟ್ಲರಶಾಹಿ ಠೇಂಕಾರ. ಅನ್ಯಮತೀಯರೆಂಬ ಒಂದೇ ಕಾರಣಕ್ಕೆ ಗರ್ಭವನ್ನು ಇರಿದು, ಅಗ್ನಿಗರ್ಪಿಸಿ ರಾಮನ ಹೆಸರಿನಲ್ಲಿ ಜೈಕಾರ ಮೊಳಗಿತು ಎಂದು ವರದಿಯಾದ ಕೌಸರ್‌ಬಾನು ನಮ್ಮದೇ ಗುಲ್ಬರ್ಗಾದಿಂದ ಕೂಲಿಕಾರ್ಮಿಕಳಾಗಿ ಗುಜರಾತ್‌ನಲ್ಲಿ ನೆಲೆಸಿದವಳು. ಇಂತಹ ಅಗಣಿತ ವಿದ್ಯಮಾನಗಳು ಕೋಮುವಾದಿ ರಕ್ಕಸತನಕ್ಕೆ ಮನುಷ್ಯತ್ವವನ್ನು ಅಪೋಶನ ತೆಗೆದುಕೊಳ್ಳುವ ಬಕಾಸುರ ಹೊಟ್ಟೆಯಿದೆ ಎಂಬುದನ್ನು ತೀರ್ಮಾನಿಸಿತು. ಇಂತಹ ಲಜ್ಜೆಗೆಟ್ಟ ಕಾಲದಲ್ಲಿ, ಮಾನವೀಯತೆಯ ಸಹಸ್ರಾರವೇ ಒಡೆದು ಜೀವತ್ರಾಣದ ಗರ್ಭಜಲವೇ ಸೋರಿಹೋಗುವಾಗಲೂ, ಬದುಕಿನ ಜೋಲಿ ಸಂಭಾಳಿಸುವ ಜೋತ್ಯಮ್ಮಂದಿರಂತೆ ಕನ್ನಡ ಕಥನ ದುಡಿದಿದೆ. ಮಹಿಳಾ ಸಂವೇದನೆಯ ಕುಶಲ ಕರ್ಮಕ್ಕೆ, ಏನಿಲ್ಲದೆಯೂ ಅಟ್ಟುಣ್ಣುವ; ಸಾವಿರ ಹರಕಲನ್ನು ಹೊಲಿದು ಮಾನ ಕಾದುಕೊಳ್ಳುವ, ಬಿದ್ದಲ್ಲಿಯೇ ಬೇರುಬಿಟ್ಟು ಮೇಲೇಳುವ ತಾಕತ್ತಿದೆ. ಆ ಮೂಲಕ ಅತ್ಯಂತ ಶ್ರದ್ಧೆಯಿಂದ ಕಥೆಗಾರ್ತಿಯರು ಹೆಣೆದಿಟ್ಟ

ಜೋಲಿಯಲ್ಲಿ ಹೆಣ್ಣುಗಳು ಜತನದಿಂದ ಕಾಪಾಡಿ ತಂದ ಲೋಕಕ್ಕೇ ತಾಯಾಗುವ ಗುಣದ ಶಿಶುವಿಗೆ ಹಾಡಿದ ಜೋಗುಳದ ದನಿಯಿತ್ತು.

ಎಚ್.ನಾಗವೇಣಿ, ತಮ್ಮ ಮೀಯುವ ಆಟ' ಕಥಾ ಸಂಕಲನದಲ್ಲಿ "ನನ್ನ ಬಾಲ್ಯವರಳುವ ಮುನ್ನವೇ ಕಡಲ ಕರೆಯ ಮಣ್ಣಲ್ಲಿ ಮಣ್ಣಾಗಿ ಹೋದ ಆ ಮೈಯದ್ದಿಬ್ಯಾರಿಯವರು ನನ್ನ ನೆನಪಿನಂಗಳಕ್ಕೆ ದಿಗಿಣ ಹಾಕಿಕೊಂಡು ಬಂದವರೆ, 'ಇಲ್ಲ ಮಗಳೆ... ನೀನಿನ್ನು ಸತ್ತಿಲ್ಲ... ಬಾಲ್ಯದ ನೆನಪುಗಳಿನ್ನೂ ನಿನ್ನಲ್ಲಿ ಹಸಿರಾಗಿದೆ ನೋಡು' ಎಂದು ಧೈರ್ಯ ತುಂಬುವಂತೆ ನನ್ನೊಳಗೆ ಬಿಟ್ಟು ಹೋದುದ್ದು ಈ 'ಮೀಯುವ ಆಟ'ದ ಕತೆಯ ಎಳೆಯನ್ನು!' –ಎನ್ನುತ್ತಾರೆ. ಬಾಲ್ಯದಲ್ಲಿ ಕಂಡುಂಡ ಬದುಕಿನ ಜೀವಸತುವನ್ನು ಎಬ್ಬಿ ತೆಗೆದು ಇಂದಿನ ವಿಷಾನಿಲವನ್ನು ಅತ್ತತ್ತ ದೂಡಬಹುದೇ? ಎಂಬ ಹುಡುಕಾಟವಿದು. ಈ ಮೈಯದ್ದಿಬ್ಯಾರಿಯವರು 'ಮೀಯುವ ಆಟ' ಕಥೆಯ ಮುಖ್ಯ ಪಾತ್ರವೂ ಹೌದು, ಹಿಂದೂ–ಮುಸ್ಲಿಮ್ ಎಂಬ ವ್ಯತ್ಯಾಸವು ಕೂಡುಬದುಕಿಗೆ ತೊಂದರೆ ಯಾಗುವಂಥದ್ದೇನೂ ಅಲ್ಲ ಎಂದು ನಿರೂಪಿಸುವ ಪಾತ್ರವೂ ಹೌದು. ವೆಂಕಪ್ಪಶೆಟ್ಟರ ಮಗಳು ಸುಮತಿಯ ಬಾಣಂತಿನೀರು ಕಾಯಿಸಲು ಒಪ್ಪಿ ದಿನಂಪ್ರತಿ ಬರುವ ಮೈಯದ್ದಿ ಬ್ಯಾರಿಯವರಿಗೆ, ಉಮ್ಮಕ್ಕೆ ಶೆಡ್ತಿಯ ಮಾತುಗಳಿಂದ ಮನಸ್ಸಿಗೆ ನೋವಾಗುತ್ತಿದ್ದರೂ ಅವರದನ್ನು ಮನಸ್ಸಿನಿಂದ ಸರಿಸಿ ಸರಿಸಿ ಇಡುತ್ತಿದ್ದುದಕ್ಕೆ ಕಾರಣ, 'ಸುಮತಿ ನನ್ನ ಮೊಮ್ಮಗಳು ಖೈರುವಿನ ಸಮಾನ' ಎಂಬ ಪ್ರೀತಿಯೇ ಆಗಿತ್ತು. ವಾತದ ಕೈಕಾಲುಗಳ ಮೈಯದ್ದಿ ಬ್ಯಾರಿಯವರು ಒಂದಿಷ್ಟು ಬಿಸಿನೀರಿನ ಆಸ್ಥೆಯಿಂದ ನೀರು ಸ್ವಲ್ಪ ಹೆಚ್ಚು ಬಿಸಿ ಮಾಡಿದರೆ ಸಾಕು, ಬಚ್ಚಲ ಒಲೆಯಿಂದ ಹೊಗೆ ಏಳುವುದೇ ತಡ, ಶೆಡ್ತಿಯ ಬಾಯಿಂದ ಬಯ್ಗಳದ ಎಚ್ಚರಿಕೆಯ ಮಾತುಗಳೂ ಏಳುತ್ತಿದ್ದವು. ಹಾಗಾಗಿಯೇ ವೆಂಕಪ್ಪಶೆಟ್ಟರು "ಅವ್ರು ಬಾಣಂತಿ ಏಳುವ ವರೆಗೆ ಮಾತ್ರ ನಮ್ಮ ಬಚ್ಚಲ ಮನೆಯಲ್ಲಿ ಮೀಯುವುದಿಲ್ಲ. ಬಾಣಂತಿ ಎದ್ದ ನಂತರವೂ ಇಲ್ಲೇ ಬಿಸಿನೀರು ಕಾಯಿಸಿಕೊಂಡು ಮೀಯುತ್ತಾರೆ... ಈಗೇನಂತೆ ನಿನ್ನ ಮಸಾಲತ್ತು" ಎಂದು ಕಣ್ಣಲ್ಲಿ ಕೆಂಡ ಹಾರಿಸುತ್ತ ಹೆಂಡತಿಯ ಬಾಯಿ ಮುಚ್ಚಿಸುತ್ತಾರೆ. ಆದರೆ ಹೀಗೆ ಒಂದೆರಡೇ ದಿನ ಕಳೆಯುವಷ್ಟರಲ್ಲಿ, ಇದ್ದಕ್ಕಿದ್ದಂತೆ ಹೂವೆತ್ತಿದಷ್ಟು ಹಗೂರವಾಗಿ, ಮೌನವಾಗಿ ಖಾದ್ರಿಬ್ಯಾರಿಯವರು ಹೊರಟುಹೋದರು. ಲಕ್ಷಕ್ಕೊಬ್ಬರಿಗೆ ಬರಬಹುದಾದ ಆ ಸಾವಿನ ಸುಖಕ್ಕೆ ಸಾಕ್ಷಿಯಾಗಿ ಆವತ್ತು ಬ್ಯಾರಿಗಳನ್ನು ಕಳಿಸಲು ಅವರ ಮನೆಯ ಅಂಗಳದಲ್ಲಿ ಜನರ ಸಂತೆಯೇ ನೆರೆದಿತ್ತು. ವೆಂಕಪ್ಪಶೆಟ್ಟರು ಹೆಣಮೀಯಿಸುವ ನೀರು ಕಾಸಲು ಬಾಣಂತಿ ಮನೆ

ಬಚ್ಚಲಲ್ಲಿದ್ದ ಕಟ್ಟಿಗೆ ಕೊತ್ತಳಿಗೆಗಳನ್ನೆಲ್ಲ ಹೊತ್ತು ಒಯ್ದುಬಿಟ್ಟಿದ್ದರು. ಉಮ್ಮಕ್ಕ ಶೆಡ್ತಿಯವರು ಬ್ಯಾರಿಯವರ ಮನೆಯಂಗಳ ಹತ್ತಿದಾಗ, ಮರೆಯಲ್ಲಿ ಹೆಣ ಮೀಯಿಸುತ್ತಿದ್ದರು. ಶೇಡ್ತಿಯವರ ಕಣ್ಣಿಂದ ನೀರಮಾಲೆಯೇ ಉದುರಿತ್ತು. ಈ ಕಥೆ, ಮನುಷ್ಯ ಸ್ವಭಾವಗಳಿಗೆ, ಮನುಷ್ಯ ಸಂಬಂಧಕ್ಕೆ ಜಾತಿ–ಧರ್ಮಗಳ ಗುರುತುಪತ್ರವನ್ನು ಲಗತ್ತಿಸುತ್ತಿರುವ ಸಮಕಾಲೀನ ಸಂದರ್ಭವನ್ನು ದಟ್ಟ ವಿಷಾದದಲ್ಲಿ ಎದುರುಗೊಳ್ಳುತ್ತದೆ. ಹಿಂಸೆಯನ್ನು ಹಿಂಸೆಯಿಂದ ತಣಿಸಲಾದೀತೆ? ಎಂಬ ಪ್ರಶ್ನೆಯನ್ನು ತನ್ನೊಳಗಿನ ಉಸಿರಾಗಿಸಿಕೊಂಡು. ಮನುಷ್ಯ ಬದುಕಿನ ಧನ್ಯತೆಯ ದರ್ಶನವು ಪುರಾಣಗಳಲ್ಲಿ ಪರಂಪರೆಯಲ್ಲಿ ಮಾತ್ರವೇ ಇಲ್ಲ. ಈ ದರ್ಶನವು ಅನುದಿನದ ದಂದುಗದಲ್ಲಿದೆ ಎಂಬ ಪಿಸುಮಾತನ್ನು ನುಡಿಯುತ್ತದೆ.

ನಾಗವೇಣಿಯವರ 'ಒಡಲು' ಕಥೆಯು ಈ ನೆಲೆಯ ಪ್ರಾತಿನಿಧಿಕ ಕಥೆಯಾಗಿದೆ. ಈ ಕಥೆಯು ರಂಪಣಿ ಬಲೆಯ ಕೆಲಸದಲ್ಲಿರುವ ಕಾರಣಕ್ಕಾಗಿಯೇ ಕೂಡಿ ಬದುಕುತ್ತ, ಬದುಕಿನ ಸಂಕರಶೀಲ ಗುಣಧರ್ಮಕ್ಕೆ ಸಾಕ್ಷಿಯಾಗಿದ್ದು ಸೈಯದ್ದಿ ಮತ್ತು ಮಂಜುಮರಕಾಲ್ತಿಯ ಕುಟುಂಬ. ಹೀಗೆ ಬದುಕಿದ್ದು ಈ ಸಂಸ್ಕೃತಿಯ ಸಹಜ ಸತ್ವವಾಗಿತ್ತು. ಇದರಲ್ಲಿ ಯಾವ ವಿಶೇಷವೂ ಇರಲಿಲ್ಲ. ಆದರೀಗದು ವಿಶೇಷ ಅನ್ನಿಸುತ್ತಿದೆ. ಯಾಕೆಂದರೆ, ನಾವೀಗ ಕೋಮುವಾದದ ವಿಷಸರ್ಪದ ಹೆಡೆಯ ಅಡಿಯಲ್ಲಿ ಬದುಕುತ್ತಿದ್ದೇವೆ. ಮದರ್ ತೆರೆಸಾ ಅವರ ಜೀವನ ಕಥನದಲ್ಲಿ ಪ್ರಸ್ತಾಪವಾಗುವ ಒಂದು ಘಟನೆಯು ಹೀಗಿದೆ– ಒಮ್ಮೆ ಮದರ್‌ಗೆ ಯಾರೋ ಹೇಳುತ್ತಾರೆ. ನಗರದ ಹೊರಭಾಗದ ಕೊಳಚೆಗೇರಿಯ ಗುಡಿಸಲ ಬಡತನದ ಬಗ್ಗೆ. ಮದರ್ ಒಂದಿಷ್ಟು ಅಕ್ಕಿಯನ್ನು, ದಿನಸಿಯನ್ನು, ಹಣ್ಣನ್ನು ತೆಗೆದುಕೊಂಡು ಆ ಬಡವಿಯ ಗುಡಿಸಲಿಗೆ ಹೋಗುತ್ತಾರೆ. ಅಲ್ಲಿಯ ದೃಶ್ಯ ಅಕ್ಷರಶಃ ಭಯಾನಕವಾಗಿತ್ತು. ಆದರೆ ಆ ಬಡ ಹೆಂಗಸು, ಮದರ್ ತೆಗೆದುಕೊಂಡು ಹೋದ ಅಕ್ಕಿ–ದಿನಸಿಗಳನ್ನು ಸರಿಯಾಗಿ ಎರಡು ಪಾಲು ಮಾಡಿ, ಒಂದು ಪಾಲನ್ನು ಪಕ್ಕದ ಗುಡಿಸಲಿನವಳಿಗೆ ಓಡಿ ಹೋಗಿ ಕೊಟ್ಟು ಬರುತ್ತಾಳೆ. ಮದರ್ ಕೇಳಿದರೆ, ಅವಳ ಗುಡಿಸಲಿನಲ್ಲಿಯೂ ನಾಲ್ಕು ದಿನದಿಂದ ಒಲೆಯನ್ನೇ ಹಚ್ಚಿಲ್ಲ. ಪಾಪ, ಅವಳಿಗೂ ಸಣ್ಣ ಮಕ್ಕಳಿದ್ದಾವೆ ಎಂದು ನುಡಿಯುತ್ತಾ, ಯಾರ ಅನುಮತಿಯನ್ನೂ ಕೇಳದೆ, ಆ ಪದಾರ್ಥಗಳನ್ನು ಕೊಟ್ಟುಬರುತ್ತಾಳೆ. ಅವಳು ಬೇರೆ ಧರ್ಮದವಳು. ನಾಳೆಯಾದರೆ ತನ್ನ ಮಕ್ಕಳ ಊಟಕ್ಕೆ ದಿಕ್ಕಿಲ್ಲ ಎಂಬುದನ್ನು ತಿಳಿದೂ ಆ ತಾಯಿಗೆ ಹೀಗೆ ಹಂಚಿತಿನ್ನುವುದು ಸಾಧ್ಯವಾಗುತ್ತದೆ. ಅದಕ್ಕೇ ಮದರ್ ಹೇಳುತ್ತಾರೆ. ಬಡವರು ತುಂಬಾ ಶ್ರೀಮಂತರು ಎಂದು. ಒಡಲು ಕಥೆಯ ಮಂಜು ಮರಕಾಲ್ತಿ ಆ ತಾಯಿಯಂಥವಳು.

ನಾಗವೇಣಿ ಕರಾವಳಿ ಭಾಷೆಯನ್ನು ಜೀವಂತವಾಗಿ ಕಥೆಯಾಗಿಸಿದವರು. ಅವರ ಭಾಷೆಯ ಸತ್ವವು ಕಥೆಯ ಸತ್ವವೂ ಆಗಿ ಬೆಳೆಯುತ್ತದೆ. ಒಡಲು ಕಥೆಯ ಆರಂಭದಲ್ಲಿ ಬರುವ ಕೇಶವ ಮತ್ತು ಉಮ್ಮರ ಎಂಬ ಎಳೆಯ ಮಕ್ಕಳಿಬ್ಬರ ಆಟ-ನಗೆಗಳು ಮನುಷ್ಯ ಲೋಕದ ಅನಾದಿ ಚೆಲುವಿನಂತೆ ಅನಾವರಣಗೊಳ್ಳುತ್ತದೆ. ಸೈಯದ್ದಿ ಮನೆಬಿಡುವ ತಯಾರಿಯಲ್ಲಿ ಗಂಟುಮೂಟೆ ಕಟ್ಟಿ ಕಟ್ಟಿ ಇಡುತ್ತಿದ್ದರೆ ಅವನ ಪುಟ್ಟ ಮಗ ಉಮ್ಮರ ತನ್ನ ತಪ್ಪುಹೆಜ್ಜೆಗಳಲ್ಲಿ ಓಡಾಡುತ್ತ ಅಪ್ಪ ಕಟ್ಟಿ ಇಟ್ಟಿದ್ದ ಮೂಟೆಗಳನ್ನು ಕೆಡವಲು ಯತ್ನಿಸುತ್ತಿದ್ದ. ಉಮ್ಮರನ ಈ ಪ್ರಯತ್ನಕ್ಕೆ, ಸೈಯದ್ದಿಯ ಮಡದಿ ನಫೀಸಮ್ಮನ ಸೊಂಟದಲ್ಲಿ ಕುಳಿತು ಅಕ್ಕಿಮುಂಡಿ ತಿನ್ನುತ್ತಿರುವ ಕೇಶವನ ಪೂರ್ಣ ಸಮ್ಮತಿಯ ಗೆಲುವಿನ ಸ್ಪಂದನೆಯಿತ್ತು.

ಮಂಜು ಮರಕಾಲ್ತಿಯ ಮನೆಯ ಗೋಡೆಗೆ ತಾಗಿಕೊಂಡೇ ಇರುವ ಮಾಡಿನಂತಹ ಜಾಗೆಯ ಮನೆಗೆ ಸೈಯದ್ದಿ ತನ್ನ ಹೆಂಡತಿ ನಫೀಸಮ್ಮನನ್ನು ಕರೆದುಕೊಂಡು ಬಾಳುವೆಗೆ ಬಂದಾಗಿನಿಂದಲೂ ಈ ಎರಡೂ ಮನೆಗಳ ಮಧ್ಯೆ ನಿಷ್ಕಲ್ಮಶವಾದ ಬಾಂಧವ್ಯವೊಂದು ಬೆಳೆದಿತ್ತು. ಮಂಜು ಮರಕಾಲ್ತಿ ತನ್ನ ಹೊಟ್ಟೆಯ ಮಗ ವಾಸುಪುತ್ರನ್ ಬೇರೆಯಲ್ಲ, ಸೈಯದ್ದಿ ಬೇರೆಯಲ್ಲ ಎಂದು ತಿಳಿದಿದ್ದಳು. ಈ ಪುಟ್ಟ ಗುಡಿಸಲಿನ ಎಲ್ಲ ಜೀವಗಳೂ ಈ ನಂಬಿಕೆಗೆ ಬದ್ಧವಾಗಿಯೇ ಬಾಳಿಕೊಂಡಿದ್ದರು. ಊರಿನ ಸ್ಥಿತಿಯಲ್ಲಿ ಅಕಾರಣ ಬದಲಾವಣೆಗಳು ಸಂಭವಿಸಿದ್ದವು. ಹೊರ ತೋರಿಕೆಯ ಬದಲಾವಣೆ ಏನೇ ಇರಲಿ, ಪ್ರತಿಯೊಬ್ಬರನ್ನೂ ಅವರ ಜಾತಿ-ಧರ್ಮಗಳ ಹೆಸರಿನಲ್ಲಿ ನೋಡುವ ಓದುವ ಕಾಲ ಬಂದಾಗಿದೆ. ಎಲ್ಲವನ್ನೂ ಅನುಮಾನದಲ್ಲಿ ಅದ್ದಿ ತೆಗೆವ ಹಿಂಸೆಯ ದಿನಗಳು ಮನುಷ್ಯರ ಖಾಸಗಿ ಸಂಬಂಧವನ್ನೂ, ಕೌಟುಂಬಿಕ ಸಂಬಂಧವನ್ನೂ ತನ್ನ ಅಂಕೆಯಲ್ಲಿಟ್ಟುಕೊಂಡು ಆಳಲು ಹೂಂಕರಿಸುತ್ತಿದೆ. ಅಹಂಕಾರದ ಜಾತಿವಾದ ಬಲಿತು ವಿಷಗಾಳಿ ಹೊರಸೂಸುತ್ತಿದೆ. ಇಂತಹ ಕಲುಷಿತ ಕಾಲದಲ್ಲಿ ನಡೆದ ಕೆಲವು ಘಟನೆಗಳು ಈ ಜನರ ಭಾವನಾತ್ಮಕ ಸಂಬಂಧವನ್ನು ವಿರೂಪಗೊಳಿಸಲು ಪ್ರಯತ್ನಿಸುತ್ತಿದೆ.

ಸೈಯದ್ದಿಯನ್ನು ಮಂಜುಮರಕಾಲ್ತಿ ತನ್ನ ಮಗನಂತೆ ತಿಳಿದು ಎರಡೆಣಿಸದೆ ಬಾಳುತ್ತಿರುವುದು, ಅವಳ ತಮ್ಮನಾದ ಕಾಂತು ತಂಡೇಲನಾದಿಯಾಗಿ ಯಾವ ಜಾತಿಯ ಗುರಿಕಾರರಿಗೂ ಪಥ್ಯವಾಗಿರಲಿಲ್ಲ. ಸೂರ್ಯ ಹುಟ್ಟುವುದು-ಮುಳುಗುವುದು ಎಷ್ಟು ಸಹಜವೋ ಅಷ್ಟೇ ಸಹಜವಾಗಿ; ಧರ್ಮ ಬೇರೆಯಾಗಿರುವವರನ್ನು ದ್ವೇಷಿಸುವುದೂ ಸಹಜವಾಗಿರುವ ದಿನಮಾನಗಳಿವು. ಒಂದು ಆಟಿ ತಿಂಗಳ ದಿನ ಸರ್ಕಾರಿ ಶಾಲೆಯ

ಧ್ವಜಾರೋಹಣ ಮುಗಿಸಿ ಬಂದು, ಅಂಗಳದಲ್ಲಿ ಬಲೆನೇಯುತ್ತಿದ್ದ ವಾಸುಪುತ್ರನ್‌ಗೆ ಹೆಂಡತಿ ಅಂಗಳಕ್ಕಿಳಿದು ಬಂದಾಗ ನಿನ್ನೆಯ ದಿನ ಅವಳು ಒಪ್ಪಿಸಿದ್ದ ಉಳ್ಳಾಲದ ಗುಡಿಗೆ ಇಂದು ಹೊರಡಬೇಕಾದ ನೆನಪಾಯಿತು. ವಾಸುಪುತ್ರನ್ ಸೈಯದ್ದಿಯನ್ನೂ ತಮ್ಮೊಡನೆ ಬರಲು ಬಲು ಬಲವಂತದಿಂದ ಒಪ್ಪಿಸಿದ. ಕೇಶವನಿಗೆ ಶೀತವಾದೀತು ಎಂದು ಮಂಜು ಮರಕಾಲ್ತಿಯ ಬಳಿಯೇ ಬಿಟ್ಟು ಹೊರಟಿದ್ದಾಯಿತು. ಆಟಿ ತಿಂಗಳ ಉಬ್ಬರದ ಕಡಲು ಐದಾಳಿನ ಎತ್ತರದಲ್ಲಿ ಮೊರೆಯುತ್ತ, ಉಳ್ಳಾಲದ ಬಾಗಿಲಿಗೆ ತಾಡಬೇಕಾದ ಸೈಯದ್ದಿ ಮತ್ತು ವಾಸುಪುತ್ರನ್ ನಡೆಯಿಸುತ್ತಿರುವ ದೋಣಿಯನ್ನು ಗರಗರ ತಿರುವಿಹಾಕಿತು. ದೇವಕಿಯನ್ನು ರಕ್ಷಿಸಲೆಂದು ವಾಸುಪುತ್ರನ್ ಮತ್ತು ಸೈಯದ್ದಿ ಇಬ್ಬರೂ ಹರಸಾಹಸ ಮಾಡಿದರು. ಮೀನಿನಂತೆ ಈಜಬಲ್ಲ ಮೂವರನ್ನೂ ಅಂದಿನ ಕಡಲು ನುಂಗಿ ಹಾಕಲು ಹವಣಿಸಿತ್ತು. ಸೈಯದ್ದಿ ಆ ಅಲೆಗಳ ಹೊಡೆತಕ್ಕೆ ಕೊಚ್ಚಿಹೋಗಿ ಪ್ರಜ್ಞಾಶೂನ್ಯನಾಗಿ ಯಾವುದೋ ದಡಕ್ಕೆ ಬಿದ್ದಿದ್ದ. ಅವನಿಗೆ ಎಚ್ಚರ ಬಂದಾಗ ಕೇಳಿದ ಮೊದಲ ಸುದ್ದಿಯೇ ವಾಸುಪುತ್ರನ್ ಮತ್ತು ದೇವಕಿ ಉಳಿದಿಲ್ಲ ಎನ್ನುವದಾಗಿತ್ತು. ಕಣ್ಣೆದುರೇ ನಡೆದ ದುರಂತದಿಂದ ಸೈಯದ್ದಿ ನಲುಗಿ ಹೋಗಿದ್ದ. "ಮಂಜು ಮರಕಾಲ್ತಿಯ ಆಸ್ತಿ ಹೊಡೆಯಲು ಅವರಿಬ್ಬರನ್ನೂ ಈ ಬೇವರ್ಸಿ ಸಾಯಿಬ ಮುಗಿಸಿ ಬಂದ' ಎನ್ನುವ ಆರೋಪ ಕೇಳಿದಾಗ, ಅವರ ಬದಲು ನಾನಾದರೂ ಕಡಲಿಗೆ ಬಲಿಯಾಗಬಾರದಿತ್ತೇ ಎಂದು ಸೈಯದ್ದಿ ಹಲಬತೊಡಗಿದ್ದ. ಅವನನ್ನು ಕಾಪಾಡಿದ್ದು ಮಂಜು ಮರಕಾಲ್ತಿಯ ತಾಯ್ತನವೇ. ತನ್ನ ಮಗ ವಾಸುಪುತ್ರನ್‌ನ ರಂಪಣಿ ಪಾಲಿನಲ್ಲೀಗ ಅವಳು ಸೈಯದ್ದಿಯನ್ನು ಕಳಿಸಿದಳು. ಅದಕ್ಕೆ ಅವಳ ತಮ್ಮ ಕಾಂತುತಂಡೇಲ ತಕರಾರೆತ್ತಿದ. ಆದರೆ, ಉಳಿದ ಗುರಿಕಾರರು ಅವನ ಮಾತಿಗೆ ಸೊಪ್ಪು ಹಾಕಲಿಲ್ಲ. ಎಲ್ಲವೂ ಹಾಗೆಯೇ ಮುಚ್ಚಿದ ಮುಟಿಗೆಯೊಳಗೆ ಅವಿತುಕೊಂಡಂತಿತ್ತು.

ಕಾಲ ಸರಿಯುತ್ತಿತ್ತು. 'ಮಹಾಮಾಯೆ' ರಂಪಣಿಯಲ್ಲಿ ಸೈಯದ್ದಿ ಹಕ್ಕಿನ ಪಾಲುದಾರನಾಗಿರುವುದನ್ನು ಸಲೀಸಾಗಿ ಒಪ್ಪಿಕೊಳ್ಳಲು ತಂಡೇಲರು ತಯಾರಿರಲಿಲ್ಲ. 'ಅನ್ಯ' ಎಂಬ ಚಿಟುಕು ಮುಳ್ಳು ಚುಚ್ಚಲು ಕಾಯುತ್ತಲೇ ಇತ್ತು. ಇದಕ್ಕೆ ಆಸ್ಪದ ಒದಗಿದ್ದು ಉಳ್ಳಾಲದ ಉರುಸಿನ ಸಂದರ್ಭದಲ್ಲಿ. ಸೈಯದ್ದಿ ತನ್ನ ಮದುವೆಯ ವೇಳೆಯಲ್ಲಿ ಯಾವುದೋ ಕಾರಣಕ್ಕೆ ಅಪ್ಪನೊಂದಿಗೆ ಮುನಿಸಿಕೊಂಡವನು ತಿರುಗಿ ಕಡಲು ದಾಟಿ ಊರಿಗೆ ಹೋಗಿರಲಿಲ್ಲ. ಈಗ ಉಳ್ಳಾಲದ ಉರುಸಿಗೆ ಹೋಗಿ ಹುಟ್ಟಿದ ಮನೆಯನ್ನು ನೋಡಿ ಬರಲು ನಿರ್ಧರಿಸಿಕೊಂಡಿದ್ದ. ಕಾಂತು ತಂಡೇಲನಿಗೆ ಮೊದಲ ದಿನವೇ ಹೇಳಿ ಬಯ್ಯಿಸಿಕೊಂಡೂ ಆಗಿತ್ತು. ಆದರೂ ರಂಪಣಿಯನ್ನು ಎಳೆಯಲು ನಾನೊಬ್ಬ ಇಲ್ಲದಿದ್ದರೇನಂತೆ? ಎಂದು ಧೈರ್ಯಮಾಡಿ ಹೊರಟಿದ್ದ.

ಉರುಸಿಗೆ ಹೊರಟ ಆ ನಸುಕಿನ ಜಾವದ ಲಾಂಚ್‌ನಲ್ಲಿ ರಂಪಣಿ ಬಲೆಯನ್ನು ಎಳೆಯಬೇಕಾದ ಬೆಸ್ತರ ಗುಂಪು ಗುಂಪೇ ಹೊರಟಿದ್ದು ನೋಡಿ ಕಂಗಾಲಾದ. ತನ್ನ ಮೇಲೆ ವಿನಾಕಾರಣವಾಗಿ, ರಂಪಣಿಯ ಬೆಸ್ತರನ್ನೆಲ್ಲ ಗುಂಪುಗೂಡಿಸಿಕೊಂಡು ಉಳ್ಳಾಲದ ಉರುಸಿಗೆ ಕರೆದುಕೊಂಡು ಹೋದ ಆರೋಪ ಬರಬಹುದು ಎಂದು ಹೆದರಿದ್ದ. ಮಾರನೆಯ ದಿನ ಸೈಯದ್ದಿ ಆ ಯೋಚನೆಯಲ್ಲಿಯೇ ರಂಪಣಿಯ ಕಡೆ ಹೊರಟಾಗ ಐತು ತಂಡೇಲನ ಕೆಟ್ಟ ಮಾತು ಕೇಳಿಸಿತ್ತು. 'ನಮ್ಮ ರಂಪಣಿಯನ್ನೇನು ಮುಳುಗಿಸಬೇಕು ಎಂದಿದ್ದಿಯೇನೋ ಹಲ್ಕಾಮಗನೆ' ಎಂದು ಗುಡುಗುತ್ತಾನೆ. ಮಂಜಕ್ಕನ ರಂಪಣಿ ಫಂಡಿನ ಹಣ ಬೇಕಾದರೆ ಲೆಕ್ಕ ತೀರಿಸಿಬಿಡ್ತೇನೆ. ನಿನ್ನಂಥವನನ್ನು ನಮ್ಮ ಕೂಟದ ಫಂಡಿಗೆ ಸೇರಿಸಿಕೊಂಡಿದ್ದೇ ಪರಮ ತಪ್ಪು –ಎಂದು ಮುಂತಾಗಿ ಬಯ್ದಾಡುತ್ತಾನೆ. ಸೈಯದ್ದಿಗೆ ಅಳುವೇ ಬಂದಿತ್ತು. ನನ್ನದಲ್ಲದ ತಪ್ಪಿಗೆ ನನ್ನನ್ನು ಯಾಕೆ ಗುರಿಮಾಡುತ್ತಾರೆಂಬುದು ಅವನಿಗೆ ಸಮಸ್ಯೆಯಾಗಿತ್ತು. ಸೈಯದ್ದಿ ರಂಪಣಿಯ ಬಲೆ ಬೀಸುವ ಕಾಯಕದಲ್ಲಿ ಒಲ್ಲದ ಮನಸ್ಸಿನಿಂದ ಸೇರಿಕೊಂಡಿದ್ದಾಗಲೇ, ದಂಡೆಯಿಂದ 'ಊರು ಮೇಲೆ ಮಾಡುವ' ಅಂದರೆ ರಂಪಣಿಗೆ ಹೋದವರು ತಕ್ಷಣ ಮರಳಿ ಬರಬೇಕೆಂಬ, ಊರಲ್ಲಿ ಯಾರೋ ಮರಣ ಹೊಂದಿದ್ದಾರೆ ಎಂಬ ಸೂಚನೆ ಬಂದಿತ್ತು. ಸೈಯದ್ದಿಯ ಮನಸ್ಥಿತಿ ಸರಿಯಿರಲಿಲ್ಲ. ಬಯ್ಯಿಸಿಕೊಂಡಿದ್ದ. ಇಂದೂ ರಂಪಣಿ ಎಳೆಯದಿದ್ದರೆ ಬಡವರ ಮನೆಯ ಗಂಜಿಯ ಗತಿ? ಎಂದುಕೊಂಡವನೇ, 'ಸತ್ತವ ಸತ್ತ, ಬದುಕಿರುವವರು ಯಾಕೆ ಹಸಿವಿನಿಂದ ಸಾಯಬೇಕು?' –ಎಂದುಬಿಟ್ಟ, ಆ ಮಾತು ಕೇಳಿಸಿಕೊಂಡ ಕಾಂತು ತಂಡೇಲನಿಗದು, ಧರ್ಮಸೂಕ್ಷ್ಮದ ವಿಚಾರದಂತೆ ಕಾಣಿಸಿತು. ಸೈಯದ್ದಿ, ಬೆಸ್ತರ ಕೂಟದ ರೀತಿ–ರಿವಾಜುಗಳನ್ನೇ ಅಪಹಾಸ್ಯ ಮಾಡುತ್ತಿರುವುದಾಗಿ ಕಾಣಿಸಿತು. ಊರಲ್ಲಿ ಐತು ತಂಡೇಲನ ಹೆಂಡತಿ ಮರಣಿಸಿದ್ದಳು. ಸೈಯದ್ದಿಗೂ ನೋವಾಗಿತ್ತು. ಆದರವನು ಯಾವುದೋ ಮನಸ್ಥಿತಿಯಲ್ಲಿ ಒಂದು ಮಾತು ಆಡಿ ಆಗಿತ್ತು. ಈ ಮಾತಿನ ಅಪರಾಧಕ್ಕಾಗಿಯೇ ಮಾರನೆಯ ದಿನದ ನಸುಕಿನಲ್ಲಿ ಗುರಿಕಾರರು ಸೇರಿ ಮಂಜು ಮರಕಾಲ್ತಿಯು ಸೈಯದ್ದಿಗೆ ಕೊಟ್ಟಿರುವ ಸಲುಗೆಯೇ ಈ ಎಲ್ಲ ಅಪರಾಧದ ಕಾರಣವೆಂದು ದೂಷಿಸಿ, ಹೀಗೇ ಮುಂದುವರಿದರೆ, ಮಂಜು ಮರಕಾಲ್ತಿಗೂ ಬಹಿಷ್ಕಾರ ಹಾಕಬೇಕಾಗಬಹುದೆಂದು ಎಚ್ಚರಿಸಿದ್ದರು. ಸುತ್ತಲ ನಾಲ್ಕೂರಿನಲ್ಲಿ ನ್ಯಾಯತೀರ್ಮಾನ ಹೇಳುವ ಗೌರವದ ಜಾಗೆಯನ್ನು ಪಡೆದುಕೊಂಡಿದ್ದ ಮರಕಾಲ್ತಿಯು ತನ್ನ ಜೀವಮಾನವಿಡೀ ಯಾರೊಂದಿಗೂ ಒಂದು ಶಬ್ದವನ್ನೂ ಆಡಿಸಿಕೊಂಡವಳಲ್ಲ. ಈಗವಳು ಸೈಯದ್ದಿಗಾಗಿ ಎಲ್ಲವನ್ನೂ ಸಹಿಸಿಕೊಂಡಿದ್ದಳು. ಸೈಯದ್ದಿ, ಧರ್ಮವನ್ನು ಉಡಾಫೆ ಮಾಡಿ ಮಾತನಾಡಿದ್ದಲ್ಲ

ಎಂದು ಅವಳು ಬಲ್ಲಳು. ಜಾತಿಯ–ಧರ್ಮದ ಕೀಸರುಗಣ್ಣಿನಿಂದ ತನ್ನ ಸೈಯದ್ದಿಯನ್ನು ಬೇರೆ ಮಾಡಿ ನೋಡುವವರನ್ನು ಮೌನದಿಂದಲೇ ಶಾಂತಿಯಿಂದಲೇ ಎದುರಿಸಬೇಕೆಂದು ಅವಳು ನಿರ್ಧರಿಸಿದಂತಿತ್ತು.

"ಮಾರನೆಯ ದಿನ, ಮಂಜು ಮರಕಾಲ್ತಿ ಮೀನು ಮಾರಲು ಪೇಟೆಗೆ ಹೋದ ನಂತರ, ಸೈಯದ್ದಿ ರಂಪಣಿಗೆ ಹೋದ. ಹೋಗುವಾಗ ಕೇಶವ ಹಠಮಾಡಿದನೆಂದು ಅವನನ್ನು ಹೆಗಲಮೇಲೆ ಕೂರಿಸಿಕೊಂಡು ಹೋಗಿದ್ದ. ನಫೀಸ ಉಮ್ಮರನನ್ನು ಎತ್ತುಕೊಂಡು ಹಿಂದೆ ನಡೆದಳು. 'ಮಹಾಮಾಯೆ' ಬೋಟು ಸಮೀಪಿಸಿದಂತೆ ಸೈಯದ್ದಿ ಕೇಶವನನ್ನು ನಫೀಸಳ ಕೈಗೆ ವರ್ಗಾಯಿಸಿದ್ದ. ನಫೀಸಾ ಕೇಶವನನ್ನು ಸೊಂಟದ ಮೇಲೆ ಇರಿಸಿಕೊಂಡು, ಉಮ್ಮರನ ಕೈಹಿಡಿದು ನಡೆಯಿಸಿಕೊಂಡು ಮನೆಯ ಕಡೆ ಹೊರಟಿದ್ದಳು. ಇದನ್ನೆಲ್ಲ ಪಡವಿಗೆ ಒರಗಿಸಿಕೊಂಡು ಒಂದೇ ಸಮನೆ ನೋಡುತ್ತಿದ್ದ ಕಾಂತು ತಂಡೇಲನು, ಪಕ್ಕದಲ್ಲಿದ್ದವರಿಗೆ ಸೈಯದ್ದಿಗೆ ಕೇಳುವಂತೆ ನೀಚ ಮಾತುಗಳನ್ನಾಡಿದ –ಇಂವ ಆ ಮುದುಕಿಯನ್ನು ಒಳಹಾಕಿಕೊಂಡು ಬ್ಯಾರಿ ಜಾತಿಗೆ ಸೇರಿಸಿಕೊಂಡಾಯ್ತು. ಇದೀಗ ಆ ಹಸುಗೂಸನ್ನು ತನ್ನ ಜಾತಿಗೆ ಸೇರ್ಸುದಕ್ಕೆ ಎದೆಹಾಲಿನಿಂದಲೇ ಅಭ್ಯಾಸ ಶುರುಮಾಡ್ತಿದ್ದಾನೆ ಚಾಂಡಾಲ. ಆ ಹಾಲು ಹೋಗಿ ಸೇರುದೆಲ್ಲಿಗೆ.... ನಮ್ಮದೇ ರಕ್ತಕಲ್ವನಾ..." (ಪು. ೧೨೪ ಮೀಯುವ ಆಟ) ಕಾಂತು ತಂಡೇಲನ ಈ ಕೊಳಕು ಮಾತು ಕೇಳಿ, ಮರಳಿ ಗುಡಿಸಲಿಗೆ ಬಂದ ಸೈಯದ್ದಿ, ಯಾರು ಹೇಳಿದರೂ ಕೇಳದೇ, ಮಡದಿ ನಫೀಸಾಳ ಅಳುವಿಗೂ ಜಗ್ಗದೆ ಊರು ಬಿಡುವ ನಿರ್ಧಾರ ಮಾಡಿ ಅದರ ಸಿದ್ಧತೆಯಲ್ಲಿ ತೊಡಗಿಬಿಟ್ಟ.

ಇನ್ನೇನು ಆ ನಸು ಮುಂಜಾನೆ ಕಟ್ಟಿದ ಸಾಮಾನುಗಳೊಂದಿಗೆ ಗಾಡಿಯೇರಬೇಕಿರುವ ಸೈಯದ್ದಿಗೆ, ಮರಕಾಲ್ತಿಯ ಮಾತು ಕಟ್ಟಿಕೆಡವಿತು. 'ಈ ಮುದುಕಿಗೆ ಎಲ್ಲಿದ್ದರೇನು? ನನ್ನ ಕೇಶವನಿಗೊಂದು ತಾಯಿ ನೆಲೆ ಸಿಕ್ಕರೆ ಸಾಕು' ಎಂದು ಜೊತೆಗೆ ಹೊರಟುನಿಂತ ಮಂಜುಮರಕಾಲ್ತಿಯ ಅದಮ್ಯ ಮಮತೆಯನ್ನು ಮೀರಲಾಗಲಿಲ್ಲ. ಸೈಯದ್ದಿ ಇಲ್ಲೇ ಉಳಿವ ತೀರ್ಮಾನ ಮಾಡಿದ. ಎಂದಿನಂತೆ ರಂಪಣಿಗೆ ಹೊರಟ– ಇವಿಷ್ಟು ಕಥೆಯೊಳಗಿನ ಕಥನ.

ಈ ಕಥೆ ಹಲವು ಆಯಾಮಗಳಲ್ಲಿ ಕೋಮುವಾದೀಕರಣಗೊಂಡ ಸಮಾಜದ ದುರಂತ ಸ್ಥಿತಿಯನ್ನು ಹೇಳುತ್ತದೆ. ಮಂಜುಮರಕಾಲ್ತಿ ಮತ್ತು ಸೈಯದ್ದಿಯ ಕುಟುಂಬದ ಆಪ್ತತೆ ಈ ಸಮಾಜದ ಸಹಜ ಸ್ಥಿತಿ. ಮನುಷ್ಯ ಸಂಬಂಧಕ್ಕೆ ಜಾತಿ–ಧರ್ಮಗಳು ಅಡ್ಡ

ಬರುವುದಿಲ್ಲ. ಬರಬೇಕಾಗಿಯೂ ಇಲ್ಲ. ಕೋಮುವಾದ ಇಂತಹ ಕೂಡು ಬದುಕಿಗೆ ಅಕಾರಣವಾಗಿ ವಿಷ ಬೆರೆಸುತ್ತಿದೆ. ಮನುಷ್ಯರನ್ನು ಅಕಾರಣವಾಗಿ ವೈರಿಗಳಾಗಿಸುವ ಕ್ರೌರ್ಯ ಮನುಷ್ಯ ಚರಿತ್ರೆಯಲ್ಲಿ ಆಳವಾದ ಗಾಯಗಳನ್ನು ಮಾಡಿದೆ. ಕಥೆ, ಕೋಮುವಾದದ ದೌರ್ಜನ್ಯವನ್ನು ವಿವರಿಸುತ್ತದೆ ಮಾತ್ರವಲ್ಲ; ಅದನ್ನು ಎದುರಿಸುತ್ತದೆ. ದುಡಿದು ತಿನ್ನುವ ಕೆಳಜಾತಿಯ ಹೆಣ್ಣು ಮಂಜು ಮರಕಾಲ್ತಿಯ ತಾಯ್ತನದಲ್ಲಿ ಊರ ಕಾಯುವ ಮಾರಮ್ಮನಿದ್ದಾಳೆ. ತನ್ನ ಮಗ, ಸೊಸೆಯರ ದುರಂತ ಸಾವಿನ ಆಪಾದನೆ ಸೈಯದ್ದಿಯ ಕಡೆಗೆ ಬೆರಳು ತೋರಿದಾಗ, ಅವಳು ಅತ್ಯಂತ ವಿವೇಕಯುತ ತೀರ್ಮಾನವನ್ನು ತೆಗೆದುಕೊಳ್ಳುತ್ತಾಳೆ. ಜನರ ಒಡಕು ಮಾತಿಗೆ ಕಿವುಡಾಗುತ್ತಾಳೆ. ತನ್ನ ನಿರ್ಣಯವನ್ನು ತಾನೇ ಕೈಗೊಳ್ಳುತ್ತಾಳೆ. ತನ್ನ ಮಗನ ಜಾಗೆಯಲ್ಲಿ ಸೈಯದ್ದಿಯನ್ನು ನಿಲ್ಲಿಸುತ್ತಾಳೆ. ಮನುಷ್ಯ ಸಂಬಂಧದ ತಳಹದಿಯಲ್ಲಿರುವುದು ಭಾವನೆ ಅಗಾಧವಾದ ವಿಶ್ವಾಸ. ಭಾವನಾವಲಯದೆದುರು ಜಾತಿ–ಧರ್ಮ–ರಕ್ತ ಸಂಬಂಧ ಎಂಬುದು ಹುಸಿಯಾಗಿ ಕಾಣುತ್ತದೆ.

ಕಥೆಯಲ್ಲಿ, ಮನುಷ್ಯ ಘನತೆಯ ಸುಂದರ ಬಣ್ಣಗಳಿವೆ. ಅನಾಥನಾಗಿರುವ ಮಗು ಕೇಶವನಿಗೆ, ಸೈಯದ್ದಿ–ನಫೀಸಾ ಸಂಪೂರ್ಣ ಅರ್ಥದಲ್ಲಿ ತಂದೆ–ತಾಯಿಯರಾಗಿದ್ದಾರೆ. ಕೇಶವ ಮತ್ತು ಉಮ್ಮರನ ನಗುವಿನಿಂದ ಕೂಡಿದ ಕೇಕೆ –ಮನುಷ್ಯ ಬಾಳಿನ ಮಹತಿಯನ್ನು ಹೇಳುತ್ತದೆ. ನಫೀಸಾ, ಗಂಡನೊಂದಿಗೆ ಎಲ್ಲಿಗೆ ಬೇಕಾದರೂ ಹೋಗಲು ಸಿದ್ಧಳಾಗಿರುವವಳೇ ಆದರೂ, ಇನ್ನೂ ಹಾಲು ಕುಡಿಯುವ ಮಗು ಕೇಶವನ ಬಿಟ್ಟು ಹೋಗಲು ಕರುಳು ಕತ್ತರಿಸಿದಂತಾಗುತ್ತಿದೆ. ನಫೀಸಾಗಾಗಲಿ ಸೈಯದ್ದಿಗಾಗಲಿ ಉಮ್ಮರ ಮತ್ತು ಕೇಶವ ಬೇರೆ ಎಂದು ಎಂದೂ ಅನ್ನಿಸಲೂ ಇಲ್ಲ. ಮನುಷ್ಯ ಮಾತ್ರ ಸಾಧಿಸಬಹುದಾದ ಈ ಅತ್ಯಂತಿಕ ಎತ್ತರದಲ್ಲಿಯೇ ಕೋಮುವಾದವನ್ನು ಜನಾಂಗೀಯವಾದವನ್ನು ಎದುರಿಸಬಲ್ಲ ಹತಾರಗಳಿವೆ. ದ್ರಾವಿಡ ಸಂಸ್ಕೃತಿಯಲ್ಲಿ ಮೂಲತಃ ಪ್ರಕೃತಿ ಆರಾಧನೆಯ ತತ್ತ್ವವಿದೆ. ಆಲ ಮತ್ತು ಶಮೀ ವೃಕ್ಷಗಳು, ಆಲ ಮತ್ತು ಅಶ್ವತ್ಥಗಳು ಒಂದಕ್ಕೊಂದು ಹೆಣೆದುಕೊಂಡೂ ಬೇರೆ ಬೇರೆಯಾಗಿಯೇ ತಮ್ಮ ಅಸ್ಥಿತ್ವವನ್ನು ರುಜುಗೊಳಿಸುತ್ತವೆ. ಅವುಗಳನ್ನು ಪೂಜಾಸ್ಥಳಗಳೆಂದು ಪವಿತ್ರವೆಂದು ಬಗೆದು ಶ್ರದ್ಧೆಯಿಂದ ಆರಾಧಿಸುತ್ತಾರೆ. ಸಾಮಾಜಿಕ ಬದುಕಿನಲ್ಲೂ ಈ ಸಂಕರಶೀಲ ಗುಣ ಯಾವತ್ತೂ ಪವಿತ್ರವಾದದ್ದು ಎಂಬುದನ್ನು ಕಥೆ ನಿರೂಪಿಸುತ್ತಿದೆ.

ಕೋಮುವಾದದ ಮುಖ್ಯ ಲಕ್ಷಣವೆಂದರೆ, ಅದು ವೈರಿಯನ್ನು ಪೂರ್ವನಿರ್ಧರಿತವಾಗಿಸಿಕೊಂಡಿರುತ್ತದೆ. ವೈರಿಯೊಂದಿಗೆ ಸೆಣೆಸಲು, ಅಪಮಾನಿಸಲು, ಹಿಂಸಿಸಲು ನೆಪಗಳನ್ನು ಹುಡುಕುತ್ತಿರುತ್ತದೆ. ನೆಪ ಸಿಕ್ಕರೆ ಹಬ್ಬಮಾಡುತ್ತದೆ. ನೆಪವೂ ಇಲ್ಲದಿದ್ದರೆ ತಾನೇ ಸುಳ್ಳು ಹರಡಿ ಕಲ್ಪಿತ ವೈರಿಯನ್ನು ಹರಕೆಯ ಕುರಿ ಮಾಡುತ್ತದೆ. ಈ ಕಥೆಯ ಸೈಯದ್ದಿಯು ಅನುಭವಿಸುವ ಹಿಂಸೆಯಲ್ಲಿ ಈ ಎಲ್ಲ ನೆಲೆಗಳೂ ಇವೆ. ಕೋಮುವಾದವನ್ನು ಎದುರಿಸುವ ವೈಧಾನಿಕತೆಯನ್ನೂ ಈ ಕಥೆ ಪ್ರಸ್ತುತಗೊಳಿಸುತ್ತದೆ. ಮಂಜು ಮರಕಾಲ್ತಿಯದು ಗಾಂಧಿಯ ಮಾರ್ಗ, ಗುರಿಕಾರರು ಒಂದು ವ್ಯಂಗ್ಯವಾಗಿ ಎಚ್ಚರಿಸಿದಾಗಲೂ ಮಂಜು ಮರಕಾಲ್ತಿ ಇದಿರು ವಾದಿಸುವುದಿಲ್ಲ. ಸತ್ಯಾಗ್ರಹಿಗೆ ಅಗತ್ಯವಾದ ಮೌನ ಮತ್ತು ತಾಳ್ಮೆಯನ್ನು ಮಂಜು ಮರಕಾಲ್ತಿಯಲ್ಲಿಯೂ ಕಾಣುತ್ತೇವೆ. ಸೈಯದ್ದಿಯು ಊರು ಬಿಡುವ ತೀರ್ಮಾನವು ಸರಿಯಲ್ಲ ಎಂಬುದನ್ನು ಮೌನವಾಗಿಯೇ ಸರಳವಾಗಿಯೇ ತಲುಪಿಸುತ್ತಾಳೆ. ಕಥೆಯ ಕೊನೆಯಲ್ಲಿ ರಂಪಣಿಯ ಉಡುಗೆಯಲ್ಲಿ, ರಂಪಣಿ ಕೆಲಸಕ್ಕೆ ಹೋದ ಸೈಯದ್ದಿಗೆ, ಊರಲ್ಲಿ ಹಬ್ಬಿಸಲಾಗಿರುವ ಕೋಮುವಾದದ ವಿಷವನ್ನು ತನ್ನ ಒಳ್ಳೆಯತನ ಮತ್ತು ವಿವೇಕದ ಮೂಲಕವೇ ಪರಿವರ್ತಿಸಬೇಕು ಎಂಬ ತಿಳುವಳಿಕೆಯಿದೆ. ಇಂತಹ ಹಲವು ಕಾರಣಗಳಿಗಾಗಿ ಈ ಕಥೆ ಮುಖ್ಯವಾಗಿದೆ.

"ಮರುದಿನ ಶಹರದ ಕೆಲಭಾಗದಲ್ಲಿ ಕೋಮುದಂಗೆಯ ಕಾಳ್ಗಿಚ್ಚು ಹೊತ್ತಿಕೊಂಡಿತು. ಎರಡು ಕೋಮಿನವರನ್ನು ಪರಸ್ಪರ ತಿನ್ನಲು ಛೂಬಿಟ್ಟು ನಾಯಕರು ತಮ್ಮ ತಮ್ಮ ಮನೆಗಳ ಗದ್ದುಗೆಗಳಲ್ಲಿ ಕೂತು ಟೀವಿಯಲ್ಲಿ ಮೃತರ ಸಂಖ್ಯೆಯ ಸ್ಕೋರು ಆಸ್ವಾದಿಸಿದರು. ಮನೆಮಠ ಇದ್ದವರು ಕೆಲಸ ಗಿಲಸ ಬಿಟ್ಟು ಬಾಗಿಲ ಒಳಗೆ ಭದ್ರವಾಗಿ ಉಳಿದರೆ, ಬೀದಿಪಾಲಾಗಿರುವ ನರಜೀವಿಗಳು ಇರಿತಕ್ಕೆ ಒಡಲುಕೊಟ್ಟರು. ಹೆಸರು ಕೇಳಿದರೆ ಹೆಸರು ಹೇಳಲು ಹೆದರಿದರು. ಒಂದೇ ಇರಿತದಲ್ಲಿ ಕರುಳನ್ನೆಲ್ಲ ಕತ್ತರಿಸುವಂತೆ ಹಿಡಿಯನ್ನು ತಿರುಗಿಸುವ ಕಲೆಯನ್ನು ಅರಿತುಕೊಂಡರು. ಆಸ್ಪತ್ರೆಗಳಲ್ಲಿ, ಆಪರೇಶನ್ನಿಗೆ ಮುಂಚೆ ನುಣ್ಣಗೆ ಕೂದಲು ಬೋಳಿಸುವ ಸ್ಪಿರಿಟ್ ವಾಸನೆಯ ನಾಪಿತರು ಕಾದುಕೂತರು. ಆಸ್ಪತ್ರೆಯ ಶವಾಗಾರದಲ್ಲಿ ಬಿದ್ದ ದೇಹಗಳನ್ನು, ವಾರ್ಡುಗಳಲ್ಲಿ ಬೇಯುತ್ತಿದ್ದವರನ್ನು ಹುಡುಕಿಕೊಂಡು ಯಾರೂ ಬರಲಿಲ್ಲ. ಏಕೆಂದರೆ ಅಲ್ಲಿ ಮತ್ತೆ ಹೆಸರು ಬೇಕು. ಹೆಸರಿನ ಜತೆ ಕೋಮು, ವಿಳಾಸ, ಮತ್ತೆ ಒಡಲು ಮತ್ತೆ ಇರಿತ. ಸಭ್ಯನಾಗರಿಕರು ಫೋನಿನಲ್ಲಿ ಪರಸ್ಪರ ಕುಶಲ ಕೇಳಿದರೆ, ವಲಸೆಯ ಒಕ್ಕಲು ಮಕ್ಕಳು ಆಕಾಶದ ಕೆಳಗೆ ಕಣ್ಣು ತೆರೆದುಕೊಂಡೇ ಪಿಶಾಚಿಗಳಂತೆ ರಾತ್ರಿಯನ್ನು ಕಳೆದರು. ಬೀದಿಗಳಲ್ಲಿ ನಗುವನ್ನು ನಿಷೇಧಿಸಿದರು. ಕಣ್ಣಲ್ಲಿ ಕಣ್ಣಿಟ್ಟು ನೋಡುವುದನ್ನು ನಿಷೇಧಿಸಿದರು.

ಶಾಲೆಗಳು ಆಸ್ಪತ್ರೆಯ ಮೌನ ಧರಿಸಿದವು. 'ವಾರ್ಡುಗಳಲ್ಲಿ ಜಾಗವಿಲ್ಲ. ಸಂಬಂಧಪಟ್ಟವರು ಗಾಯಾಳುಗಳನ್ನು ಒಯ್ಯಿರೀ' ಎಂದು ಅರಚುತ್ತ ಅಂಬ್ಯುಲೆನ್ಸ್‌ಗಳು ರಾತ್ರಿಯ ಬೀದಿಗಳಲ್ಲಿ ಓಡಿದವು'[೨೯] –ಇದು ಜಯಂತ್ ಕಾಯ್ಕಿಣಿಯವರು ೧೯೯೭ರಲ್ಲಿ ಬರೆದ ಕಥೆ ಅಮೃತಬಳ್ಳಿ ಕಷಾಯದಲ್ಲಿ ಕೋಮುದಂಗೆಗೆ ಒಳಗಾದ ಶಹರದ ಒಂದು ಶಬ್ದಚಿತ್ರ. ಯಾವುದೋ ರಾಜಕಾರಣಿಗಳ ಅಧಿಕಾರದಾಟಕ್ಕೆ ಜನಸಾಮಾನ್ಯರ ಬದುಕಿಗೆ ಬೆಂಕಿ ಇಕ್ಕಲಾಗುತ್ತಿದೆ. ಬೀದಿಬದಿಯ, ಬಸ್‌ಸ್ಟ್ಯಾಂಡುಗಳ ಅನಾಥರು ಮೊದಲ ಬಲಿಗಳಾಗುತ್ತಾರೆ. ಶವ ತರಲು ಆಸ್ಪತ್ರೆಗಳಿಗೆ ಹೋಗುವುದಕ್ಕೂ, ವಾರ್ಡುಗಳಲ್ಲಿ ಬಿದ್ದಿರುವ ಸಂಬಂಧಿಗಳನ್ನು ಮಾತನಾಡಿಸಲು ಹೋಗುವುದಕ್ಕೂ ಸಾಧ್ಯವಾಗದ ಭಯಭೀತ ನಗರಗಳ ಸ್ಥಿತಿಯಿದು.

ಇಂತಹ ತಣ್ಣನೆಯ ವಿಷಣ್ಣತೆಯಲ್ಲೂ 'ಮಾಯಿ' ಮಾತ್ರ ಉಗ್ಗದಲ್ಲಿ ತುಂಬಿಕೊಂಡ ಗಂಜಿ, ಉಪ್ಪಿನಕಾಯಿ, ಅಮೃತಬಳ್ಳಿ ಕಷಾಯ ಎಲ್ಲ ಹಿಡಿದು ಆಸ್ಪತ್ರೆಗಳಲ್ಲಿ ಅಲೆಯುತ್ತಾಳೆ. ಬೇವಾರ್ಸಿಗಳಾಗಿರುವ ಅನಾಥ ರೋಗಿಗಳನ್ನು ಉಪಚರಿಸುತ್ತಾಳೆ. ಇದು ಎಂದೋ ಒಂದು ದಿನದ ಆವೇಶದಲ್ಲಿ ನಡೆಯುವ ಕೆಲಸವೇನೂ ಅಲ್ಲ. ಈ ಮಾಯಿಯ ಮಗ, ಫೋಟೋಗಳಿಗೆ ಫ್ರೇಂ ವರ್ಕ್ ಮಾಡಿಕೊಡುವ ಅಂಗಡಿಯಿಟ್ಟುಕೊಂಡಿರುವ ಗಂಗಾಧರನಿಗೆ ನೆನಪಿರುವ ಹಾಗೆ, ಅವನ ಮೂಲ ಇರುವುದೇ ಹಾಗೆ. ಆಸ್ಪತ್ರೆಯಲ್ಲಿ ಗಂಗಾಧರ ಹುಟ್ಟಿದಾಗ, ಅಲ್ಲಿರುವ ಇನ್ನುಳಿದ ಶಿಶುಗಳಿಗೂ ಅವರ ತಾಯಂದಿರ ಹಾಲು ಕಡಿಮೆ ಅನ್ನಿಸಿದಾಗೆಲ್ಲ ತನ್ನೆದೆಗೆ ಹಾಕಿಕೊಂಡು ಕುಡಿಸಿದವಳು ಮಾಯಿ. ಮನೆಗೆ ಬಂದ ಮೇಲೂ, ಆ ಕೂಸುಗಳ ನೆನಪಾಗಿ ಒಂದೆರಡು ಸಲ ಹೋಗಿ ಕುಡಿಸಿಯೂ ಬಂದವಳು. ಮುಂದೆ ಎಷ್ಟೋ ವರ್ಷಗಳ ಮೇಲೆ ನಗರದ ಗದ್ದಲಗಳಲ್ಲಿ ಹಾದಾಡುವ ಯುವಕ-ಯುವತಿಯರನ್ನು ನೋಡಿ, 'ಇದರಲ್ಲಿ ನನ್ನ ಎದೆ ಹಾಲುಂಡ ಮಕ್ಕಳು ಇದ್ದಿರಬಹುದೇ?' ಎಂದು ಕನಸು ನೇಯುವುದು ಮಾಯಿಗೆ ಮುದ ಕೊಡುವ ವಿಷಯ. ಮಾಯಿ, ಗಂಗಾಧರನಿಗೆ ನೆನಪಿರುವ ಹಾಗೆ, ಅವನು ಒಬ್ಬನೇ ಎಂದು ಎಂದೂ ಅನ್ನಿಸದ ಅವಿಭಕ್ತ, ಭಾವದಲ್ಲಿ ಲೋಕವನ್ನು ಸುತ್ತಿಕೊಂಡವಳು. ಯಾರದೋ ಮನೆಯ ಎಂಥದೋ ಕಾರ್ಯಕ್ರಮ ನಡೆಸಲು ಅವರ ಮನೆಯಲ್ಲಿ ಜಾಗೆ ಕಮ್ಮಿ ಎನಿಸಿದರೆ ಅದು ಮಾಯಿಯ ಮನೆಯಲ್ಲಿ ನಡೆಯುತ್ತಿತ್ತು. ಅದರಲ್ಲಿ ಯಾರು, ಯಾವ ಜಾತಿ, ಧರ್ಮ ಯಾವುದು ಎಂಬಿತ್ಯಾದಿ ಉಸಾಬರಿಗಳಿಗೆ ಜಾಗೆಯಿರಲಿಲ್ಲ.

'ಗೋಲ್ಡನ್ ಫ್ರೇಂ ವರ್ಕ್' ಅಂಗಡಿಯನ್ನಿಟ್ಟುಕೊಂಡಿರುವ ಸಹಾಯಕ್ಕೆ ವಿಕ್ಕಿ ಎಂಬ ಹುಡುಗನನ್ನೂ ಇಟ್ಟುಕೊಂಡಿದ್ದಾನೆ ಗಂಗಾಧರ. ವರ್ಷಕೊಂದಾವರ್ತಿ ಅಂಗಡಿ

ಹಸನುಗೊಳಿಸುವಾಗ ದಾತಾರರಿಲ್ಲದೆ, ಪೇಪರ್ ಹಾಳೆಯಲ್ಲಿ ಸುತ್ತಿಕೊಂಡು ಕೂತ ಮನುಷ್ಯರ ಫೋಟೋಗಳು ಮೇಲೆದ್ದು ಮನುಷ್ಯ ಸಂಬಂಧದ ದಾಸ್ತಾನು ಪರಿಶೀಲನೆಯ ಧೂಳನ್ನು ಕೊಡವತೊಡಗುತ್ತಿದ್ದವು. ದೇವರ, ಪ್ರಕೃತಿಯ, ಕಸೂತಿಯ ಫೋಟೋಗಳಾದರೆ; ಕಟ್ಟು ಹಾಕಿಸಲು ಕೊಟ್ಟು ಹೋದವರು ಪಡೆಯಲು ಬರದಿದ್ದರೆ ಅದಕ್ಕೆ for sale- ಅಂತ ಸಣ್ಣ ಚೀಟಿ ಲಗತ್ತಿಸಿ, ಗಿರಾಕಿಗಳಿಗೆ, ರಸ್ತೆಯಲ್ಲಿ ಹಾದಾಡುವವರಿಗೆ ಕಾಣುವಂತೆ ತೂಗುವುದು ವಾಡಿಕೆ. ಆದರೆ, ಮನುಷ್ಯರ ಫೋಟೊಗಳಾದರೆ ಮಾಡುವುದೇನು? ಕೊನೆಗೂ ಗಂಗಾಧರ ಮಾಯಿಯ ಸಲಹೆ ಪಡೆದು ಆ ಫೋಟೋಗಳನ್ನು –ಒಬ್ಬ ಮುದುಕ, ಒಬ್ಬಳು ಗೃಹಿಣಿ, ಒಬ್ಬ ಹರೆಯದವನ– ಅವರು ಸತ್ತಿರಲಿಕ್ಕಿಲ್ಲವೆಂದೋ, ಸಂಬಂಧಿಸಿದವರು ಬಂದಾರು ಎಂದೋ ಆಶಾಭಾವನೆಯಿಂದ ಚೀಟಿ ಅಂಟಿಸದೆ ತೂಗಿಯೂ ಆಯಿತು. ಸ್ವತಃ ಗಂಗಾಧರನೂ ಅಚ್ಚರಿಗೊಳ್ಳುವಂತೆ, ಹೀಗೆ ತೂಗಿಸಿಕೊಂಡ ಆ ಫೋಟೋಗಳಿಗೆ; ವಿಕ್ರಿಯ ಗೆಳೆಯ 'ನಾಟಕದ ಬಂಡ್ಯಾ' –ಶಹರದಲ್ಲಿ ಟೆಂಟು ಹಾಕಿರುವ ನಾಟಕ ಕಂಪನಿಗಳವರಿಗೆ ಬಹಳ ಉಪಯೋಗ ಬೀಳುತ್ತವೆ ಎಂದು ಆ ಫೋಟೊಗಳನ್ನು ಒಯ್ದೂ ಆಯಿತು. ಈ ಭಾಗದಲ್ಲಿ ಶಹರ ದಟ್ಟವಾದಂತೆ ಮನುಷ್ಯ ಸಂಬಂಧಗಳು ಸಡಿಲವಾಗುತ್ತಿರುವ, ಪುರುಸೊತ್ತಿಲ್ಲದ ಬದುಕಾಗುತ್ತಿರುವ ಚಿತ್ರಣ ಅತ್ಯಂತ ಹೃದಯಸ್ಪರ್ಶಿಯಾಗಿದೆ. ಮತ್ತು ಇಂತಹ ಸಿನಿಕ ಸ್ಥಿತಿಯಲ್ಲೂ ಮನುಷ್ಯ ಸಂಬಂಧದ ತೇವಕಾಯುವ ಬೀಜದಂತೆ 'ಮಾಯಿ' ಇದ್ದಾಳೆ. ಅವಳ ಅಮೃತಬಳ್ಳಿ ಕಷಾಯ ಮನುಷ್ಯ ಸಂಬಂಧದ ನಾತೆಯನ್ನು ಬೆಸೆಯುವ ಅಮೃತಧಾರೆ ಅವಳ ಕೈಯ ಈ ಕಷಾಯದ ಪರಿಮಳವಿಲ್ಲದ ಚಾಳಿನವರಿಲ್ಲ. ಯಾರ್ಯಾರು, ಎಷ್ಟೆಷ್ಟು ಸಲ ಈ ಕಷಾಯವನ್ನು ಕುಡಿದಿದ್ದಾರೋ ಲೆಕ್ಕವಿಲ್ಲ.

ಕಥೆಯು ಪ್ರತಿಪಾದಿಸುವ ಮಾನವೀಯತೆಯ ಗಂಧದ ಮೃದುಕಂಪು ಹರಡುವುದು ಕರ್ಫ್ಯೂ ಹರಡಿದ, ಕೋಮುಗಲಭೆಯಲ್ಲಿ ಉರಿದುಬಿದ್ದ ಶಹರದಲ್ಲಿ. ಮಾಯಿಯ ಉಗ್ಗಗಳೀಗ ಜಾಸ್ತಿಯಾಗಿಬಿಟ್ಟಿವೆ. ಸತ್ತವರ, ನೊಂದವರ ಸಂಪರ್ಕ–ಸಹವಾಸವೂ ಬೇಡವೆನ್ನಿಸಿ 'ಸಭ್ಯಸ್ಥ'ರೆಲ್ಲರೂ ಒಳಗಿರುವಾಗ, ಮಾಯಿ ಕರ್ಫ್ಯೂ ಬೀದಿಗಳಿಗಿಳಿಯುತ್ತಾಳೆ. ಶಹರದ ಪ್ರಸಿದ್ಧ ಜೆ.ಜೆ.ಆಸ್ಪತ್ರೆಯಲ್ಲಿ ಕೋಮುಹಿಂಸೆಯಿಂದ ೧೩ ಇರಿತಗಳಿಗೆ ಒಳಗಾಗಿ ಈಗ ಅದೇತಾನೇ ಕಣ್ಬಿಡುವ ಕೂಸಿನಂತಿರುವ ಯುವಕನಿಗೆ ಗಂಗಾಧರನದೇ ವಯಸ್ಸು. ಅವನಿಗೆ ನೆನಪು ಹೋಗಿಬಿಟ್ಟಿದೆ. ಉಣ್ಣಿಸಿದರೆ ಉಣ್ಣುತ್ತಾನೆ. ಮೈ ನೇವರಿಸಿದರೆ ಸುಮ್ಮನೆ ನೋಡುತ್ತಾನೆ. ಅವನ ದೇಕರೇಕಿ ನೋಡಲು ಮಾಯಿ ರಾತ್ರಿಗೂ ಹೊರಟಿದ್ದಾಳೆ.

ಗಂಗಾಧರನ ಒಂದೆರಡು ಡ್ರೆಸ್ಸನ್ನೂ ಚೀಲಕ್ಕೆ ತುರುಕಿದ್ದಾಳೆ. ಮಾಯಿಯ ಈ ಮಮತೆಯಲ್ಲಿ, ಅವಳ ಅಮೃತಬಳ್ಳಿ ಕಷಾಯದಲ್ಲಿ ಕೋಮುದಂಗೆಯ ಪ್ರತಿರೋಧದ ಮಂತ್ರವಿದೆ.

ಗಂಗಾಧರ, ಇಂತಹ ಕರ್ಫ್ಯೂ ದಿನಗಳಲ್ಲಿಯೇ, ತನ್ನ ಅಂಗಡಿಗೆ ಬಂದ ಹುಡುಗನೊಬ್ಬನ ಸಮಸ್ಯೆಗೆ ಪ್ರಾಮಾಣಿಕವಾಗಿ ಸ್ಪಂದಿಸುತ್ತಾನೆ. ಆ ಯುವಕ ಈ ಶಹರದವ. ನಾಗರಿಕ ಭಾಷೆಯಲ್ಲಿ ಹೇಳಬಹುದಾದರೆ ಅನಾಥ. ಹೇಗೆ ಬೆಳೆದ? ಕಲಿತ? ಎಲ್ಲವೂ "ಕಥೆಯೇ". ನಗರದ ಗೋಪುರದ ದೊಡ್ಡ ಗಡಿಯಾರ ನೋಡಿಕೊಳ್ಳುತ್ತ ಬದುಕನ್ನು ರೂಪಿಸಿಕೊಂಡವ. ಈಗ ರಿಕ್ಷಾ ನಡೆಸುತ್ತಾನೆ. ಚೆಂದದ ಹುಡುಗಿಯನ್ನು ಮದುವೆಯಾಗಲಿಕ್ಕಿದೆ. ಅವಳ ಮನೆಯವರಿಗೆ ಕಡೆಗೆ ಏನಿಲ್ಲವೆಂದರೂ ಇವನ ಅಪ್ಪ-ಅವ್ವನ ಗುರುತಿನ ಫೋಟೋ ಆದರೂ ಬೇಕಿದೆ. ಆ ಹುಡುಗನಿಗೆ ಅವನ ಸ್ಥಿತಿಗೆ ಮತ್ತವನು ಅದನ್ನು ದಾಟಿದ ತ್ರಾಣಕ್ಕೆ ನಮ್ಮ ಗಂಗಾಧರ ಫಿದಾ ಆಗಿದ್ದಾನೆ. ಥೇಟ್ ಹಾಗೇ, ಮಾಯಿ ಆ ಆಸ್ಪತ್ರೆಯ ಹುಡುಗನಿಗಾಗಿ ಓಡಾಡುವಂತೆ, ಇವನು ಈ ಹುಡುಗನಿಗೆ ಫೋಟೋ ಒದಗಿಸಲು ಬೇರೆ ಬೇರೆ ಫೋಟೋ ಕಟ್ಟು ತಯಾರು ಮಾಡುವ ಅಂಗಡಿಗಳಿಗೆ ಕರೆದುಕೊಂಡು ಹೋಗುತ್ತಾನೆ. ತನ್ನ ಬಳಿಯೇ ಇದ್ದ ಮೂರು ಫೋಟೋಗಳಲ್ಲಿ ಎರಡಾದರೂ ಈ ಹುಡುಗನ ಪ್ರಯೋಜನಕ್ಕೆ ಒದಗುತ್ತಿತ್ತಲ್ಲವೆ ಎಂದು ಪೇಚಾಡುತ್ತಾನೆ. ಯಾರದೋ ಫೋಟೋಗಳನ್ನು ಇನ್ಯಾರೋ ಆಗಿ ಪ್ರತಿಬಿಂಬಿಸುವುದು, ಹಾಗೆ ಪ್ರತಿಬಿಂಬಿಸುವ ಉದ್ದೇಶ ಚೆನ್ನಾಗಿದ್ದಾಗ- ತಪ್ಪಲ್ಲವೆ ಅಲ್ಲ ಎಂದು ಅಂದುಕೊಳ್ಳುತ್ತಾನೆ. ಹಾಗಾಗಿಯೇ ಏನಾದರೂ ಮಾಡಿ, ಆ ಹುಡುಗನಿಗೊಂದು ಫೋಟೊದ ವ್ಯವಸ್ಥೆಯನ್ನು ಮಾಡುವುದೇ ಎಂದು ತೀರ್ಮಾನಿಸುತ್ತಾನೆ. ಆ ಹುಡುಗನಿಗೆ ಭರವಸೆ ಕೊಟ್ಟು ಬಂದ ರಾತ್ರಿ, ಮಾಯಿ ಗಡಿಬಿಡಿಯಿಂದ ಆಸ್ಪತ್ರೆಗೆ ಹೋಗಿಯಾಗಿದೆ. ಅವಳೊಡನೆ ಮಾತಾಡುವುದೂ ಆಗಿರಲಿಲ್ಲ. ಮಾಯಿ, ಆ ಹೆಸರು ಗೋತ್ರ ಮರೆತ ಅಪ್ಪಟ ಮಾನವ ಶಿಶುವಿನಂಥ ಹುಡುಗನಿಗೆ ಗಂಜಿ ಉಣ್ಣಿಸುತ್ತಿರಬಹುದಾದ ದೃಶ್ಯವನ್ನು ನೆನೆಯುತ್ತಾನೆ. ಹೋಗುವಾಗ ಮಾಯಿ, ಸಂತ್ರಸ್ಥರಿಗೆ ಬಟ್ಟೆ ಬರೆ ತೆಗೆದಿರಿಸಿದ್ದಾಗಿ ಹೇಳುತ್ತ, ನಿನ್ನಪ್ಪನ ಮದುವೆಯ ಕೋಟನ್ನೂ ಕೊಡು ಎಂದು ಸೂಚಿಸಿಯೇ ಹೋಗಿದ್ದಳು. ಈ ಎಲ್ಲದರ ಪರಿಣಾಮ ಎನ್ನುವಂತೆ ಆವತ್ತಿನ ಬೆಳಗು ಗಂಗಾಧರ ಆ ಹುಡುಗನಿಗೆ; ಮಾಲೆಹಾಕಿ ಊದಿನ ಕಡ್ಡಿ ಬೆಳಗಿಸಿಕೊಂಡು ಅಂಗಡಿಯಲ್ಲಿದ್ದ ತನ್ನಪ್ಪನ ಪೋಟೊವನ್ನೇ ಇಳಿಸಿ, ತೃಪ್ತಿಯಿಂದ ಕೊಟ್ಟು ಕಳಿಸುತ್ತಾನೆ. ಆ ಹುಡುಗನೋ 'ಅಪ್ಪನ ಫೋಟೊ ಸಿಕ್ಕರೆ ಸಾಕು, ಅಮ್ಮ ಇದ್ದೇ ಇರುತ್ತಾಳೆ ಅನ್ನುವುದು ತಿಳಿಯುತ್ತದಲ್ಲ -ಎಂದು ತೃಪ್ತಿಯಿಂದ ವೇಗವಾಗಿ ಹೋದ.

ಮನುಷ್ಯ ಸಂಬಂಧವನ್ನು ಹದಗೆಡಿಸುವ ಜಾತಿ, ಕುಲ, ಗೋತ್ರಗಳನ್ನು ಸಾರಾಸಗಟಾಗಿ ನಿರಾಕರಿಸುವ ಮಹತ್ವದ ಕಥೆಯಿದು. ಮನುಷ್ಯರು ಮನುಷ್ಯರು ಅಷ್ಟೇ. ಉಳಿದೆಲ್ಲ ವರ್ಗೀಕರಣಗಳು ಅವರವರ ಅನುಕೂಲಕ್ಕೆ ತಕ್ಕಂತೆ ಮಾಡಿಕೊಂಡ ಅವಕಾಶಗಳು. ಹಾಗಿರುವಾಗ ಇಷ್ಟು ತೆಳ್ಳನೆಯ ಪರದೆಯ ಮೇಲೆ ಕೋಮುವಾದದ ರಕ್ತಪಿಪಾಸುತನವನ್ನು ಬೆಳೆಸುವ ನೀಚತನವನ್ನು ಏನೆನ್ನಬೇಕು? ಮನುಷ್ಯ ಮನುಷ್ಯರ ನಡುವೆ ಇರುವ ಈ ಒಳಿತಿನ ಧಾರೆಯು ಅಂತರ್‌ಗಾಮಿಯಂತೆ ಇರುವಾಗಲೂ, ಯಾರದೋ ಹಿತಾಸಕ್ತಿಗಾಗಿ ಕೋಮುವಾದವು ವಿಜೃಂಭಿಸುತ್ತದೆ. ಅದಕ್ಕೆ ಕಾರಣವೂ ಇಲ್ಲ. ಇರುವುದು ಪರಿಣಾಮದ ಮುಖ ಮಾತ್ರ.ಕೋಮುಹಿಂಸೆಯು ವಿಜೃಂಭಿಸುವ ಯಾವುದೇ ಶಹರದಲ್ಲಿ ಮಾಯಿಯ ಗಂಜಿಯ ಉಗ್ಗವನ್ನೋ, ಅಮೃತಬಳ್ಳಿ ಕಷಾಯವನ್ನೋ ಮನಸ್ಸು ಹುಡುಕುವಷ್ಟು ಆರ್ದ್ರವಾಗಿ ಮನಸ್ಸನ್ನು ಮಾನವೀಯವಾಗಿ ಪರಿವರ್ತಿಸುವಷ್ಟು ಮಹತ್ವದ ಕಥನವಿದು. ಈ ಕಥೆಯ ಮಾಯಿ ಮತ್ತು ಗಂಗಾಧರ ವ್ಯಕ್ತಿಗತ ಬದುಕಿನಲ್ಲಿ ತಾಯಿ-ಮಗ ಮಾತ್ರವಲ್ಲ; ತಾಯ್ತನದ ತಾಕತ್ತನ್ನು ಮಗತನದ ಆಧಾರವನ್ನು ಲೋಕ ಸಮಸ್ತಕ್ಕೂ ವ್ಯಾಪಿಸುವ ಪಾತ್ರಗಳು. ಇಂತಹ ಉದಾರ ದೃಷ್ಟಿಕೋನದಲ್ಲಿ ಜೀವ ಪಡೆಯುವ ಸಾರ್ಥಕತೆ ಅನನ್ಯವಾದದ್ದು. ಮನುಷ್ಯ ಜನ್ಮವನ್ನು ಧನ್ಯಗೊಳಿಸುವಂಥದ್ದು. ಈ ಕಥೆಯ ಮಾಯಿಯಾಗಲಿ, ಗಂಗಾಧರನಾಗಲಿ ನಾಗರಿಕ ಬದುಕಿನಲ್ಲಿ ಬಹುಮುಖ್ಯರೋ ಬಲುದೊಡ್ಡವರೋ ಅಲ್ಲ. ಈ ನೆಲದ ಕರಕಿಯ ಬೇರುಗಳಂತಹ ಸಾಮಾನ್ಯರು. ಅವರೊಳಗಿನ ಮಾನವೀಯತೆಯ ಧಾರಕ ಗುಣ, ಮಣ್ಣಿನ ಸವಕಳಿಯನ್ನು ತಡೆದು ಸಂಭಾಳಿಸುವ ಕರಕಿಯ ಬೇರಿನಂತೆಯೇ ಗಟ್ಟಿಯಾದದ್ದು. ಈ ದೇಶದ ಜನ ಬದುಕಿನ ಘನತೆಯಿದು. ಕಂಗೆಟ್ಟ ಕಾಲದಲ್ಲಿ, ಧೈರ್ಯಗೆಡದಂತೆ ಮನುಷ್ಯ ಕುಲವನ್ನು ಸಂಭಾಳಿಸುವ ಶಕ್ತಿ ಈ ಕಥೆಗಿದೆ. ಕೋಮುವಾದ ಅದೇ ಆಗ ತನ್ನ ಹೆಡೆತೂಗುತ್ತಿರುವ ಕಾಲದಲ್ಲಿ ಜಯಂತ ಕಾಯ್ಕಿಣಿ ಅದರೆದುರು ಮಾಯಿಯ ಅಮೃತಬಳ್ಳಿ ಕಷಾಯದ ಉಗ್ಗವನ್ನು ಹಿಡಿದರು.

ಜಾಗತೀಕರಣ ಸಂದರ್ಭದ ಕನ್ನಡ ಸಣ್ಣಕಥೆಗಳಲ್ಲಿ ಕೋಮುವಾದವನ್ನು ವಿರೋಧಿಸುವ, ಅದಕ್ಕೆ ಪರ್ಯಾಯವಾಗಿ ಜನಸಾಮಾನ್ಯರ ಬಾಳಿನ ಸಹಯಾನದ ತಾತ್ವಿಕತೆಯನ್ನು ನಿರೂಪಿಸುವ ಕಥೆಗಳ ಒಂದು ಚಳುವಳಿಯೇ ನಡೆದಂತಿದೆ. ಕನ್ನಡದ ಇಂತಹ ಮುಖ್ಯ ಕಥೆಗಳು ಆ ಕಥೆಗಾರರನ್ನು ಮಹತ್ವದ ಕತೆಗಾರರನ್ನಾಗಿ ಸಾಬೀತುಪಡಿಸಿವೆ. ಆ ಕಥೆಗಳಿಲ್ಲದೆ ಆ ಕಥೆಗಾರರ ಪರಿಚಯವು ಪೂರ್ಣವಾಗಲಾರದು ಎನ್ನುವಷ್ಟು ದಟ್ಟವಾದ ಕಥೆಗಳಿವು.

ಅಮರೇಶ ನುಗಡೋಣಿಯವರ ಏ ದಿಲ್ ಮಾಂಗೇ ಮೋರ್ ಕಥೆಯನ್ನು, ಜಯಂತ ಕಾಯ್ಕಿಣಿಯವರ ಅಮೃತಬಳ್ಳಿ ಕಷಾಯದೊಂದಿಗೆ, ಎಚ್.ನಾಗವೇಣಿಯವರ ಒಡಲು ಕಥೆಯೊಂದಿಗೆ ಇಟ್ಟು ನೋಡಬೇಕು. ತಾಯಿ–ಮಗನ ಸಂಬಂಧದ ಬೇರೆ ಬೇರೆ ವ್ಯಾಖ್ಯಾನಗಳನ್ನು ಈ ಕಥೆಗಳು ನೀಡುತ್ತವೆ. ನಮ್ಮ ಈ ಕಾಲಕ್ಕೆ ಅಗತ್ಯವಾದ ಬದುಕಿನ ದರ್ಶನಗಳನ್ನು ಕೊಡುತ್ತವೆ. ಏ ದಿಲ್ ಮಾಂಗೇ ಮೋರ್ –ಕಥೆಯ ಶೀರ್ಷಿಕೆಯು ನಿಚ್ಚಳವಾಗಿ ಧ್ವನಿಸುತ್ತಿದೆ. ಇದು ಮನುಷ್ಯನನ್ನು ಕೊಳ್ಳುಬಾಕನಾಗಿಸಿದ, ಹೃದಯಕ್ಕೆ ಈ ವ್ಯಾಪಾರವಲ್ಲದೆ, ಭಾವನಾತ್ಮಕವಾದ ಮನುಷ್ಯ ಸಂಬಂಧಗಳ ಸ್ಪರ್ಶಗಳು ಬೇಡವಾದ ಕಾಲ.ಈ ಕಥೆಯು ಬಯಲುಸೀಮೆಯ ಕಟ್ಟಾ ಹಳ್ಳಿಯು ಬದಲಾಗುತ್ತ ಬದಲಾಗುತ್ತ ಕೋಮು ಹಿಂಸೆಯ ಗೂಡುಗಳಾಗುತ್ತಿರುವ ವ್ಯಥೆಯನ್ನು ಕಾಣಿಸುತ್ತದೆ. ಹುಸೇನವ್ವನ ಹೊಟೇಲಿನಲ್ಲಿ ಅವಳ ಮಗನೇ ಅಂತೆಯೇ ಆಗಿರುವ ಚಿದಾನಂದ ಹುಡುಗನಿದ್ದಾನೆ. ಚಾದಂಗಡಿಯಾಗಿರಬೇಕಾದ್ದು ಹಗೂರ ಪೆಪ್ಸಿ ಅಂಗಡಿಯಾಗಿ ಬದಲುತ್ತಿದೆ. ಊರ ಉಸಾಬರಿ ಮಾತಾಡುವಲ್ಲೀಗ ದೇಶದ ಉಸಾಬರಿಯು ಮಾತಾಗುತ್ತಿದೆ.ದೇಶದ ರಾಜಕಾರಣವು ಗ್ರಾಮದ ರಾಜಕಾರಣವನ್ನು ನಿಯಂತ್ರಿಸುತ್ತಿದೆ.ಗಾಂಧೀ ಕನಸಿನ ಗ್ರಾಮಸ್ವರಾಜ್ಯವನ್ನು ಇಂದಿನ ವ್ಯವಸ್ಥೆ ಚೆಂದವಾಗಿ ಲೇವಡಿ ಮಾಡುತ್ತಿದೆ.ಗ್ರಾಮಗಳನ್ನು ಉದ್ಧರಿಸಲು ತಮ್ಮನ್ನು ತೊಡಗಿಸಿಕೊಳ್ಳಬೇಕಾಗಿದ್ದ ಗ್ರಾಮಪಂಚಾಯತಿಯ ಸದಸ್ಯರು ತಮ್ಮ ಮೇಲೆ ಕುಂತು ಜುಟ್ಟು ಹಿಡಿದು ಆಡಿಸುವ ರಾಜಕಾರಣಿಗಳು ಕಲಿಸಿಕೊಟ್ಟ ಖಾಸಗೀಕರಣ, ಉದಾರೀಕರಣ ಎಂಬ ಮಾತುಗಳನ್ನು ಉರು ಹೊಡೆದು ಎಲ್ಲಿ ಬೇಕಲ್ಲಿ ಉದುರಿಸುತ್ತಾರೆ.ಆ ಪದಗಳ ತಲೆ ಬುಡವೇನೂ ಇವರ ಮೆದುಳಿಗೆ ಹತ್ತಿಲ್ಲ. ಆದರೂ ಈ ಪದಗಳ ಮೂಲಕವೇ 'ದೇಶದ ಉದ್ಧಾರ' ಎಂಬ ಬಾಯಿಪಾಠವನ್ನೂ ನಿಲ್ಲಿಸುತ್ತಿಲ್ಲ. ಪುಡಿ ಹುಡಿ ರಾಜಕಾರಣಿಗಳಿಗಂತೂ 'ಅಚ್ಛೇದಿನ್ ಆಯೇಗಾ' ಎಂದು ಬೊಬ್ಬೆ ಹೊಡೆಯುವುದೇ ಉದ್ಯೋಗವಾಗಿ ಹೋಗಿದೆ.ಇದನ್ನೆಲ್ಲ ನೋಡುತ್ತಿರುವ–ಕೇಳುತ್ತಿರುವ ಹುಸೇನವ್ವಳಂತಹ ಮನುಷ್ಯಳಿಗೆ 'ಊರುಕೇರಿ ಮಂದಿ ಕೂಡಿ ಪಸಂದಾಗಿ ಮಾತನಾಡುವ ಕಾಲವೇ ಸತ್ತು ಹೋಯ್ತು' ಎಂದು ಸಂಕಟವಾಗುತ್ತಿದೆ.ಇನ್ನು ಜನರಿಗೆ ದೇಶದ ವಿದ್ಯಮಾನವನ್ನಾದರೂ ಸರಿಯಾಗಿ ತಲುಪಿಸಬೇಕಾದ ನಮ್ಮ ಮಾಧ್ಯಮಗಳು, ರಾಜಕಾರಣಿಗಳ ಹಿತಾನುಸಾರಿಗಳಾಗಿ, ಮಾಧ್ಯಮ ಎಂಬುದು ಒಂದು ಲಾಭದಾಯಕ ಉದ್ಯಮ ಎಂದು ನಂಬಿ; ಕುಣಿಸುತ್ತಿರುವ ಪಾಕಿಸ್ತಾನವೆಂಬ ಭೂತದ ನೃತ್ಯವನ್ನು ಜನ ತಮ್ಮ ತಮ್ಮ ಸಮಸ್ಯೆಗಳನ್ನೂ ಮರೆತು ಆಸ್ವಾದಿಸುತ್ತಾರೆ.ಭಾರತದ ಜನರ ಪ್ರಜ್ಞಾವಂತಿಕೆ ಈ ಎಲ್ಲ ಕಾರಣಗಳಿಂದಾಗಿ, ಅದೆಷ್ಟು

ಅಧಃಪತನಕ್ಕೆ ಇಳಿದಿದೆ ಎಂದರೆ ಜನರು- ಕಾರ್ಗಿಲ್ ಯುದ್ಧವನ್ನೂ ಭಾರತ-ಪಾಕಿಸ್ತಾನ್ ಕ್ರಿಕೆಟ್ ಮ್ಯಾಚನ್ನೂ ಒಂದೇ ಎಂದು ಮಾತನಾಡಿಕೊಳ್ಳುವಂತೆ ಆಗಿದ್ದಾರೆ.ಇಷ್ಟಾದರೆ, ಕೋಮುವಾದಿ ರಾಜಕಾರಣ ಪೂರ್ಣ ಗೆಲುವನ್ನು ಪಡೆಯಿತು ಎಂದೇ ಲೆಕ್ಕ.

ಇಂತಹ ಊರಲ್ಲಿ ಹುಡುಗ-ಹುಡುಗಿ ಓಡಿಹೋಗಿದ್ದಾರೆಂಬ ಪುಕಾರು, ಅದರಲ್ಲೂ ಹಾಗೆ ಹೋದವರು ಬೇರೆ ಬೇರೆ ಧರ್ಮದವರು ಎಂದಾದರೆ ಊರಿನ ವಾತಾವರಣ ಹೇಗಾಗಬೇಡ?ಅದರಲ್ಲೂ ಇದು ಊರು-ಕೇರಿ ಮಧ್ಯದ ಸಂಘರ್ಷದ ಸ್ವರೂಪ ಪಡೆಯುವಂತೆ ಕಾಣುತ್ತಿತ್ತು. ಊರಿನ ಗೌರವಸ್ಥ ಮರ್ಯಾದಸ್ಥ ಮನೆಯ ಹುಡುಗಿ ಸಾಂತಿ, ಕಾಶಿಂಬಿ-ಚಂದಪ್ಪನ ಮಗ ಖಾಜಾವಲಿಯೊಂದಿಗೆ ಕಾಣೆಯಾಗಿದ್ದಾಳೆಂಬ ಸುದ್ದಿಯನ್ನು ಹುಸೇನವ್ವ ಹಿಂಜಿ ಹಿಂಜಿ ತನ್ನ ಮನಸ್ಸಿನಲ್ಲಿಯೇ ಪರೀಕ್ಷಿಸುತ್ತಿದ್ದಳು. ಅದೇ ರಾತ್ರಿ ಗ್ಯಾಂಗು ಗ್ಯಾಂಗು ಹುಡುಗರ ಮಧ್ಯರಾತ್ರಿ ಕಾರ್ಗಿಲ್ ವಿಜಯೋತ್ಸವ; ಇನ್ನೊಂದು ಕಡೆ ಭಾರತ-ಪಾಕಿಸ್ತಾನ್ ಮ್ಯಾಚ್ ನೋಡುವವರು. ಕೂಗುಮಾರಿಗಳು ಅವಳ ನಿದ್ದೆಗೆಡಿಸಿ ದಿಗಿಲು ಬೀಳಿಸುತ್ತಿದ್ದವು.ರಾತ್ರಿಯಿಡೀ ಎಂಥದೋ ಭಯದಿಂದ ತತ್ತರಿಸುವಂತಾಗಿತ್ತು. ಹುಸೇನವ್ವನ ಹೊಟೇಲಿನಲ್ಲೀಗ ರಾತ್ರಿಯ ಪೆಪ್ಸಿ, ಕೋಲಾ ವ್ಯಾಪಾರ ಭರ್ಜರಿ ನಡೆಯುತ್ತಿತ್ತು. ಸಂಜೆಯಾದರೆ ಸಾಕು, ಟಿ.ವಿ.ಮುಂದೆ ಊರ ಹುಡುಗರ ಗ್ಯಾಂಗೇ ಸೇರುತ್ತಿತ್ತು. ಹುಸೇನವ್ವ ಲಾಭದಾಯಕ ವ್ಯಾಪಾರದ ಕಾರಣಕ್ಕಾಗಿ ಬಾಯಿಮುಚ್ಚಿಕೊಡಿದ್ದಳು.

ಇಂತಹ ರಾತ್ರಿ, ಖಾಜಾವಲೀ ಸಾಂತಿಯನ್ನು ಹುಸೇನವ್ವನ ಹೊಟೇಲಿನೊಳಗೆ ನುಗಿಸಿ, ನಾಳೆ ಬಂದು ಎಲ್ಲ ಹೇಳ್ತೀನಿ ಎಂದು ದಢದಢ ಹೋಗಿದ್ದ.ಸಾಂತಿ ಇಲ್ಲಿರೋದು ಗೊತ್ತಾದರೆ, ಊರ ದೊಡ್ಡಮಂದಿ ನನ್ನನ್ನು ಸುಮ್ಮನೆ ಬಿಡಲಾರರೆಂಬ ದಿಗಿಲು ಹುಸೇನವ್ವನನ್ನು ಕಾಡುತ್ತಿತ್ತು. ಆದರೆ ಪೋಲಿಸರು ಹುಸೇನವ್ವನನ್ನು ಅರೆಸ್ಟ ಮಡಿಕೊಂಡು ಜೀಪು ಹತ್ತಿಸಿಕೊಂಡು ಹೋಗಿದ್ದು, ಅವಳ ಹೊಟೇಲಿನಲ್ಲಿ ರಾತ್ರಿ ಬೆಟ್ಟಿಂಗ್ ಕ್ರಿಕೆಟ್ ಮತ್ತು ಗದ್ದಲ ನಡೆಯಿತು ಎಂದು.ಅವಳನ್ನು ಬಿಡಿಸಿಕೊಂಡು ತರಲು ಚಿದಾನಂದ ಹುಡುಗ ಒದ್ದಾಡುತ್ತಿದ್ದ.ಏನೇನೋ ಪ್ರಯತ್ನಗಳನ್ನೂ ಮಾಡಿದ. ಅಂತೂ ಹುಸೇನವ್ವ ಪೋಲಿಸ್ ಸ್ಟೇಷನ್ನಿನಿಂದ ಬಂದಳು.ಇಲ್ಲಿ ಸಾಂತಿಯ ಕಥೆ ಬೇರೆಯಿತ್ತು. ಅವಳು ತನ್ನನ್ನು ಕೇರಿಯ ಹುಡುಗ ಗೋವಿಂದನಿಗೆ ಮದುವೆ ಮಾಡಿಸುವಂತೆ ಖಾಜಾವಲಿಯನ್ನು ಬೇಡಿಕೊಂಡಿದ್ದಳು. ತಕ್ಷಣಕ್ಕೆ ಏನು ಮಾಡಲೂ ತೋಚದ ಖಾಜಾವಲಿ ಅವಳಿಗೆ ಹುಸೇನವ್ವನ ಹೋಟ್ಲು ಕಾಣಿಸಿದ್ದ. ಈಗ ಗೋವಿಂದನ ಗ್ಯಾಂಗು ಮತ್ತು ಸಾಂತಿಯನ್ನು ಮದ್ವೆಯಾಗಲು

ನಿಶ್ಚಯವಾಗಿದ್ದ ವಿರೂಪಾಕ್ಷನ ಗ್ಯಾಂಗಿನ ಮಧ್ಯೆ ದೊಡ್ಡ ಹೊಡೆದಾಟವೇ ನಡೆಯುವಂತಿತ್ತು. ಹುಸೇನವ್ವ ಗದ್ದಲದಿಂದ ಊರು ಪಾರುಮಾಡಲು ಗೋವಿಂದನಿಗೆ ಈ ಉಸಾಬರಿ ಬೇಡ ಎಂದು ಹೇಳಿ ಕಳಿಸಿದ್ದಳು.

ಹುಸೇನವ್ವ, ದಿಕ್ಕಿಲ್ಲದ ಚಿದಾನಂದನನ್ನು ಕಷ್ಟದಲ್ಲಿದ್ದ ಅನಾಥೆ ಎಲ್ಲಮ್ಮನನ್ನು ತನ್ನ ಮನೆಯಲ್ಲಿಟ್ಟುಕೊಂಡು ಅವರನ್ನೇ ಮಕ್ಕಳು ಎಂದು ಬಾಳುತ್ತಿದ್ದಳು. ಖಾದರಲಿಂಗನನ್ನು ಎಲ್ಲಮ್ಮದೇವಿಯನ್ನು ಒಂದೇ ಉಸಿರಿನಲ್ಲಿ ನೆನೆದು ನಡಕೊಳ್ಳುವವಳು. ಆದರೂ ಕಾರ್ಗಿಲ್ ಪರಿಹಾರನಿಧಿ ಕೂಡಿಸುವ ಉಢಾಳರ ಗುಂಪು ಅವಳನ್ನು ಮಾನಸಿಕವಾಗಿ ವ್ಯಾಕುಲಗೊಳಿಸುತ್ತದೆ. ಪಕ್ಕದೂರಿನ ಕಾರ್ಗಿಲ್ ಮೃತಯೋಧನ ಮನೆಗೆ ಹೋಗಿ ಅವನ ತಾಯಿಗೆ ಸಮಾಧಾನ ಹೇಳಿ, ತನ್ನ ಕೈಲಾಗಿದ್ದ ಸಹಾಯ ಮಾಡಿ ಬರುತ್ತಾಳೆ. ಬರುವಾಗ ಚಿದಾನಂದ ಇನ್ನು ಹೊಟೇಲಿನ ಕೆಲಸಕ್ಕೆ ನಿಲ್ಲುವುದು ಬೇಡವೆಂದೂ, ಚೆನ್ನಾಗಿ ಶಾಲೆ ಕಲಿಯಬೇಕೆಂದೂ, ಕ್ರಿಕೆಟ್ ಬೆಟ್ಟಿಂಗ್‌ನಲ್ಲಿ ಅವನು ಗೆದ್ದ ದುಡ್ಡು ಅವನ ಹೆಸರಿಗೆ ಇಡುವುದೆಂದೂ ಮಾತಾಗುತ್ತದೆ. ಎಲ್ಲಮ್ಮನಿಗೂ ಏನಾದರೂ ಉದ್ಯೋಗದ ವ್ಯವಸ್ಥೆಯ ಕನಸು ಕಾಣುತ್ತಾಳೆ. ಚಿದಾನಂದ 'ಯವ್ವ' ಎಂದು ಆಕೆಯ ಉಡಿಯಲ್ಲಿ ಮುಖವಿಟ್ಟು ಕಣ್ಣೀರು ಹಾಕುತ್ತಾನೆ.

ಈ ಕಥೆಯು ಬಂಡವಾಳಶಾಹಿ ಮಾರುಕಟ್ಟೆಯ ಅಧ್ವಾನಗಳನ್ನು ಪದರು ಪದರಾಗಿ ಹೇಳುತ್ತದೆ. ಕ್ರಿಕೆಟ್, ಬೆಟ್ಟಿಂಗ್, ಪೆಪ್ಸಿ-ಕೋಲಾ, ರಾಜಕಾರಣ, ಜಾತಿ, ಧರ್ಮ, ಕಾರ್ಗಿಲ್, ಸೈನಿಕರ ಹೆಸರಿನ ಫಂಡ್ ಕಲೆಕ್ಷನ್, ಊರಲ್ಲಿ ಬುದು ಬುದು ಏಳುತ್ತಿರುವ ರೌಡಿ ಗ್ಯಾಂಗ್‌ಗಳು ಮಾಡಲು ಕೆಲಸವಿಲ್ಲದೆ ಪೂರ್ತಿ ಅಡ್ಡಹಾದಿ ಹಿಡಿದು ವ್ಯವಸ್ಥೆಯನ್ನೇ ಹದಗೆಡಿಸುತ್ತಿರುವ ಯುವಕರ ಪಡೆ ಹೀಗೆ ಇಂದಿನ ಭಾರತದ ಅವ್ಯವಸ್ಥೆಯ ಅಸಮಾನತೆಯ ದಾಖಲೆಯನ್ನೇ ಕೊಡುತ್ತದೆ. ಚಿದಾನಂದ ಹುಡುಗ, ಯವ್ವಾ ಈ ಊರೇ ಬ್ಯಾಡ. ಬ್ಯಾರೆ ಊರಿಗೆ ಹೋಗೂನು ಅಂದಾಗ ಹುಸೇನವ್ವ 'ಎಲ್ಲ ಊರು ಒಂದೇ ಮಗಾ, ನಾವು ಪಾಡಿರಬೇಕು -ಅನ್ನೋದು ಇಂದಿನ ಗ್ರಾಮಭಾರತದ ವಾಸ್ತವವಾಗಿದೆ.ತನ್ನನ್ನು ವಿನಾಕಾರಣ ದೂಷಿಸುವವರಿಗಾಗಿ ತನ್ನ ಬದುಕಿನ ನೀತಿಯನ್ನು ಬದಲಿಸದೆ, ಮಾನವೀಯತೆಯೊಂದೇ ಕೋಮುವಾದಿ ರೋಗದ ಮದ್ದು -ಎಂದು ಬಾಳುವ ಹುಸೇನವ್ವನ ಪಾತ್ರ ನೆನಪಿನಲ್ಲಿ ಉಳಿಯುವಂಥದ್ದು. ಹುಸೇನವ್ವ ಈ ನೆಲದ ಜೀವ. ಅವಳನ್ನು ಸುಕಾಸುಮ್ಮನೆ ಧರ್ಮದ ಗಾಜುಗಣ್ಣುಗಳಿಂದ ನೋಡುವ ಮಟ್ಟಕ್ಕೆ ಈ ದೇಶದ

ಪ್ರಜ್ಞಾವಂತಿಕೆಯು ಪಾತಾಳಕ್ಕಿಳಿದಿರುವುದನ್ನು ಕಥೆ ಕಾಣಿಸುತ್ತದೆ. ಹುಸೇನವ್ವ ಚಿದಾನಂದ ಮತ್ತು ಎಲ್ಲವ್ವರೊಂದಿಗೆ ಹೊಂದಿರುವ ಸಂಬಂಧದ ಬಿಗಿವಿನಲ್ಲಿ, ಈ ಕೆಡುಕು ಒಳ ನುಸುಳದಂತೆ ತಡೆವ ಕೋಟೆಯ ಗಾರೆಗಚ್ಚುಗಳಿವೆ ಎಂಬುದನ್ನು ಕತೆಯು ನಿರೂಪಿಸುತ್ತದೆ.

ಜಾಗತೀಕರಣ ಕಾಲದ ಭಾರತವೀಗ ಆಧುನಿಕತೆಯ ನಂತರದ ವಿರುದ್ಧ ಲಗಾಟವನ್ನು ಹಾಕಿದೆ ಎಂಬುದನ್ನು, ಇಲ್ಲಿಯ ಶಿಕ್ಷಣ, ಆರೋಗ್ಯ, ಆಧುನಿಕ ಸಮಾಜ ಚಿತ್ರಣದ ಮೂಲಕ ಹೇಳುವ ಕಥೆ ದಾದಾ ಕ ಪಹಾಡ್. ನಟರಾಜ್ ಹುಳಿಯಾರ್ ಬರೆದ ಈ ಕಥೆಯ ಮೃದುಲತೆಯಿರುವುದು ಅದು ಮನಸ್ಸಿಗೆ ಮುಟ್ಟಿಸುವ ಮನುಷ್ಯತ್ವದ ಘನತೆಯಲ್ಲಿ.ಈ ಮನುಷ್ಯತ್ವ ಕೋಮುವಾದದ ಝಳವನ್ನು ಆರಿಸುವ ನೀರಸೆಲೆ.

'ಅವರು ಬೆಂಕಿ ಹಚ್ಚುತ್ತಿದ್ದಾರೆ
ಬನ್ನಿ, ನಾವು ದೀಪ ಹಚ್ಚೋಣ'

(ಎಂ.ಡಿ.ಒಕ್ಕುಂದ)

ಎಂಬ ಕವಿತೆಯ ಸಾಲುಗಳ ಧ್ಯೇಯವನ್ನು ಒಡಲ ನೂಲಿನಂತೆ ಆಗಿಸಿಕೊಂಡಿರುವ ಕಥೆಯಿದು.

ಈ ಕಥೆಯು, ವಿದ್ಯಾವಂತ ಯುವಕನ ಸ್ವಗತ ಅನುಭವಗಳನ್ನು ಅವನ ನೆನಪುಗಳನ್ನು ತಳಪಾಯವಾಗಿ ಹೊಂದಿವೆ. ಕಥೆಯ ನಾಯಕನ ನೆನಪಿನ ಸರಪಳಿಯ ಮೊದಲ ಹನಿ ಪ್ರಾರಂಭವಾಗುವುದು ದೇವರಾಜ ಅರಸರು ಮುಖ್ಯಮಂತ್ರಿಯಾಗಿದ್ದ ಮತ್ತು ಹಾವನೂರ ವರದಿ ಜಾರಿಗೆ ಬರಬೇಕೆಂಬ ಒತ್ತಾಯವು ಕೇಳಿಬರುತ್ತಿದ್ದ ಕಾಲದಲ್ಲಿ. ಅದೇ ತಾನೇ ಶಿಕ್ಷಣದ ಮೂಲಕ ಆಧುನಿಕ ವಿಚಾರಧಾರೆಗೆ ತೆರೆದುಕೊಳ್ಳುತ್ತಿದ್ದ ಯುವಕರ ಗುಂಪು, ವೈಚಾರಿಕತೆ ಮತ್ತು ವೈಜ್ಞಾನಿಕ ಜೀವನಕ್ರಮ ಅಳವಡಬೇಕೆಂದು ಪ್ರಯತ್ನಿಸುತ್ತಿರುವ ಸಂದರ್ಭವದು. ವಾಚಕರ ವಾಣಿಗೆ ಪತ್ರ, ಪ್ರತಿಭಟನಾ ಮೆರವಣಿಗೆಗಳನ್ನೆಲ್ಲ ಸಂಘಟಿಸಿ ನಡೆಯಿಸಿದರು. ಈ ಯುವಕರ ಗುಂಪಿನ ನಿರಂತರ ಪ್ರಯತ್ನದ ಫಲವಾಗಿ ಅವರ ಊರಿಗೆ ಸರ್ಕಾರೀ ಆಸ್ಪತ್ರೆಯೂ ಬಂದಿತ್ತು.

ಆಸ್ಪತ್ರೆ ಬರುವ ಮೊದಲು ಅವರ ಊರಿನಲ್ಲಿ ರಹಮಾನ್ ಪಾಷಾ ಎಂಬ ಸಾಬರ ಮುದುಕನೇ ಡಾಕ್ಟರರ ಕೆಲಸ ಮಾಡುತ್ತಿದ್ದ. ಅವನು ಪಾಕಿಸ್ತಾನದ ಏಜೆಂಟ್ ಇತ್ಯಾದಿ ವಿಚಿತ್ರ ಸುದ್ದಿಗಳು ಹರಡಿದ್ದವಾದರೂ ಸುಮ್ಮನೆ ನಿರಾಧಾರವಾಗಿ ಇಂತಹ ಸುದ್ದಿಗಳು ಯಾಕೆ

ಹರಡುತ್ತಿದ್ದುವೆಂಬುದರ ತರ್ಕವೂ ಸಿಗುತ್ತಿರಲಿಲ್ಲ. ರಹಮಾನ ಪಾಷಾನ ಸೂಟಕೇಸು ತುಂಬ ಚಕ್ಕೆಗಳು, ಬೇರುಗಳು, ಬಣ್ಣದ ಪುಡಿಗಳು, ಇಕ್ಕಳ, ಚಿಮ್ಮಟ ಇಂಥವೇ ತುಂಬಿರುತ್ತಿದ್ದವು. ಮೂರ್ನಾಲ್ಕು ತಿಂಗಳಿಗೊಮ್ಮೆ ಬಾಬಾಬುಡನ್‌ಗಿರಿ ಕಡೆ ಹೋಗಿ ನಾರುಬೇರು ತರುತ್ತಿದ್ದ. ಅವನದ್ದು ನಾಲ್ಕಡಿಯ ದವಾಖಾನೆ. ಸಂತೆಬೀದಿಯ ಯಾವ ಮೆಟ್ಟಿಲೋ ಎಲ್ಲೋ ದಿಢೀರನೆ ಆರಂಭವಾಗಿಬಿಡುತಿತ್ತು. ಹಲ್ಲು ಕೀಳುವುದರಿಂದ ಹಿಡಿದು ಹಾವು ಕಚ್ಚಿದರೆ ಬದುಕಿಸುವ ಔಷಧಿಯವರೆಗೆ ಏನೆಲ್ಲ ಅವನಲ್ಲಿ ಇತ್ತು. ಊರಿನ ವಿದ್ಯಾವಂತ ಯುವಕರಿಗೆ ಇವನೊಬ್ಬ ದಗಾಕೋರ, ಮೋಸಗಾರ ಎಂದು ಕಾಣುತ್ತಿತ್ತು. ಆದರೆ ಅವರ ಅಪ್ಪಂದಿರು ಮಾತ್ರ ರೆಹಮಾನ್ ಪಾಷಾನ ವೈದ್ಯಕೀಯ ಜ್ಞಾನ ಮತ್ತು ಕೌಶಲ್ಯಗಳ ಬಗ್ಗೆ ಕೃತಜ್ಞರಾಗಿದ್ದರು. ಕಡೆಗೂ ವಿದ್ಯಾವಂತ ಯುವಕರು ವಾಚಕರ ವಾಣಿಗೆ ಪತ್ರವನ್ನೆಲ್ಲ ಬರೆದು ಅವರೂರಿಗೆ ಆಸ್ಪತ್ರೆ ಬರುವಂತೆ ಮಾಡಿದರು. ಅದೇ ವರ್ಷ ರೆಹಮಾನ ಪಾಷಾ ಊರು ಬಿಟ್ಟಿದ್ದೂ ಆಯಿತು.

ಆದರೆ ಬಂದ ಆಸ್ಪತ್ರೆಯಿಂದ ಆದ ಪ್ರಯೋಜನವೇನು? ಎಂಬ ಖಾನೇಸುಮಾರಿನ ದಿನಗಳೂ ಬಂದವು. ಔಷಧಿ ಅಂಗಡಿ ಮತ್ತು ಡಾಕ್ಟರುಗಳ ಮಧ್ಯದ ಒಪ್ಪಂದ, ಪೋಸ್ಟ ಮಾರ್ಟಮ್ ಬಿಸಿನೆಸ್ ಹೀಗೆ ಆಸ್ಪತ್ರೆ ತರಹೇವಾರಿ ಕಾಯಿಲೆಗಳಿಂದ ಬಳಲುತ್ತಿತ್ತು. ಅದೇ ಯುವಕರೇ, ಅದೇ ವಾಚಕರ ವಾಣಿಗೆ ಆಸ್ಪತ್ರೆಯ ಅವ್ಯವಸ್ಥೆ ಕುರಿತು ದೂರುಗಳನ್ನು ಬರೆದರು.ಆದರೆ, ಇಂತಹ ಅವ್ಯವಸ್ಥೆಯಿಂದ ಲಾಭ ಪಡೆಯುತ್ತಿದ್ದ ವರ್ಗವೂ ಇತ್ತು.ಏನಾದರೂ ಆಸ್ಪತ್ರೆಯ ಕಾಯಿಲೆ ಬಹು ಅಂಗಾಂಗ ವೈಫಲ್ಯದ ಸಾಂಕ್ರಾಮಿಕ ಕಾಯಿಲೆಯಂತಾಯಿತು. ಊರಿನ ವಿದ್ಯಾವಂತ ಯುವಕರು ಜೀವನೋಪಾಯಕ್ಕಾಗಿ ಊರು ತೊರೆದು ಎಲ್ಲೆಲ್ಲೋ ಹೋಗಬೇಕಾಯಿತು. ಇವರಲ್ಲಿ ಒಬ್ಬರಾದ ಕತೆಯ ನಿರೂಪಕರು ಕಲಿತು ಡಾಕ್ಟರಾಗಿ, ಅವರ ಅಪ್ಪ ಸಾಯುವ ಕಾಲದಲ್ಲೂ ರೆಹಮಾನ್ ಪಾಷಾರನ್ನೇ ನೆನೆಸಿಕೊಂಡು ಈ ಲೋಕದಿಂದ ನಿರ್ಗಮಿಸಿಯೂ ಆಗಿತ್ತು.

ಕಥೆಯ ಎರಡನೆಯ ಭಾಗದಲ್ಲಿ, ವೈದ್ಯನಾಗಿ ಕ್ಲಿನಿಕ್ ಪ್ರಾರಂಭಿಸಿ ತನ್ನ ಬಳಿ ಟ್ರೀಟಮೆಂಟ್‌ಗೆಂದು ಬರುತ್ತಿದ್ದ ಮನೋರೋಗಿಯೊಬ್ಬಳೊಂದಿಗೆ ಅವಳಾಗಿಯೇ ಅಪೇಕ್ಷಿಸಿದಳೆಂದು ಸಂಬಂಧ ಏರ್ಪಡಿಸಿಕೊಂಡು, ಒಂದೆರಡೇ ದಿನಗಳಲ್ಲಿ ಅವಳ ಆಕಸ್ಮಿಕ ಮರಣವಾಗಿ; ಅವಳ ಸಂಬಂಧಿಕರು ರೋಗಿಯ ಸಾವಿನ ಹೊಣೆಯನ್ನು ಈ ಡಾಕ್ಟರರ ಮೇಲೆ ಹೊರೆಸಿ ದುಡ್ಡು ಪೀಕಿಸಿಕೊಂಡಿದ್ದೂ ಆಯಿತು. ಇದು ಕಾರಣವೋ ಏನೋ

ವೃತ್ತಿಯಲ್ಲಿ ಹಾನಿಯಾಗಿ, ಕ್ಲಿನಿಕ್ ಮಾರಿಕೊಂಡು ಬೇರೆ ಬಿಸಿನೆಸ್ ಕಡೆಗೆ ಯೋಚಿಸುತ್ತಿರುವಾಗ, ಆಕಸ್ಮಿಕವಾಗಿ ನಾಟಕೀಯವಾಗಿ ಬಾಲ್ಯದ ರೆಹಮಾನ್ ಪಾಷರ ಭೇಟಿಯಾಯಿತು.

ಕೆಲವರು ವೈದ್ಯ ರೆಮಾನ್ ಪಾಷರ ಮೇಲೆ ತಕರಾರೆತ್ತಿ ಬಡಿವ ಸನ್ನಾಹದಲ್ಲಿದ್ದರು. ಲೇಖಕರು ಗದರಿಸಿ ಬಿಡಿಸುತ್ತಾರೆ. ರೆಹಮಾನ್ ಪಾಷರನ್ನು ತಮ್ಮ ಮನೆಗೆ ಕರೆದುಕೊಂಡು ಬರುವಾಗ, ಅವರು ಊರಲ್ಲಿದ್ದ ಮನೆಯನ್ನು ಜುಜುಬಿ ಸಾವಿರ ರೂಪಾಯಿಗೆ ಮಾರಿ, ಬೆಂಗಳೂರು ಸೇರಿದ್ದು; ಈಗ ಇಲ್ಲಿಯೂ ವ್ಯಾಪಾರ ಏನೂ ಚೆನ್ನಾಗಿಲ್ಲದೆ ಎಂಥದೋ ಕಿರಿಕಿರಿ ಅನ್ನಿಸುತ್ತಿರುವುದರಿಂದ ತಮ್ಮ ಜನ ಹೆಚ್ಚಿರುವ ಚಿಕ್ಕಮಗಳೂರು ಕಡೆ ಹೋಗಿ ನೆಲೆಸುವ ವಿಚಾರದಲ್ಲಿರುವುದು ಗೊತ್ತಾಯಿತು. ಅಂದು ಲೇಖಕರ ಮನೆಯ ಚೆಂದವನ್ನು ಮೆಚ್ಚಿ, ಲೇಖಕರ ತಂದೆಯ ಗುಣಗಾನ ಮಾಡುತ್ತ, ತಾವು ತಮ್ಮ ತಂದೆಯಿಂದ ವಿದ್ಯೆ-ಜ್ಞಾನ ಪಡೆದದ್ದನ್ನು ರೆಹಮಾನ್ ಪಾಷಾ ನೆನಪಿಸಿಕೊಳ್ಳುತ್ತಾರೆ. ಲೇಖಕರು ವೈದ್ಯರೆಂದು ತಿಳಿದಾಗ ಬಹಳ ಸಂತಸಪಡುತ್ತಾರೆ. "ನಮ್ ಹಿಂದೂಸ್ಥಾನ್ ವಳಗೆ ಐತೆ ಇಲ್ಲಾ, ಆ ದವಾ ಅಮೇರ್ಕವಳಗೂ ಸಿಕ್ಕಕ್ಕಿಲ್ಲ ಸೊಮೇ"[೨೦] -ಎಂದು ತಿಳಿವಿನ ರಹಸ್ಯವನ್ನು ಹಂಚಿಕೊಳ್ಳುತ್ತಾರೆ. ತಮ್ಮ ತಂದೆಯಿಂದ ಬಂದ ಈ ಅಪರಂಪಾರ ಜ್ಞಾನವನ್ನು ಮಗನಿಗಲ್ಲದೆ ಇನ್ಯಾರಿಗೂ ಕೊಡುವಂತಿಲ್ಲ. ತನಗೆ ಹೆಂಡತಿ ಎಂದೋ ಇಲ್ಲವಾಗಿ ಮಕ್ಕಳೂ ಇಲ್ಲ ಎಂದು ಸಣ್ಣಗೆ ಗೊಣಗಿ ಪೇಚಾಡುತ್ತಾರೆ. "ಹಿಂಗೆ ನಮ್ಮೋರು ಖಸಮ್ ಇಟ್ಟೀ ಜ್ವಾಪ್ನ ಮಾಡಿದ್ರೆ ನಮ್ ಜಡೀಬೂಟಿಯಾ ಎಲ್ಲಾ ಇಂಗ್ಲೀಷ್‌ನೋರು ಅಮೇರ್ಕದೋರು ನನ್ಮಕ್ಳು ಲೂಟ್ ಹೊಡ್ದು ಬಿಡೋರು ಸೊಮೇ" ಎನ್ನುತ್ತಾನೆ. ಆವತ್ತು ಲೇಖಕರ ಒತ್ತಾಯಕ್ಕೆ ಕಟ್ಟುಬಿದ್ದು ರೆಹಮಾನ್ ಅವರ ಮನೆಯಲ್ಲಿ ಸಂಕೋಚದಿಂದಲೇ ಊಟಕ್ಕೆ ಕೂತಿದ್ದಾರೆ. ಒಂದು ಕ್ಷಣ ನಿಂತು, ನೀನೂ ಡಾಕ್ಟರಲ್ಲ? ಎಂದು ಕೇಳಿ; ಇನ್ನೊಮ್ಮೆ ದೃಢಪಡಿಸಿಕೊಂಡು -ಅಪ್ಪ ತನಗೆ ಕಲಿಸಿದ್ದನ್ನು ಹೇಳುತ್ತೇನೆ. ಒಂದು ನೋಟಬುಕ್‌ನಲ್ಲಿ ಬರೆದುಕೋ. ರಂಜಾನ್ ಆದಮೇಲೆ ದಾದಾ ಕ ಪಹಾಡ್‌ಗೆ ಹೋಗುವ. ಅಲ್ಲಿ ಎಲ್ಲ ಜಡಿಬೂಟಿಯಾಗಳ ಪರಿಚಯ ಮಾಡಿಸುತ್ತೇನೆ ಎನ್ನುತ್ತಾನೆ. ಲೇಖಕರು ಅಚ್ಚರಿಯಿಂದ ನಿರುತ್ತರರಾಗುತ್ತಾರೆ.

ಈ ಕತೆಯು ಸಾಂಪ್ರದಾಯಿಕ ಶಿಕ್ಷಣ ಮತ್ತು ಆಧುನಿಕ ಶಿಕ್ಷಣದ ವ್ಯತ್ಯಾಸವನ್ನು ಸೂಚಿಸುತ್ತದೆ. ಗಿರೀಶ ಕಾರ್ನಾಡರ 'ಟಿಪ್ಪು ಸುಲ್ತಾನ ಕಂಡ ಕನಸು' ಎಂಬ ನಾಟಕದಲ್ಲಿ ಟಿಪ್ಪು, ತನ್ನ ಮಕ್ಕಳನ್ನು ಬ್ರಿಟೀಷರು ಒತ್ತೆಯಾಳುಗಳನ್ನಾಗಿ ಮಾಡಿಕೊಂಡಿದ್ದರ ಹಿಂದಿರುವ

ಅನ್ಯಾದೃಶ ಸಾಂಸ್ಕೃತಿಕ ರಾಜಕಾರಣದ ಬಗ್ಗೆ ಹೇಳುತ್ತಾನೆ. ನನ್ನ ಮಕ್ಕಳನ್ನು ಆಂಗ್ಲರು ಒತ್ತೆಯಾಳಾಗಿಸಿಕೊಂಡಿದ್ದು ತಮ್ಮದೇ ಶ್ರೇಷ್ಠ ಸಂಸ್ಕೃತಿ ಎಂದು ಆ ಎಳೆಯರ ಮನಸ್ಸಿನಲ್ಲಿ ಬಿಂಬಿಸಲು. ಒಮ್ಮೆ ಇಂಗ್ಲೀಷ ಸಂಸ್ಕೃತಿಯು ಶ್ರೇಷ್ಠ ಎಂದು ಮನಸ್ಸಿಗೆ ಬಂದುಬಿಟ್ಟರೆ, ಅಲ್ಲಿಗೆ ನಮ್ಮ ಭಾಷೆ ಸಂಸ್ಕೃತಿಗಳ ಬಗೆಗಿನ ಅಭಿಮಾನವೇ ಇಲ್ಲವಾಗಿ, ಮುಂದೆ ನಡೆಯುವುದೆಲ್ಲ ಬರೀ ಇಂಗ್ಲೀಷರ ಅನುಕರಣೆ ಮಾತ್ರವೇ ಎನ್ನುತ್ತಾನೆ. ವಸಾಹತುಶಾಹಿಯ ಘೋರ ಪರಿಣಾಮ ಇದು. ಯಾರು ಆಳಿದ್ದರೋ ಅವರನ್ನೇ ಪ್ರಶಂಸಿಸುವುದು. ಅವರ ಮಾದರಿಯನ್ನೇ ಶ್ರೇಷ್ಠ ಎಂದು ಮೆರೆಸುವುದು. ಭಾರತದ ಬದುಕಿನಲ್ಲಿ ಜ್ಞಾನ ಮೀಮಾಂಸೆಯು, ವಸಾಹತು ಕಾರಣದಿಂದಾಗಿ ದಿಕ್ಕುತಪ್ಪಿತು. ಪರಿಣಾಮವಾಗಿ ಲೋಕದೃಷ್ಟಿಯೂ ನೆಲೆತಪ್ಪಿತು –ಎಂಬುದನ್ನು ಈ ಕಥೆ ಆರೋಗ್ಯಜ್ಞಾನದ ನಿದರ್ಶನದ ಮೂಲಕ ವಿವರಿಸುತ್ತದೆ. ಜ್ಞಾನದ ಕೇಂದ್ರಗಳು ಬಡವರಲ್ಲಿ, ಅಲ್ಪಸಂಖ್ಯಾತರಲ್ಲಿ, ಕೆಳಜಾತಿಯವರಲ್ಲಿ, ಮಹಿಳೆಯರಲ್ಲಿ ಇದ್ದಾಗ; ಅದನ್ನು ಜ್ಞಾನವೆಂದೇ ಪರಿಗಣಿಸುವುದಿಲ್ಲ ಮತ್ತು ಅಂಥವರ ಸುತ್ತ ಅಕಾರಣ ದ್ವೇಷಗಳು ನಿರ್ಮಿತವಾಗುತ್ತವೆ. ಹಿಂದೆ ಸೂಲಗಿತ್ತಿಯರನ್ನು ಮಾಟಗಾತಿಯರೆಂದು ಹೊಡೆದು ಸಾಯಿಸಿದ ಉಲ್ಲೇಖಗಳು ಸಿಗುತ್ತವೆ. ತೇಜಸ್ವಿಯವರ ಕರ್ವಾಲೊದ ಚರ್ಚೆಯೂ ಈ ಕುರಿತೇ ಇರುವುದು.

ಈ ಕಥೆ ಕೇವಲ ಜ್ಞಾನ ವ್ಯತ್ಯಸ್ಥ ಸ್ಥಿತಿಯನ್ನು ಮಾತ್ರ ಹೇಳುವುದಿಲ್ಲ. ಆಧುನಿಕತೆಯ ಪ್ರವೇಶಕ್ಕೂ ಮೊದಲು ಹಿಂದೂಗಳು–ಮುಸ್ಲಿಮರು ಕೂಡಿ ಬಾಳಿದ ನೆನಪುಗಳತ್ತ ಬೆರಳು ತೋರುತ್ತದೆ.ತುಂಬ ಸ್ವಾರಸ್ಯ ಇರುವುದು ರಹಮಾನ ಪಾಷಾ ವ್ಯಕ್ತಿತ್ವದಲ್ಲಿ. ತಾನು ಬಿಟ್ಟು ಬಂದ ಊರಿನ, ಬಿಟ್ಟು ಬಂದು ಅಸಹಾಯಕವಾಗಿ ಬಾಳುವಂತಾಗಲು ಕಾರಣವಾದ ವ್ಯಕ್ತಿಯೊಂದಿಗೆ ಅವನ ಸಂಬಂಧ ಅತ್ಯಂತ ಶುದ್ಧ ಮಾನವೀಯ ಸಂಬಂಧವಾಗಿದೆ. ತನ್ನ ಹೊಟ್ಟೆಯ ಮಗನಿಗೆ ಮಾತ್ರ ತಿಳಿಸಿಕೊಡಬೇಕಾದ ತಿಳಿವನ್ನು ಅವನು ಈತನಿಗೆ ತಿಳಿಸಲು ದೃಢ ನಿರ್ಧಾರ ಮಾಡುತ್ತಾನೆ. ನಮ್ಮ ನಿಜವಾದ ವೈರಿ ಅಮೇರಿಕಾ, ಅಮೇರಿಕೀಕರಣ ಎಂಬ ಸ್ಪಷ್ಟ ನಿಲುವು ಇಲ್ಲಿದೆ. ಎಷ್ಟೆಲ್ಲ ಜನರಿಗೆ ಆರೋಗ್ಯ ಕೊಟ್ಟು ಉಪಕರಿಸುವ ವ್ಯಕ್ತಿಯನ್ನು 'ಸಾಬ' ಎಂಬು ನೋಡುವ ಏಕಪಕ್ಷೀಯ ನಿಲುವಿನ ಹಿಂದೆ ಕೋಮುವಾದಿ ವಿಧ್ವಂಸಕತೆಯಿದೆ. ಅದನ್ನು ತಣಿಸುವ ನಡೆಯನ್ನು ಶೋಧಿಸಿಕೊಳ್ಳುವ ಜರೂರತ್ತಿದೆ. ರೆಹಮಾನ ಪಾಷ ದಾದಾ ಕ ಪಹಾಡ್‌ಗೆ ನಮ್ಮನ್ನೂ ಕರೆದೊಯ್ಯುತ್ತಾನೆ. ಇಂದು ಅದೇ ಬೆಟ್ಟ ಧರ್ಮ ಧುರಂಧರತೆಗೆ ಸಾಕ್ಷಿಯಾಗಿದೆ. ನಿಜವಾದ ವೈರಿಯನ್ನು ಗುರುತಿಸದೆ, ಸೋದರತ್ವ ಇರಬೇಕಾದಲ್ಲಿ ವೈರತ್ವ ಕಟ್ಟಿಕೊಂಡು ಬಡಿದಾಡುತ್ತಿದ್ದೇವೆ. ಆದರೆ ಮನುಷ್ಯ ದೇಹದ

ರೋಗನಿಧಾನ ಕಂಡು-ಕಲಿತು ಉಪಕರಿಸುವ ರೆಹಮಾನ ಪಾಷ ಸಮಾಜದ ರೋಗದ ಕಾರಣವನ್ನೂ ತುಂಬ ತೀವ್ರವಾಗಿ ಗುರುತಿಸಿ, ನಿಧಾನಿಸುವ ದಾರಿಯನ್ನು ಶೋಧಿಸುತ್ತಾನೆ. ತನ್ನೆಲ್ಲ ಜ್ಞಾನವನ್ನು ಅನ್ಯಧರ್ಮೀಯ ವ್ಯಕ್ತಿಗೆ (ತನ್ನ ಮಗನಿಗೆ ಕೊಡಬೇಕಾದ್ದನ್ನು) ಮುಫತ್ತಾಗಿ ಕೊಡುವ ಯೋಚನೆ ಮಾಡುವುದು ಮನುಷ್ಯತ್ವದ ಗೆಲುವಿನ ಮಹತ್ವದ ಮಜಲು.

ಈ ಕಥೆಯು ಅತ್ಯಂತ ತಣ್ಣಗೆ, ಇಂದು ಕರ್ನಾಟಕದ ಬಾಬ್ರಿ ಮಸೀದಿಯಾಗಿಸಲು ಪ್ರಯತ್ನಿಸುತ್ತಿರುವ ಬಾಬಾಬುಡನ್‌ಗಿರಿಯಿಂದ ನಾವು ನಮ್ಮ ಮುಂದಿನ ಸಂತತಿಗೆ ಆಯ್ದು ಕೊಡಬೇಕಾದುದು ಏನು ಎಂಬ ಪ್ರಶ್ನೆಯನ್ನು ಇಡುತ್ತದೆ. ಸಂತನೊಬ್ಬ ಬದುಕಿ ಬಾಳಿ ಹೋದ ಜಾಗೆಯದು. ಅಥವಾ ಹಲವು ಮತಧರ್ಮಗಳ ಆಚರಣೆಯಲ್ಲಿದ್ದು, ಎಲ್ಲವನ್ನೂ ಪ್ರೀತಿಸಿದ ಸಂತರುಗಳು ಇದ್ದು ಹೋದ ಪಹಾಡ್ ಅದು. ನಾವದನ್ನು ಆ ಭಾವೈಕ್ಯತೆಯ ರೂಪಕವಾಗಿಯೇ ಉಳಿಸಿಕೊಳ್ಳಬೇಕು. ಪಾಷಾನಿಗೆ ಈ ದೇಶ 'ಹಮಾರಾ ಹಿಂದೂಸ್ಥಾನ್' ಆದರೆ ಈ ದೇಶದ ಹಲವು ಮನಸ್ಸುಗಳಿಗವನು ಪಾಕಿಸ್ತಾನದ ಎಜೆಂಟ. ಕಾರಣವೇ ಇಲ್ಲದ ಅಸಹನೆಯ ಪರಮಾವಧಿಯಿದು. ಇಂತಹ ಅಸಹನೆಯ ಬೀಜಗಳನ್ನು ಉತ್ತಿ ಬಿತ್ತಿದವರು ಇಂಗ್ಲೀಷರು. ಅವರ ಶಿಕ್ಷಣ ನೀತಿಯು ಈ ನೆಲದ ಸೌಹಾರ್ದತೆಯನ್ನೂ ಅರಿಯಲಾಗದಂತಹ ಬರಡುತನಕ್ಕೆ ಕಾರಣವಾಯಿತೇ? ಇಂತಹ ಪ್ರಶ್ನೆಗಳನ್ನು ಕಥೆ ಮುಂದಿಡುತ್ತಿದೆ. ಏನು ನಡೆಯುತ್ತಿದೆಯೋ ಅದನ್ನು ಮರುಪರಿಶೀಲನೆಗೆ ಒಡ್ಡಿಕೊಳ್ಳಬೇಕಲ್ಲವೇ ಎಂಬ ಎಚ್ಚರವನ್ನು ತರುತ್ತದೆ. 'ಎಲ್ಲಿ ಕಳೆದುಕೊಂಡಿರುತ್ತೇವೋ ಅಲ್ಲೇ ಹುಡುಕಬೇಕಲ್ಲವೇ?' ಕಳೆದುಹೋಗುತ್ತಿರುವ ಮಾನವೀಯ ಬಂಧುತ್ವವನ್ನು ಮರಳಿ ಸಂಕಲಿಸಿಕೊಳ್ಳಬೇಕಾಗಿದೆ. ರೆಹಮಾನ ಪಾಷನಿಗೆ ಅನ್ನಿಸುವ ಹಾಗೆ, ಈ ಜ್ಞಾನವನ್ನು ಮುಂದಿನ ತಲೆಮಾರಿಗೆ ಕೈದಾಟಿಸುವ ಜರೂರತ್ತಿದೆ. ಇದು ಕಥೆಯ ಕೇಂದ್ರ ಶ್ರದ್ಧೆ. ಕೋಮುಹಿಂಸೆಯನ್ನು ಸಾಂತ್ವನಿಸುವ ಸಂತತನ ಇಂದಿನ ಬಾಳಿಗೆ ಅಗತ್ಯವಾದ ಮೌಲ್ಯವಾಗಿದೆ ಎನ್ನುವುದನ್ನು ಕನ್ನಡ ಕಥೆಗಳು ಮರಳಿ ಮರಳಿ ಪ್ರತಿಪಾದಿಸಿದವು. ಬಿ.ಎಂ.ಬಶೀರ ಅವರ ಪುಟ್ಟ ಕಥೆಯೊಂದು ಹೀಗಿದೆ– ಕೋಮುಗಲಭೆಯಿಂದ ಆ ಊರು ಊರಿದು ಹೋಯಿತು. ಸಂತ ಆ ದಾರಿಯಲ್ಲಿ ಒಬ್ಬಂಟಿಯಾಗಿ ನಡೆದುಬಂದ. ಹಿಂದೂಗಳ ಗುಂಪು ತಡೆದು ಕೇಳಿತು. 'ನಿನ್ನದು ಯಾವ ಧರ್ಮ? "ನಾನೊಬ್ಬ ಮುಸಲ್ಮಾನ' ಸ್ವಂತ ಉತ್ತರಿಸಿದ. ಎಲ್ಲರೂ ಚೆನ್ನಾಗಿ ಥಳಿಸಿದರು. ಸಂತ ನಿಧಾನ ಮುಂದೆ ಬಂದ. ಮುಸಲ್ಮಾನರ ಗುಂಪು ತಡೆದು ಕೇಳಿತು. 'ನಿನ್ನದು ಯಾವ ಧರ್ಮ? "ನಾನೊಬ್ಬ ಹಿಂದೂ' ಸಂತ ಉತ್ತರಿಸಿದ. ಮತ್ತದೇ ಬಡಿತ.

ಥಳಿತ. ಅಲ್ಲಿಂದ ನಿಧನಿಧಾನ ಆಶ್ರಮ ತಲುಪಿದ ಸಂತನನ್ನು ಶಿಷ್ಯರು ಕೇಳಿದರು - 'ನಿಜವಾಗಿಯೂ ನಿಮ್ಮದು ಯಾವ ಧರ್ಮ?' ಸಂತ ಗಾಯಗಳಿಗೆ ಔಷಧಿ ಹಚ್ಚುತ್ತ ಉತ್ತರಿಸಿದ ಮೆಲ್ಲಗೆ. "ಮುಸಲ್ಮಾನರಿಗೆ ನಾನೊಬ್ಬ ಹಿಂದೂ. ಹಿಂದೂಗಳಿಗೆ ನಾನೊಬ್ಬ ಮುಸಲ್ಮಾನ."

ಕನ್ನಡ ಕಥನ ಪ್ರಜ್ಞೆಯು ಧರ್ಮಸಂಘರ್ಷದ ಈ ಕಾಲದಲ್ಲಿ, ಮುಸಲ್ಮಾನರಿಗೆ ಹಿಂದೂವಾಗಿ, ಹಿಂದೂಗಳಿಗೆ ಮುಸಲ್ಮಾನನಾಗಿ ಉರಿ ಆರಿಸುವ ಸಂತತನವನ್ನು ಕನಸಿದೆ.ತಾನು ಉರಿದು ಬೆಳಕು ಬಿತ್ತರಿಸುವ ದೀಪವಾಗಲು ಬಯಸಿದೆ.

**ಕೊನೆಟಿಪ್ಪಣಿ :**

೧. ಗೀತಾಪ್ರೆಸ್ ಗೋರಖಪುರ್, ಶ್ರೀಮದ್ಭಗವದ್ಗೀತಾ, ಗೀತಾಪ್ರೆಸ್, ಗೋರಖಪುರ. ಪುಟ–೩೧೭
೨. ಜಿ.ಎಸ್.ಶಿವರುದ್ರಪ್ಪ ಹಾಗೂ ಕೆ.ವಿ.ನಾರಾಯಣ, ಕಾವ್ಯಾರ್ಥ ಪದಕೋಶ, ಕಾಮಧೇನು ಪ್ರಕಾಶನ, ಬೆಂಗಳೂರು. ಪುಟ–೧೪೬
೩. ಓ.ಎಲ್.ನಾಗಭೂಷಣಸ್ವಾಮಿ, ವಿಮರ್ಶೆಯ ಪರಿಭಾಷೆ, ಅಭಿನವ ಪ್ರಕಾಶನ ವಿಜಯನಗರ ಬೆಂಗಳೂರು. ಪುಟ–೧೬೫
೪. ಅದೇ ಪುಟ–೧೬೬
೫. ವಸುಧೇಂದ್ರ, ಹಂಪಿ ಎಕ್ಸ್‌ಪ್ರೆಸ್, ಕೆಂಪು ಗಿಣಿ, ಛಂದ ಪುಸ್ತಕ ಪ್ರಕಾಶನ, ಬನ್ನೇರುಘಟ್ಟ, ಬೆಂಗಳೂರು. ೨೦೧೦. ಪುಟ–೬೦–೬೧
೬. ಅದೇ ಪುಟ–೬೬
೭. ಬಿ.ಶ್ರೀನಿವಾಸ, ಕಾಣದಾಯಿತೋ ಊರುಕೇರಿ, ಲಡಾಯಿ ಪ್ರಕಾಶನ, ಗದಗ, ೨೦೧೨ ಪುಟ–೭೧
೮. ಅದೇ ಪುಟ–೭೧
೯. ಅದೇ ಪುಟ–೭೬
೧೦. ಜಯಂತ ಕಾಯ್ಕಿಣಿ,ಜಯಂತ ಕಾಯ್ಕಿಣಿ ಕತೆಗಳು ಪ್ರಶಸ್ತಿ ವಿಜೇತ ಮೂರು ಪುಸ್ತಕಗಳ ಸಂಪುಟ, ಅಂಕಿತ ಪುಸ್ತಕ, ಬೆಂಗಳೂರು, ೨೦೧೨ ಪುಟ–೧೮
೧೧. ಅದೇ, ಪುಟ–೨೯
೧೨. ಅದೇ, ಪುಟ–೧೯
೧೩. ಅದೇ, ಪುಟ–೨೦
೧೪. ಅದೇ, ಪುಟ–೨೧
೧೫. ಅದೇ, ಪುಟ–೨೪
೧೬. ಅದೇ, ಪುಟ–೨೫
೧೭. ಅದೇ, ಪುಟ–೨೮–೨೯
೧೮. ಅದೇ, ಪುಟ–೨೮
೧೯. ಅದೇ, ಪುಟ–೩೧
೨೦. ಅದೇ, ಪುಟ–೩೨
೨೧. ಡಿ.ಎಲ್.ನಾಗರಾಜ್, ಸಂಸ್ಕೃತಿ ಕಥನ, ಸ್ವಪ್ನ ಬುಕ್‌ಹೌಸ್, ಗಾಂಧಿನಗರ, ಬೆಂಗಳೂರು. ಪು–೨೪೭
೨೨. ಮೊಗಳ್ಳಿ ಗಣೇಶ, ದೇವರದಾರಿ, (ತುರ್ತುಪರಿಸ್ಥಿತಿ), ಅಹರ್ನಿಶಿ ಪ್ರಕಾಶನ, ಶಿವಮೊಗ್ಗ. ೨೦೧೭ ಪುಟ–೧೦೨
೨೩. ಅದೇ, ಪುಟ–೧೦೬
೨೪. ಅದೇ, ಪುಟ–೧೦೨
೨೫. ಅದೇ,ಪುಟ–೧೦೩–೧೦೪

೨೬. ಅದೇ,ಪುಟ-೧೦೪

೨೭. ಅದೇ,ಪುಟ-೧೦೭

೨೮. ಅದೇ,ಪುಟ-೧೦೪

೨೯. ಅದೇ, ಪುಟ-೧೦೯

೩೦. ಅದೇ, ಪುಟ-೧೦೫

೩೧. ಅದೇ, ಪುಟ-೧೦೯

೩೨. ಬಸವಣ್ಣೆಪ್ಪಾ ಕಂಬಾರ, ಆಟಿಕೆ, (ಸರ್ಕಸ್), ಛಂದ ಪುಸ್ತಕ, ಬೆಂಗಳೂರು, ೨೦೧೨ ಪುಟ-೬೦

೩೩. ಅದೇ, ಪುಟ-೫೮

೩೪. ಅದೇ, ಪುಟ-೫೯

೩೫. ಅದೇ, ಪುಟ-೬೨

೩೬. ಅದೇ, ಪುಟ-೬೩

೩೭. ಮಂಜುನಾಥಲತಾ,ಪ್ರತಿಕೃತಿ, ಪಲ್ಲವ ಪ್ರಕಾಶನ, ಚೆನ್ನಪಟ್ಟಣ,೨೦೧೧,ಪುಟ-೧೨

೩೮. ಅದೇ, ಪುಟ-೧೪

೩೯. ಜಯಂತ ಕಾಯ್ಕಿಣಿ, ಅಮೃತಬಳ್ಳಿ ಕಷಾಯ, ಅಂಕಿತ ಪುಸ್ತಕ, ಬೆಂಗಳೂರು, ೨೦೧೨, ಪುಟ-೩೯೫

೪೦. ನಟರಾಜ ಹುಳಿಯಾರ, ಬಸಲಿಂಗಪ್ಪನವರು ಮತ್ತು ಡೇವಿಡ್ ಸಾಹೇಬರು, (ದಾದಾ ಕ ಪಹಾಡ್),ಪುಟ-೪೫

ಅಧ್ಯಾಯ-೬

# ಸಮಾರೋಪ

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಸಣ್ಣಕಥೆ ಎನ್ನುವುದು ಹೆಚ್ಚು ಜನಮನ್ನಣೆಯನ್ನು ಗಳಿಸಿದ ಪ್ರಕಾರ. ಈ ಜನಪ್ರಿಯತೆಯ ಸ್ಥಾನವು ಆಧುನಿಕೋತ್ತರ ಕಾಲದಲ್ಲಿಯೂ ವ್ಯತ್ಯಸ್ಥವಾಗಲಿಲ್ಲ. ಮುಕ್ತ ಬಂಡವಾಳವಾದಿ ಸಮಾಜವು ಮನುಷ್ಯರ ದೇಶ-ಕಾಲವನ್ನು ವಿಸ್ತರಿಸಿ; ಅನುಭವ ಸ್ವೀಕರಣದ ಮುಕ್ತ ಅವಕಾಶವನ್ನು ತೆರೆಯಿತು. ಗ್ರಾಮಭಾರತದಲ್ಲಿ ಹುಟ್ಟಿ, ದೇಸೀ ಭಾಷೆಯಲ್ಲಿ ಶಿಕ್ಷಣ ಪಡೆದ ಜೀವವು ಜಗತ್ತಿನ ಅತಿನಾಗರಿಕವೆನ್ನಿಸುವ ನಗರಗಳಲ್ಲಿ ಬಾಳುವುದು ಸಾಧ್ಯವಾಯಿತು. ಇದರಿಂದಾಗಿ ಮನುಷ್ಯ ಬದುಕು ವಿಚಿತ್ರ ಪಲ್ಲಟಗಳಲ್ಲಿ ಹೊರಳುವಂತಾಯಿತು. ಸಾಹಿತ್ಯ ಓದಿನ ಆಸಕ್ತಿಯನ್ನು ಅಭಿರುಚಿಯನ್ನು ಮಂಕಾಗಿಸುವ ವಾತಾವರಣವು ಸೃಷ್ಟಿಯಾಯಿತು. ಮನುಷ್ಯರ ಸಂವೇದನಾಶೀಲತೆಯ ಹಸಿವನ್ನು ಹಿಂಗಿಸಲು ವಿದ್ಯುನ್ಮಾನ ಮಾಧ್ಯಮಗಳು ಸೌಲಭ್ಯಗಳು ಹೆಚ್ಚಾಗಿ ಒದಗತೊಡಗಿದವು. ಸಮಾಜೋ ಆರ್ಥಿಕ ರಚನೆಗಳು ಬದಲಾದವು. ಆದರೆ ಸಾಹಿತ್ಯವು ತನ್ನ ಸ್ಥಾನವನ್ನು ಕದಲಿಸಿಕೊಳ್ಳುವ ಅಸಹಾಯಕತೆಯೇನೂ ಒದಗಲಿಲ್ಲ. ಸಾಹಿತ್ಯದ ಆಸಕ್ತ ವಲಯವೂ ಹೊಸ ಕಸುವಿನಿಂದ ಮೇಲೆದ್ದಿತು. ಬರವಣಿಗೆ ಮತ್ತು ಓದುವಿಕೆಗಳ ಜೀವತೃಪ್ತಿಯ ಹಾದಿ ತೆರೆದೇ ಇತ್ತು. ಈ ಕಾಲದ ಗಮನಾರ್ಹ ಸಂಗತಿಯೆಂದರೆ ಸಾಹಿತ್ಯದ ವಿಭಿನ್ನ ಪ್ರಕಾರಗಳು ಮುನ್ನೆಲೆಗೆ ಬಂದವಾದರೂ ಸಣ್ಣಕಥೆಯ ಪ್ರಾಶಸ್ತ್ಯದ ಸ್ಥಾನವನ್ನು ಬದಲಿಸುವುದು ಆಗಲಿಲ್ಲ. ಆಧುನಿಕತೆಯ ಕಾಲದಿಂದ ಆಧುನಿಕೋತ್ತರ ಕಾಲದವರೆಗೂ ಸಣ್ಣಕಥೆ ಎಂಬ ಪ್ರಕಾರದ ಜನಪ್ರಿಯತೆಯು ಹಾಗೆಯೇ ಉಳಿದುಬಂದಿತು. ಸಣ್ಣಕಥೆಗಳು ಅಭಿವ್ಯಕ್ತಗೊಳ್ಳುವ ಆಯಾಮಗಳಲ್ಲಿ ಬದಲಾವಣೆಗಳು ನಡೆದವು.

## ೬.೧. ಫಲಿತಗಳು:

ಅತಿನಾಗರಿಕ ಬದುಕಿಗೆ ತೆರೆದುಕೊಂಡ ಈ ಕಾಲದಲ್ಲಿ, ಸಣ್ಣಕಥೆ ಎಂಬ ಪ್ರಕಾರದ ಸ್ವರೂಪವು ಓದುಗ ಸ್ನೇಹಿಯಾಗಿತ್ತು. ಸರಳ ಗದ್ಯದ, ಕಡಿಮೆ ವ್ಯಾಪ್ತಿಯ ಕಥನವು ತನ್ನ ಜನಪ್ರಿಯತೆಯನ್ನು ಜೀವಂತವಾಗಿ ಉಳಿಸಿಕೊಂಡೇ ಬಂದಿತು. ಸಾಹಿತ್ಯ ರಚನೆಯನ್ನು ಕುರಿತು ಸ್ಪರ್ಧೆಗಳಲ್ಲಿ ಸಣ್ಣಕಥೆಗೆ ವಿಶೇಷ ಮನ್ನಣೆಯಿದೆ. ಭಾರತೀಯ ಪ್ರಜ್ಞೆಯೇ ಕಥನ ಸಂಸ್ಕಾರಕ್ಕೆ ಒಗ್ಗಿಹೋಗಿದ್ದು ಎಂಬುದನ್ನೂ ನೆನಪಿಸಿಕೊಳ್ಳಬೇಕು. ಆದರೆ ಈ ಅವಧಿಯಲ್ಲಿ ಸಣ್ಣಕಥೆಯ ಪ್ರಕಾರದಲ್ಲಿ ಹೆಚ್ಚೆಚ್ಚು ಪ್ರಯೋಗಗಳು ನಡೆದವು. ಅತ್ಯಂತ ಸಣ್ಣಕಥೆಗಳ

ರಚನೆಯನ್ನು ಕಾಣುತ್ತೇವೆ. ಸಣ್ಣಕಥೆಗಳು ಬಿತ್ತರಗೊಳ್ಳುವ ಮಾಧ್ಯಮಗಳಲ್ಲಿ ಎದ್ದು ಕಾಣುವ ಬದಲಾವಣೆಯನ್ನು ಕಾಣಬಹುದಾಯಿತು. ಅತೀ ಸಣ್ಣಕಥೆಗಳು ರಚನೆಯಾದ ಕಾಲವೆಂದೂ ಇದನ್ನು ಗುರುತಿಸಬಹುದು.

ಈ ಕಳೆದ ಮೂರು ದಶಕಗಳ ಭಾರತೀಯ ಸಮಾಜವು ಸಾಂಸ್ಕೃತಿಕ ಕ್ಷೇತ್ರದಲ್ಲಿ ಮೂರು ವೈವಿಧ್ಯಮಯ ಪರಿಸರವನ್ನು ಪಡೆದಿತ್ತು. ಇದುವರೆಗೂ ಸಮಾಜದ ಮುನ್ನೆಲೆಗೆ ಬರದಿದ್ದ ಅಂಚಿನ ಬದುಕುಗಳೂ ನಿಧಾನ ತೆರೆದುಕೊಳ್ಳತೊಡಗಿದ್ದವು. ವಿದ್ಯುನ್ಮಾನ ಮಾಧ್ಯಮಗಳಲ್ಲಿ, ರಿಯಾಲಿಟಿ ಶೋಗಳಲ್ಲಿ ಇದುವರೆಗೂ ಮುಖ್ಯ ವಾಹಿನಿಗೆ ಬರದ ವಿವಿಧ ಪ್ರತಿಭೆಗಳನ್ನು ಗುರುತಿಸುವ ಅವಕಾಶವನ್ನು ಕಲ್ಪಿಸುವ ಕೆಲಸ ನಡೆದ ಹಾಗೆಯೇ ಸಾಹಿತ್ಯಿಕ ಪ್ರಪಂಚದಲ್ಲಿಯೂ ಇಂತಹ ವಿದ್ಯಮಾನಗಳು ನಡೆದವು. ಮಾತೇ ಆಡದ ಲೋಕ, ಮಾತು ಕಲಿತ ಲೋಕ ಮತ್ತು ಮಾತು ಬೇಡದ ಲೋಕಗಳು ಏಕಕಾಲದಲ್ಲಿ ಸಕ್ರೀಯವಾದ ಸಂದರ್ಭವಿದು. ಇದನ್ನು ಗ್ರಾಮೀಣ, ನಗರ ಮತ್ತು ಅತಿನಾಗರಿಕ ಲೋಕಗಳೆಂದು ಕರೆಯಲಾಗಿದೆ. ಮೂರು ವಿಭಿನ್ನ ಲೋಕಗಳ ಸಕ್ರೀಯ ಪಾಲುದಾರಿಕೆಯು ಕನ್ನಡದ ಸಾಹಿತ್ಯಿಕ ಶ್ರೀಮಂತಿಕೆಯನ್ನು ಹೆಚ್ಚಿಸಿತು. ಈ ಒಂದೊಂದು ಲೋಕಗಳಲ್ಲಿಯೂ ವಿವಿಧ ಜಾತಿ, ವರ್ಗ, ಲಿಂಗ, ಧರ್ಮಗಳ ವೈವಿಧ್ಯತೆಯೂ ಇದ್ದು ಕನ್ನಡದ ಅಭಿವ್ಯಕ್ತಿ ಹಲವು ತುಣುಕುಗಳನ್ನು ಕತ್ತರಿಸಿ ಜೋಡಿಸಿದ ಕೌದಿಯಾಯಿತು. ಈ ಕಾಲದ ಮಹತ್ವದ ಲಕ್ಷಣವಾಗಿಯೇ ಇದನ್ನು ಕಾಣಬೇಕು.

ಕನ್ನಡ ಮಾತ್ರವಲ್ಲದೆ, ಭಾರತದ ಒಟ್ಟಾರೆ ಸಂದರ್ಭದಲ್ಲಿಯೂ ೭೦-೮೦ರ ದಶಕದ ಸಾಮಾಜಿಕ ಎಚ್ಚರದ ಚಳುವಳಿ ಮಾದರಿಯು ಈಗ ಇಲ್ಲವಾಗಿತ್ತು. ಸಾಮಾಜಿಕ ಚಳುವಳಿಗಳಿಗೂ ಸಾಹಿತ್ಯಿಕ ಚಳುವಳಿಗಳಿಗೂ ಇರುವ ಅಂತಃ ಸಂಬಂಧವೀಗ ಸ್ಥಗಿತ ಸ್ಥಿತಿ ತಲುಪಿತ್ತು.ಮುಕ್ತ ಬಂಡವಾಳವಾದವು ತಂದು ಹಾಕಿದ ಹೊಸ ಸವಾಲುಗಳಿಂದ ಮೇಲೇಳುವುದೇ ಕಠಿಣವಾದ ಸಂದರ್ಭದಲ್ಲಿ, ಚಳುವಳಿಯ ಗತಿಸ್ಥಿತಿಯೂ ಬದಲಿತ್ತು. ದಲಿತ-ಬಂಡಾಯ ಕಾಲಘಟ್ಟದಲ್ಲಿಯಂತೆ, ಚಳುವಳಿಯ ನಿರ್ದೇಶಿತ ಸೂತ್ರದಲ್ಲಿ ಸೃಜನಶೀಲತೆಯು ಮುಂಚಲಿಸುವುದು ಎಂಬ ನಿರ್ಧಿಷ್ಟ ಚಲನೆಯಿರಲಿಲ್ಲ. ಸಾಹಿತ್ಯ-ಕಲೆಗಳು ಬಂಡಾಯದ ಧೋರಣೆಯನ್ನು ಅಂತರ್ಗತಗೊಳಿಸಿಕೊಂಡು ಹೊಸ ಕಸುವಿನಿಂದ ತಲೆಯೆತ್ತಿದ ಕಾಲಾವಧಿಯಿದು. ಇದು ಬರಹಗಾರರಿಗೆ ಮುಕ್ತ ಅವಕಾಶವಿರುವ ಸಂದರ್ಭ ಎಂಬ ವಿಶ್ಲೇಷಣೆಗೂ ಒಳಗಾಯಿತು.

ಮೇಲ್ನೋಟಕ್ಕೆ ಕಾಣುವ ಈ ಮುಕ್ತತೆಯು ನಿಜವಾದ ಅರ್ಥದಲ್ಲಿ ಸಂಭವಿಸಲಿಲ್ಲ. ಜಾಗತೀಕರಣದ ಈ ಕಾಲದಲ್ಲಿ ಎಲ್ಲವನ್ನೂ ಖಾಸಗೀಕರಣಗೊಳಿಸಿ ಬಂಡವಾಳಶಾಹಿಯನ್ನು ಮೆರೆಸುವ ಬಗೆಯು ರೂಪುಗೊಂಡಿತ್ತು. ಇದಕ್ಕೆ ಸಾಹಿತ್ಯ-ಕಲೆಗಳ ಲೋಕವೂ ಹೊರತಾಗಲಿಲ್ಲ. ಬಂಡವಾಳಶಾಹಿಗಳು ತಮ್ಮ ಅಗತ್ಯ-ಲಾಭಗಳಿಗಾಗಿ, ಸಾಂಸ್ಕೃತಿಕ ಕ್ಷೇತ್ರದಲ್ಲಿ ಬೇರುಬಿಡಲು ಪ್ರಾರಂಭಿಸಿದರು. ಸಾಹಿತ್ಯಿಕ ಉತ್ಸವ, ಹಬ್ಬ, ಸಮ್ಮೇಳನಗಳು ಇವರ ಯಾಜಮಾನ್ಯದ ಅಡಿಯಲ್ಲಿ, ಇವರುಗಳ ಆರ್ಥಿಕ ಕೃಪಾಪೋಷಣೆಯಲ್ಲಿ ನಡೆಯತೊಡಗಿದವು. ಇದರಿಂದಾಗಿ, ಸಮಕಾಲೀನ ವೈರುಧ್ಯಗಳಿಗೆ ಪ್ರತಿರೋಧದ ತ್ರಾಣ ತುಂಬಬೇಕಾಗಿದ್ದ ಸಾಹಿತ್ಯ-ಕಲೆಗಳು ಮುಕ್ತ ಮಾರುಕಟ್ಟೆಯಲ್ಲಿ ಆಕರ್ಷಕವಾಗಿ ಸಿಂಗರಿಸಿ ಹರಾಜು ಕೂಗಿಸಿಕೊಳ್ಳುವ ಸ್ಥಿತಿಗೆ ತಲುಪಿದವು. ಈ ಸಾಂಸ್ಕೃತಿಕ ಯಾಜಮಾನ್ಯದ ಹಿಡಿತದಿಂದ ಪಾರಾಗಿ, ಮನುಷ್ಯ ಪರವಾಗಿ ಪ್ರಜಾಸತ್ತಾತ್ಮಕವಾಗಿ ತಮ್ಮನ್ನು ನಿರ್ವಚಿಸಿಕೊಳ್ಳಲು ಬಲುದೊಡ್ಡ ಸವಾಲನ್ನು ಸೃಜನಶೀಲತೆಯು ಎದುರಿಸಬೇಕಾಯಿತು. ಈ ಪರಿಸ್ಥಿತಿಯನ್ನು ಕನ್ನಡದ ಸಂಸ್ಕೃತಿ ಚಿಂತಕರಾದ ರಾಜೇಂದ್ರ ಚೆನ್ನಿಯವರು- ಸಾಹಿತ್ಯ ಕಲೆಗಳು ಇವೆಂಟ ಮ್ಯಾನೇಜ್‌ಮೆಂಟಿನ ಸ್ಥಿತಿಯನ್ನು ತಲುಪಿದವು ಎಂದು ಹೇಳುತ್ತಾರೆ.

ಕಳೆದ ಈ ಮೂರೂ ದಶಕಗಳಲ್ಲಿ ಅತ್ಯಂತ ತೀವ್ರವಾಗಿ ಬೆಳೆದದ್ದು ಮಾಧ್ಯಮ ಕ್ಷೇತ್ರ. ಆದರದು ಪ್ರಜಾತಂತ್ರ ವ್ಯವಸ್ಥೆಯ ಗುಣಗೌರವವನ್ನು ಸಂರಕ್ಷಿಸಬೇಕಾದ ಮಾಧ್ಯಮ ಜವಾಬ್ದಾರಿಯಾಗಿ ಬೆಳೆಯಲಿಲ್ಲ. ಬಂಡವಾಳೋದ್ಯಮಿಗಳು ಮತ್ತು ಅವರ ಒಂದು ವರ್ಗವಾದ ರಾಜಕಾರಣಿಗಳು ತಮ್ಮ ಹಿತರಕ್ಷಣೆ ಮತ್ತು ಲಾಭಕ್ಕಾಗಿ ಉಳಿಸಿಕೊಂಡಿರುವ ಉದ್ಯಮವಾಗಿ ಮಾಧ್ಯಮವನ್ನು ಪರಿವರ್ತಿಸಲಾಗಿತ್ತು. ಇದು ಸೃಜನಶೀಲತೆಗೆ ಹೊಸ ಬಿಕ್ಕಟ್ಟುಗಳನ್ನು ಸೃಷ್ಟಿಸಿತು. ಮಾಧ್ಯಮಗಳ ಸಾಮಾಜಿಕ ಬದ್ಧತೆ, ರಾಜಕೀಯ ಪರತೆಗಳು ಅವುಗಳ ಸ್ವರೂಪವನ್ನು ನಿರ್ಧರಿಸಿದ್ದವು. ಅಲ್ಲಿ ತಮ್ಮ ರಚನೆಗಳನ್ನು ದಾಖಲಿಸಲು ಈ ಎಲ್ಲ ನಿರ್ಬಂಧಗಳೂ ಅಗೋಚರ ಶಕ್ತಿಯಂತೆ ಕೆಲಸಮಾಡತೊಡಗಿದವು. ಬರಹಗಾರರು ರಾಜಿಯಾಗಬೇಕು. ತಾತ್ತ್ವಿಕವಾಗಿ ಹೊಂದಾಣಿಕೆಗೆ ಸಿದ್ಧವಾಗಬೇಕು. ಇಲ್ಲವೇ ಮೂಲೆಗುಂಪಾಗಬೇಕು ಎಂಬ ಒತ್ತಡ ಸೃಷ್ಟಿಯಾಯಿತು. ಈ ಸ್ಥಿತಿಯು ಬರಹಗಾರರು ತಮ್ಮ ಸಂವೇದನೆಗೆ ಪ್ರಾಮಾಣಿಕರಾಗಿರುವಲ್ಲಿ ಎದುರಾದ ಆತಂಕವಾಗಿತ್ತು. ಕ್ರೀಡಾಲೋಕದ ಮ್ಯಾಚ್ ಫಿಕ್ಸಿಂಗ್‌ಗಳು ಗೋಚರವಾಗುತ್ತಿದ್ದವು. ಆದರೆ ಕಲೆ-ಸಾಹಿತ್ಯ ಕ್ಷೇತ್ರದ ಫಿಕ್ಸಿಂಗ್‌ಗಳು ಅಗೋಚರವೂ ಅತಿ ಪ್ರಬಲವೂ ಆಗಿದ್ದವು. ಇದನ್ನು ಹೊರತುಪಡಿಸಿಯೂ, ಸಾಂಸ್ಕೃತಿಕವಾಗಿ ಈ ಕ್ಷುಲ್ಲಕತನಕ್ಕಿಳಿಯದೆ ಕನ್ನಡದ ಸಾಹಿತ್ಯಿಕ-ಸಾಂಸ್ಕೃತಿಕ ಶಕ್ತಿಯನ್ನು ಗುರುತಿಸಿದ

ಮಾಧ್ಯಮಗಳು ಬೆರಳೆಣಿಕೆಯಲ್ಲಾದರೂ ಇದ್ದವು. ಈ ಅರಕೆಯನ್ನು ತುಂಬಿಕೊಳ್ಳಲು ಮಾಧ್ಯಮವು ತನ್ನೊಳಗೆ ತಾನು ಕುಡಿಯೊಡೆದು ಹೊಸಮುಖಗಳನ್ನೂ ಪಡೆಯಿತು. ಮಾಧ್ಯಮಗಳ ಅವಕಾಶದ ಹೆಚ್ಚಳ, ಸಾಂಸ್ಕೃತಿಕ ವೇದಿಕೆಗಳ ಹೆಚ್ಚಳ, ಸಂಭಾವನೆ-ಪ್ರಶಸ್ತಿಗಳ ಹೆಚ್ಚಳ, ಸಾಹಿತ್ಯಿಕ ಸಂಘ ಸಂಸ್ಥೆಗಳಲ್ಲಿಯ ಪಾಲುದಾರಿಕೆಯ ಹೆಚ್ಚಳವು ಹಲವೊಮ್ಮೆ ಬರಹಗಾರರು ಅವಕಾಶವಾದಿಗಳಾಗಲು ಕಾರಣವಾಯಿತು. ಬರಹವನ್ನು ಅದನ್ನು ಹೊರತುಪಡಿಸಿದ ಇನ್ನಿತರ ಕಾರಣಗಳು ಮೌಲ್ಯ ಮಾಪನ ಮಾಡುವಂತಾಗಿದ್ದರೆ -ಅದರಿಂದ ಸಾಹಿತ್ಯ ತನ್ನ ಸತ್ವವನ್ನು ಕಳೆದುಕೊಳ್ಳುತ್ತದೆ. ಈ ಎಲ್ಲ ಅಗ್ನಿದಿವ್ಯಗಳನ್ನು ಈ ಕಾಲಾವಧಿಯು ಹಾದುಬಂದಿದೆ. ಇದೇ ಅವಧಿಯಲ್ಲಿ ಸೋಶಿಯಲ್ ಮೀಡಿಯಾಗಳ ವ್ಯಾಪ್ತಿಯು ತೀವ್ರವಾಗಿ ಹೆಚ್ಚಿತು. ಯಾವುದೇ ವಿಷಯ, ತಕ್ಷಣ ತಲುಪುವುದಕ್ಕೆ; ಅಭಿವ್ಯಕ್ತಿಗೆ ತತಕ್ಷಣ ವೇದಿಕೆಯನ್ನು ಒದಗಿಸುವುದು ನಡೆಯಿತು. ಇದರಿಂದ ಸಂವೇದನಾಶೀಲತೆ ಮತ್ತು ಅಭಿವ್ಯಕ್ತಿಗಳು ಹೊಸ ಅಡಚಣೆಯನ್ನೂ ಎದುರಿಸುವಂತೆ ಆಯಿತು. ಇದು ನೇತ್ಯಾತ್ಮಕವಾಗದಂತಹ ಎಚ್ಚರವನ್ನು ಬರಹಗಾರರು ಕಾದುಕೊಳ್ಳಬೇಕಾಯಿತು.

'ಜಾಗತೀಕರಣ ಕಾಲಘಟ್ಟ' ಎಂಬ ಅಧ್ಯಯನದ ವ್ಯಾಪ್ತಿಯ ಗುರುತು; ಕೇವಲ ಕಾಲಸೂಚಕ ಪದವಾಗಿಲ್ಲ. ಇದು ಅತ್ಯಂತ ಸಂಕೀರ್ಣ ಸಾಂಸ್ಕೃತಿಕ ಪರಿಸರ ಸೂಚಕ ಪದವೂ ಆಗಿದೆ. ಸೃಜನಶೀಲ ಅಭಿವ್ಯಕ್ತಿಯು ಪ್ರಭುತ್ವ ಪ್ರೇರಿತ ದಮನಕ್ಕೆ ಒಳಗಾಗುತ್ತಿರುವ ಮತ್ತು ಅದನ್ನು ಮೀರುತ್ತಿರುವ ಸಂಘರ್ಷದ ಕಾಲವೂ ಆಗಿದೆ. ಸೃಜನಶೀಲ ಅಭಿವ್ಯಕ್ತಿಯ ವಿರುದ್ಧದ ಅಸಹನೆಯು ಬರಹಗಾರರ ಹತ್ಯೆಯವರೆಗೂ ಮುಂದುವರಿದದ್ದನ್ನು ಉಪೇಕ್ಷಿಸುವುದು ಸಾಧ್ಯವಿಲ್ಲ. ವಿದ್ವಾಂಸರಾದ ಡಾ.ಎಂ.ಎಂ.ಕಲಬುರ್ಗಿಯವರ ಹತ್ಯೆ ಮತ್ತು ಪತ್ರಕರ್ತೆ ಗೌರೀಲಂಕೇಶರ ಹತ್ಯೆಯು- ಕರ್ನಾಟಕದಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯವು ಅನುಭವಿಸಿದ ತೀವ್ರತರ ಒತ್ತಡದ ನಿದರ್ಶನಗಳು. ಬರಹಗಾರರನ್ನು, ಬುದ್ಧಿಜೀವಿಗಳನ್ನು, ಪ್ರಗತಿಪರರನ್ನು ಅಮಾನವೀಯವಾಗಿ ನೋಡುವ, ಅಪಮಾನಿಸುವ ಕಾಲದಲ್ಲಿ -ಬರಹಗಾರರು, ಕಲಾವಿದರು ತಮ್ಮ ನೈತಿಕ ತ್ರಾಣದಿಂದ ಅಭಿವ್ಯಕ್ತಿಯನ್ನು ಮುನ್ನಡೆಸಿದ ಆಂತರಿಕ ದಂಗೆಯ ಅವಧಿಯಾಗಿಯೂ ಇದನ್ನು ನೋಡಬೇಕು.

ಈ ಮುಂತಾದ ಕಾರಣಗಳು ಪ್ರಸ್ತುತ ಅವಧಿಯ ಸಣ್ಣಕಥೆಗಳ ಸ್ವರೂಪ-ಸಾಧ್ಯತೆಯನ್ನು ನಿರ್ಣಯಿಸಿವೆ. ಹಲವು ಉಳಿಯ ಪೆಟ್ಟುಗಳಿಂದ ಶಿಲ್ಪ ಕಲಾಕೃತಿಯಾಗುವಂತೆ ಮಹತ್ವದ ರಚನೆಗಳು ರೂಪುಗೊಂಡಿವೆ. ಸಣ್ಣಕಥೆಯು ಸರಳ ಗದ್ಯ ಮತ್ತು ಸುಲಭವಾಗಿ

ಅರ್ಥವಾಗುವ ಸಂವಹನಗುಣವನ್ನು ಹೊಂದಿರುತ್ತದೆ -ಎಂಬ ಮೂಲ ಲಕ್ಷಣಕ್ಕಿಂತಲೂ ಬೇರೆಯಾಗಿ, ಈ ಅವಧಿಯ ರಚನೆಗಳು ಬಹು ಅರ್ಥ ಸಾಧ್ಯತೆಯ ಸೂಚಕಗಳಾಗಿವೆ. ಪದರರೂಪೀ ರಚನೆಗಳಾಗಿವೆ. ಕಥೆಯ ಓದುವಿಕೆ ಮತ್ತು ಕಥೆಯ ಅಧ್ಯಯನ ಎರಡೂ ಬೇರೆ ಬೇರೆ ಎಂಬುದನ್ನು ಮನವರಿಕೆ ಮಾಡುವಂತಿವೆ. ಸಾಹಿತ್ಯದ ಅಧ್ಯಯನದ ಕುರಿತ ಪೂರ್ವನಿಶ್ಚಿತ ದೃಷ್ಟಿಕೋನವನ್ನು ಬದಲಿಸುವಂತಿವೆ.

ಸಣ್ಣಕಥೆ ಎಂಬ ಪ್ರಕಾರವು ಸಾಹಿತ್ಯದ ಒಟ್ಟೂ ಪಲ್ಲಟದ ಒಂದು ಭಾಗವಾಗಿಯೇ ಇದೆಯಾದರೂ, ಉಳಿದ ಪ್ರಕಾರಗಳಲ್ಲಿ ಇಷ್ಟು ಖಚಿತವಾಗಿ ಗೋಚರವಾಗದ ಲಕ್ಷಣಗಳು ಸಣ್ಣಕಥೆಯಲ್ಲಿ ಕಾಣುತ್ತವೆ. ಒಂದೇ ಮರದ ಬೀಜ ಬೇರೆ ಬೇರೆ ಮಣ್ಣಿನ ಗುಣದಲ್ಲಿ ಬೇರೆ ಬೇರೆ ಸಸಿಯಾಗುವಂತೆ -ಈ ಅವಧಿಯ ಸಣ್ಣಕಥೆಗಳ ಮುಖ್ಯ ಚಹರೆ ಎಂದರೆ ಸಂಕರಶೀಲತೆ. ದಲಿತ-ಬಂಡಾಯ ಸಾಹಿತ್ಯದ ಅವಧಿಯಲ್ಲಿ ಕನ್ನಡವನ್ನು ಸಶಕ್ತಗೊಳಿಸಿದ ಸಂವೇದನೆಗಳನ್ನು ಖಚಿತವಾಗಿ ಮತ್ತು ಸ್ಪಷ್ಟವಾಗಿ ಪ್ರತ್ಯೇಕಗೊಳಿಸಬಹುದಿತ್ತು. ಆದರೆ ಈಗ ಈ ಧಾರೆಗಳು ಒಂದರೊಡನೊಂದು ಬೆರೆತು ಇನ್ನೊಂದೇ ಆಗಿ ಮೈದುಂಬಿಕೊಂಡಿವೆ. ನವೋದಯ ಕಾಲದಿಂದಲೂ ದಮನಿತ ಸಂವೇದನೆಗಳಿಗೆ ಬರಹಗಾರರು ಅತ್ಯಂತ ಪ್ರಾಮಾಣಿಕವಾಗಿ ಸ್ಪಂದಿಸಿದ್ದಾರೆ. ಕುವೆಂಪು ಅವರ ಕರಿಸಿದ್ಧ, ಕಾರಂತರ ಚೋಮ..... ಹೀಗೆ ಆ ಬೆಳಕುಗಳಿವೆ. ಇದು ಅಂತಃಕರಣ ಪೂರಿತ ಸ್ಪರ್ಶ. ದೇವನೂರರ ಅಮಾಸನಿಗೆ, ಗುರುಸಿದ್ದಾವನಿಗೆ, ಶಿವುಗೆ ಬಂದಾಗ ಅದು ಆ ಮಣ್ಣು ಮೊಳಕೆಬಿಚ್ಚಿದ ಬೆಳಕು. ಆದರೀಗಿದು ಈ ಎರಡನ್ನೂ ಅರಗಿಸಿಕೊಂಡು, ತಾನಿಲ್ಲವಾಗಿ, ತಾನು ಆ ಲೋಕವೇ ಆಗಿ ಕರಗಿ ಮರು ಎರಕಗೊಳ್ಳುವ ಬಗೆ, ನನ್ನ ಕಣ್ಣಿನಿಂದ ಲೋಕಕಾಣುವುದಕ್ಕಿಂತ ಬೇರೆಯಾಗಿ ಆ ಕಣ್ಣುಗಳಿಂದ, ಆ ಬೆರೆಕೆಯಿಂದ ಬದುಕನ್ನು ಕಾಣುವ ಕಾಣಿಸುವ ಕಠಿಣತರ ಕರ್ಮ. ಯಶಸ್ವೀ ಕಥೆಗಳಲ್ಲಿ ಅಂತಹ ಸಂಕರಶೀಲತೆಯಿದೆ. ಬರಹಗಾರರ ಲೋಕ ಮೀಮಾಂಸೆಯಲ್ಲಿ ರೂಪುಗೊಂಡ ಈ ಸಂಕರಶೀಲ ಗುಣಧರ್ಮವು ಬರಹದ ಸ್ವರೂಪದಲ್ಲಿಯೂ ಹೊರಹೊಮ್ಮಿದೆ. ಕಥೆಗಳಲ್ಲಿ ಸಣ್ಣ-ಅತಿಸಣ್ಣ ಕಥನಗಳು, ಬಾಹ್ಯ ಲಕ್ಷಣವಾಗಿದ್ದ ಕಥೆ-ಕಾವ್ಯ, ಗದ್ಯ-ಪದ್ಯ ಎಂಬೆಲ್ಲ ಗಡಿಗೆರೆಗಳನ್ನು ಉಲ್ಲಂಘಿಸಿವೆ. ಪುಟ್ಟ ಕಥೆಗಳಿವು.

೧

ದೇವರು ಶ್ರೀಮಂತ ಭೂಮಿಯನ್ನು ಸೃಷ್ಟಿಸಿದ
ಮನುಷ್ಯ, ದೇವರಿಗೇ ಸವಾಲು ಹಾಕುವವನಂತೆ
ಬಡವನನ್ನು ಸೃಷ್ಟಿಸಿದ.

೨

> ಗೆಡ್ಡೆ ಗೆಣಸು ಅಗೆವ ಕಾಲದಲ್ಲಿ
> ಯಾರೂ ಬಡವರಿರಲಿಲ್ಲ.
> ಯಾವಾಗ ಚಿನ್ನ ಅಗೆಯಲಾರಂಭಿಸಿದರೋ
> ಮನುಷ್ಯರೊಳಗೆ ಬಡವ ಹುಟ್ಟಿದ.

ಬಿ.ಎಂ.ಬಶೀರ ಅವರ 'ದಿನಕ್ಕೊಂದು ಕಥೆ' ಸರಣಿಯ ಕಥೆಗಳಿವು. ಕಥೆ ಎಂದು ಹೇಳದಿದ್ದರೆ ಕವಿತೆಯಂತೆಯೂ ತಿಳಿವ ರೂಪಗಳು. ಇಂತಹ ಸಂಕ್ಷಿಪ್ತ – ತೀವ್ರ ಕಥನಗಾರಿಕೆಯಲ್ಲಿ 'ಮಾಂಟೋ ಕಥೆಗಳು'. 'ಸೂಫಿ ಕಥೆಗಳು' ನೆನಪಾಗುತ್ತವೆ. ಕನ್ನಡದಲ್ಲಿದು ಇತ್ತೀಚಿನ ಬೆಳವಣಿಗೆ. ಬಹುಶಃ ಭಾರತ–ಪಾಕ್ ವಿಭಜನೆಯ ಸಂಕಟಕ್ಕೆ ದನಿಯಾದ ಮಾಂಟೋ ಕಥೆಗಳ ಮಾದರಿಯಲ್ಲಿ, ಇಂದಿನ ಜಾಗತೀಕರಣದ ಹಿಂಸಾದಳ್ಳುರಿಯ ಕನ್ನಡ ಕಥೆಗಳು ಚಲಿಸುತ್ತಿರುವುದು ಆಕಸ್ಮಿಕವೇನೂ ಆಗಿರಲಾರದು.

ಕಥೆಯೆಂಬುದು ಕಲೆಯೆಂಬುದು ಸಮಕಾಲೀನತೆಯ ಕಾವಿನಲ್ಲಿಯೇ ಕಣ್ದೆರೆಯುವ ಪ್ರಕ್ರಿಯೆ. ಪ್ರಪಂಚದ ಯಾವ ಭಾಷೆಯ ಯಾವ ಕಾಲದ ಸಾಹಿತ್ಯವೂ ತನ್ನ ಸಮಕಾಲೀನತೆಯನ್ನು ತ್ಯಜಿಸುವುದು ಸಾಧ್ಯವಿಲ್ಲ. ಕೆಲವೊಮ್ಮೆ ನಿರೂಪಣಾ ಕ್ರಮ ಸಮಕಾಲೀನತೆಯನ್ನು ಅಂತರ್ಗತಗೊಳಿಸಿಕೊಂಡಿರಬಹುದು ಅಥವಾ ಬಹಿರ್ಮುಖಗೊಳಿಸಿಕೊಂಡಿರಬಹುದು. ಕವಿ ಪುರಾಣದ ಕಥೆ ಹೇಳುವಾಗಲೂ ಅದನ್ನು ಸಮಕಾಲೀನಗೊಳಿಸಿಕೊಳ್ಳದಿರಲಾರ. ಕೈಲಾಸದ ಕಥೆ ಹೇಳುವಾಗಲೂ ಅದನ್ನು ಲೌಕಿಕ ಕಣ್ಣುಗಳಿಂದಲೇ ಕಲ್ಪಿಸಿಕೊಂಡಿದ್ದನ್ನು ಮರೆಯದಿರಲಾರ. ಆಧುನಿಕ ಸಾಹಿತ್ಯವಂತೂ ತುಂಬ ಸ್ಪಷ್ಟವಾದ ನಮ್ಮ ಸಾಮಾಜಿಕ ಚರಿತ್ರೆಯ ಭಾಗಗಳೇ. ಆದರೆ, ಈ ಅವಧಿಯ ಕನ್ನಡ ಕಥಾ ಸಾಹಿತ್ಯವು ವರ್ತಮಾನವನ್ನು ತನ್ನೆಲ್ಲ ತ್ರಾಣದೊಂದಿಗೆ ಅಪ್ಪಿಕೊಂಡಿದೆ. ತನ್ನ ಒಟ್ಟೂ ಶಕ್ತಿಯಿಂದ ಈ ಕದಲದ ಬಂಡೆಯನ್ನು ಕದಲಿಸಬಲ್ಲೆ ಎಂಬ ಧೈರ್ಯದಲ್ಲಿ ಹೀಗೆ ಸಮಕಾಲೀನಗೊಳ್ಳುವುದು ಎಂದರೆ ಪರಂಪರೆಯನ್ನು ಅದರೊಳಗೆ ಇಟ್ಟು ನೇಯುವುದು ಎಂದೇ ಅರ್ಥ. ಒಂದು ಉದಾಹರಣೆ–

> ಬೆಂಕಿಗೆ ಹಾರಿದ ಸೀತೆ ಹೇಗೆ ಬದುಕಿದಳು? ಮಗ ಕೇಳಿದ.
> ಪ್ರತಿದಿನ ನಾನು ಬದುಕುತ್ತಿಲ್ಲವೆ ಮಗಾ? ತಾಯಿ ಉತ್ತರಿಸಿದಳು.
> (ಬಿ.ಎಂ.ಬಶೀರ. ಕಥೆ)

ಈ ವರ್ತಮಾನದ ಮುಖಾಮುಖಿಯಲ್ಲಿಯೇ ಸೃಜನಶೀಲತೆಯ ಅತ್ಯಂತಿಕ ರೂಪ ಹೊಮ್ಮುವುದನ್ನೂ ಕಾಣುತ್ತೇವೆ.

ಈ ಅವಧಿಯ ಕಥೆಗಳನ್ನು ಮುಕ್ತ ಬಂಡವಾಳವಾದೀ ಸ್ಥಿತ್ಯಂತರದ ದಾಖಲೆಗಳು ಎಂದು ಬೇಕಾದರೂ ಗುರುತಿಸಬಹುದು. ಹಣದ ಪ್ರವಾಹ ಮನುಷ್ಯ ಸಂಬಂಧಗಳ ಮೇಲೆ ನಡೆಯಿಸಿದ ದಾಳಿ ಅದೆಷ್ಟು ಕ್ರೂರವಾಗಿತ್ತು ಎನ್ನುವುದನ್ನು – ಮನುಷ್ಯ ಸಂಬಂಧಗಳ ಹಲವು ಆಸ್ಪದಗಳಲ್ಲಿಟ್ಟು ಕಥೆಗಳು ವಿಶ್ಲೇಷಿಸುತ್ತವೆ. ವೈಯಕ್ತಿಕ, ಕೌಟುಂಬಿಕ, ಸಾಮಾಜಿಕ ಸಂಬಂಧಗಳಲ್ಲಿ ಬದಲಾವಣೆ ಉಂಟಾಗಿದೆ ಎನ್ನುವುದು ಮುಖ್ಯವಲ್ಲ. ಬದಲಾವಣೆಯು ಕಾಲಧರ್ಮ. ಆದರೆ ಈ ಬದಲಾವಣೆಯು ಮನುಷ್ಯ ವಿವೇಕದ ಪ್ರಜ್ಞಾಸ್ತರವನ್ನೇ ಹಾನಿಗೊಳಿಸುತ್ತಿದೆ. ಇದು ವೈರಸ್ ದಾಳಿಗಿಂತಲೂ ತೀವ್ರತರವಾಗಿದೆ. ಸಂಬಂಧಗಳಲ್ಲಿ ಒಳ–ಹೊರ ಅಂತರವು ಭಯಗೊಳಿಸುವಷ್ಟು ತೀಕ್ಷ್ಣವಾಗಿದೆ. ಇದು ಯಾವುದೇ ಸಮಾಜಕ್ಕೆ ಒಳಿತಾದುದಲ್ಲ ಎಂಬ ಕಾಳಜಿಯನ್ನು ಕಾಣುತ್ತೇವೆ.

ಈ ಅವಧಿಯ ಕರ್ನಾಟಕದ ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ಲೋಕದಲ್ಲಿ ಸಂಭವಿಸಿದ ಪಲ್ಲಟಗಳ ಚರಿತ್ರೆಯನ್ನು ಕಥೆಗಳ ತಾತ್ವಿಕ ಜಿಜ್ಞಾಸೆಯ ಮೂಲಕವೇ ಮರುಸಂಕಥಿಸಿಕೊಳ್ಳುವಷ್ಟು ಸಮಕಾಲೀನವಾದ ಕಥೆಗಳನ್ನು ಕಾಣುತ್ತೇವೆ. ಇವುಗಳನ್ನು ಗಣಿಗಾರಿಕೆಯ ಕಥನಗಳು, ಕೋಮುವಾದದ ಕಥನಗಳು, ಶಿಕ್ಷಣ ವ್ಯವಸ್ಥೆಯ ವಿಶ್ಲೇಷಣೆಯ ಕಥನಗಳು, ರಾಜಕೀಯ ಜಿಜ್ಞಾಸೆಯ ಕಥನಗಳು.... ಹೀಗೆ ಎಷ್ಟೆಲ್ಲ ವಿಂಗಡನೆಗಳಲ್ಲಿ ಇಟ್ಟು ವಿಶ್ಲೇಷಿಸಬಹುದಾಗಿದೆ. ಆದರೆ ಒಟ್ಟಾರೆ ಅರ್ಥದಲ್ಲಿವು ವರ್ತಮಾನದ ಅನ್ಯಾಯವನ್ನು ವಿರೋಧಿಸುವ ಪ್ರತಿರೋಧದ ಕಥೆಗಳಾಗಿಯೇ ತಮ್ಮನ್ನು ತಾವು ಪ್ರತಿಪಾದಿಸಿಕೊಳ್ಳುತ್ತವೆ. ಸಾಹಿತ್ಯಕ್ಕೆ ಸಾಮಾಜಿಕ ಜವಾಬ್ದಾರಿಯ ಅಗತ್ಯವಿದೆಯೇ? ಬೌದ್ಧಿಕತೆ ಭಾರವಾಗುವುದಿಲ್ಲವೇ? ಕಥೆಯೆಂಬುದು ಸೃಜನಶೀಲತೆ ಎಂಬುದು ಮನೋಲ್ಲಾಸವನ್ನು ಕೊಡುವ ಪರಿಕರವಲ್ಲವೇ? ಎಂಬಿತ್ಯಾದಿ ಸಾಹಿತ್ಯದ ಬದ್ಧತೆಯ ಪ್ರಶ್ನೆಯನ್ನು ಲೇವಡಿ ಮಾಡುವಂತೆ, ಮೀಮಾಂಸೆಯ ವಿಮರ್ಶೆಯ ಹಂಗುನೂಲನ್ನು ಹರಿದುಕೊಂಡಂತೆ ಈ ಕಾಲಘಟ್ಟದ ಕಥೆಗಳ ಗಟ್ಟಿತನವಿದೆ. ಸಣ್ಣಕಥೆಗಳ ಇತಿಹಾಸವನ್ನು ಗಮನಿಸಿದರೆ ಈ ಬದಲಾವಣೆಯು ಅತ್ಯಂತ ಸ್ಪಷ್ಟವಾಗಿಯೇ ಕಾಣುತ್ತದೆ. ಅಚ್ಚರಿಯ ಸಂಗತಿಯೆಂದರೆ, ಈ ಕಥೆಗಳ ಓದು ಪ್ರಸ್ತುತ ಸಮಾಜದ ಸೈದ್ಧಾಂತಿಕ ಬಿಕ್ಕಟ್ಟುಗಳಿಗೆ, ರೈತರ ಆತ್ಮಹತ್ಯೆ, ನಿರುದ್ಯೋಗ, ಹಿಂಸೆಯ ಉನ್ಮಾದಗಳಿಗೆ ಖಚಿತವಾದ

ವಿವರಣೆಯನ್ನು ನೀಡುವಂತಿವೆ. ಕಾರಣವನ್ನು ಶೋಧಿಸುತ್ತವೆ. ಪರಿಣಾಮವನ್ನು ಮನಸ್ಸಿಗೆ ಮುಟ್ಟಿಸುತ್ತವೆ.

ಈ ಕಥೆಗಳ ಅತ್ಯಂತ ಮಹತ್ವದ ಇನ್ನೊಂದು ಲಕ್ಷಣವೆಂದರೆ –ಇವು ಕೋಮುವಾದಿ ಹಿಂಸೆಯನ್ನು, ಜನಾಂಗೀಯವಾದವನ್ನು, ಸರ್ವಾಧಿಕಾರತ್ವವನ್ನು ತೀಕ್ಷ್ಣವಾಗಿ ವಿರೋಧಿಸುವ ಕಥೆಗಳು.ಇದುವರೆಗೂ ಎಡಪಂಥೀಯ ವಿಚಾರವಾದಿಗಳು ಎಂದು ಕರೆಯಿಸಿಕೊಂಡಿರುವ ಕಥೆಗಾರರ ಕಥೆಗಳಲ್ಲಿ ಮಾತ್ರವಲ್ಲದೆ, ಬಹುತೇಕ ಎಲ್ಲ ಬರಹಗಾರರೂ, ಬರಹಗಾರರಿಗೆ ಪಂಥಗಳ ಹಂಗಿಲ್ಲ –ಎಂದು ಹೇಳುತ್ತಿದ್ದವರೂ ಅತ್ಯಂತ ಬದ್ಧತೆಯಿಂದ, ಜೀವಪರ ಶ್ರದ್ಧೆಯಿಂದ ಕೋಮುಹಿಂಸೆಯ, ಮತೀಯವಾದಿ ಉನ್ಮಾದದ ವಿರುದ್ಧ ಕಥೆ ಬರೆದರು.ಇದು ಕನ್ನಡದ ಪ್ರಜ್ಞಾವಂತಿಕೆಯ ಗೆಲುವೂ ಹೌದು.ಭೈರಪ್ಪನವರ ಆವರಣ, ಕವಲುಗಳಂತಹ ಕಾದಂಬರಿಗಳು ತುಂಬ ಕಡಿಮೆ ಎನ್ನುವುದೇ ಕನ್ನಡ ಬರವಣಿಗೆಯ ತೃಪ್ತಿಯ ಸಂಗತಿಯಾಗಿದೆ. ಈ ಕಥೆಗಳ ವಿಶಿಷ್ಟತೆ ಎಂದರೆ, ಇವು ಸಮಾಜದ ಅಂಚಿನ ದುರ್ಬಲ ಪಾತ್ರಗಳ ಮೂಲಕ ಈ ನೆತ್ತಿಸುಡುವ ಬೆಂಕಿಗೆ ನೀರು ಹನಿಸುತ್ತವೆ. ಅದರಲ್ಲೂ ಈ ಪಾತ್ರಗಳು ಸಾಮಾನ್ಯವಾಗಿ ಸ್ತ್ರೀಯರು. ಈ ಲೋಕವನ್ನು ತಾಯಿಕೋಳಿಯಂತೆ ಕಾಪಿಡುವ ತಾಯ್ತನದ ಸೈರಣೆಯ ಅಗತ್ಯದ ಪ್ರತಿಪಾದನೆ ಇಲ್ಲಿದೆ. ಮನುಷ್ಯ ಸಂಬಂಧಗಳಿಗೆ ಜಾತಿಯಿಲ್ಲ, ಧರ್ಮವಿಲ್ಲ, ಲಿಂಗವಿಲ್ಲ, ವರ್ಗವಿಲ್ಲ, ಭಾಷೆಯಿಲ್ಲ, ದೇಶವಿಲ್ಲ ಅದೊಂದು ಮನುಷ್ಯತ್ವದ ಅತೀತ ಸ್ಥಿತಿ.ಕುವೆಂಪು ಹೇಳಿದ ವಿಶ್ವಮಾನವ ಪ್ರಜ್ಞೆ ಎಂಬ ನಿಲುವನ್ನು ದಣಿವಿಲ್ಲದ ಸಂಯಮದಲ್ಲಿ ಕಥೆಗಾರರು ಕೊಟ್ಟಿದ್ದಾರೆ. ಈ ಕಥೆಗಳು ಎಲ್ಲೂ ಉದ್ರೇಕಕಾರಿ ಸ್ಥಿತಿಯ ನಿರೂಪಣೆಗೆ ಹೊರಳುವುದಿಲ್ಲ. ವೈಭವೀಕರಣದಿಂದ ಸಾಕಷ್ಟು ಅಂತರವನ್ನು ಕಾಪಾಡಿಕೊಳ್ಳುತ್ತವೆ. ಹೊಸಗನ್ನಡದ ಶ್ರೇಷ್ಠ ಕಥೆಗಳು ಎಂದು ವಿಮರ್ಶೆಯು ಪರಿಗಣಿಸಿರುವ ಮಹತ್ವದ ಕಥೆಗಳೊಂದಿಗೇ ಇಂದಿನ ಕಥೆಗಳನ್ನು ತುಲನೆ ಮಾಡಿದರೆ, ಕನ್ನಡದ ಕಥನಗಾರಿಕೆ ಮಾಗಿದ, ಕಸಬುಗಾರಿಕೆಯ ಕುಶಲತೆಯು ಹೊರಹೊಮ್ಮುವ ಎಲ್ಲ ಪ್ರಯತ್ನದಲ್ಲಿರುವುದನ್ನು ಕಾಣುತ್ತವೆ. ಕೆಡುಕನ್ನು ಒಳಿತಿನಿಂದ, ಒಳಿತಿನಿಂದ ಮಾತ್ರ ಎದುರಿಸುವ ತಾಕತ್ತಿದು. ಒಂದು ಪುಟ್ಟ ಕಥೆ ನೋಡುವ. ಕಥೆಯ ಹೆಸರು ಸರ್ವಾಧಿಕಾರಿ.

ಗುರುಗಳೇ, ಈ ದೇಶ ಸರ್ವಾಧಿಕಾರಿಯ ಆಳ್ವಿಕೆಯಲ್ಲಿದೆ. ಆತಂಕದ ವಿಷಯವೆಂದರೆ, ಕವಿಗಳು, ಲೇಖಕರು, ಕಲಾವಿದರು ಜೈಲು ಸೇರುತ್ತಿದ್ದಾರೆ –ಎಂದ ಶಿಷ್ಯ. 'ಹಾಗಾದರೆ ಆತಂಕ ಪಡಬೇಕಿಲ್ಲ. ಸರ್ವಾಧಿಕಾರಿಯ ನೆಲದಲ್ಲಿ ಕವಿಗಳು ಸುಖವಾಗಿದ್ದರೆ

ಅದು ಆತಂಕದ ವಿಷಯ' –ಎಂದ ಗುರು. (ಬಿ.ಎಂ.ಬಶೀರ್) ಈ ಕಥೆಯೇ ಇಂದಿನ ಕಥೆಗಳ ವಿಶಿಷ್ಟತೆಯ ಧ್ವನಿಯಾಗಿದೆ.

**೬.೨. ಅಧ್ಯಯನದ ಸಾಧ್ಯತೆಗಳು:**

ಸಂಶೋಧನೆ ಎಂಬುದು ನಿರಂತರ ಪ್ರಕ್ರಿಯೆ. ಈ ಕ್ಷೇತ್ರದ ಹರವು ತುಂಬಾ ವಿಸ್ತಾರವಾದುದು. ಅದಕ್ಕಾಗಿಯೇ ಡಾ.ಎಂ.ಎಂ.ಕಲಬುರ್ಗಿಯವರು 'ಸಂಶೋಧನೆಯೆಂಬುದು ಅಲ್ಪವಿರಾಮ, ಅರ್ಧವಿರಾಮದೊಂದಿಗೆ ಪೂರ್ಣವಿರಾಮದ ಕಡೆಗೆ ಸಾಗುವ ಪ್ರಕ್ರಿಯೆ' ಎಂದು ಸಂಶೋಧನೆಯನ್ನು ವ್ಯಾಖ್ಯಾನಿಸುತ್ತಾರೆ. ಪ್ರಸ್ತುತ "ಜಾಗತೀಕರಣ ಸಂದರ್ಭದ ಕನ್ನಡ ಸಣ್ಣಕಥೆಗಳ ಮುಖ್ಯ ಪ್ರವೃತ್ತಿ" ವಿಷಯದಲ್ಲಿ ಸಂಶೋಧನೆ ಕೈಗೊಂಡು ವಿಶ್ಲೇಷಣಾತ್ಮಕ ಅಧ್ಯಯನ ಮಾಡಿದ್ದೇನೆ. ಬಹುಮುಖ್ಯವಾಗಿ ಜಾಗತೀಕರಣದ ಸಂದರ್ಭದಲ್ಲಿ ರಚನೆಗೊಂಡ ಹೊಸತಲೆಮಾರಿನ ಕನ್ನಡ ಸಣ್ಣಕಥೆಗಳನ್ನು ಅಧ್ಯಯನಕ್ಕೊಳಪಡಿಸಿದ್ದೇನೆ. ಈ ಕುರಿತಾಗಿರುವ ಕನ್ನಡ ಸಣ್ಣಕಥೆಗಳನ್ನು ಇನ್ನಷ್ಟು ಅಂತರ್‌ಶಿಸ್ತೀಯ ಅಧ್ಯಯನಕ್ಕೆ ಒಳಪಡಿಸಿದರೆ ಇನ್ನೂ ಹಲವಾರು ಅಧ್ಯಯನ ಸಾಧ್ಯತೆಗಳು ವಿಷಯದ ಒಡಲಾಳದಲ್ಲಿರುವುದು ಕಂಡು ಬರುತ್ತದೆ.

ಕನ್ನಡದಲ್ಲಿ ಕಥಾ ಸಾಹಿತ್ಯದ ಬಗ್ಗೆ ಅನೇಕ ಅಧ್ಯಯನಗಳು ನಡೆದಿವೆ. ಪ್ರಮುಖವಾಗಿ ನವೋದಯ, ಪ್ರಗತಿಶೀಲ, ನವ್ಯ, ದಲಿತ–ಬಂಡಾಯಗಳಲ್ಲಿನ ಕಥೆಗಳ ಬಹುತೇಕ ಬಹುಮುಖಿ ಅಧ್ಯಯನ ನಡೆದಿದೆ. ಅದರಾಚೆಗಿನ ವಿಚಾರಗಳನ್ನು ಇತ್ತೀಚಿನ ಕಥೆಗಳು ಬಿಂಬಿಸುವುದರಿಂದ ಜಾಗತೀಕರಣ ಸಂದರ್ಭದಲ್ಲಿನ ಕನ್ನಡ ಸಣ್ಣಕಥೆಗಳ ಕುರಿತು ಪರಾಮರ್ಶಿಸುವ ಅವಶ್ಯಕತೆಯಿದೆ. ಇಲ್ಲಿ ಬರುವ ಕಥೆಗಳಲ್ಲಿನ ವಿಷಯಾಧಾರಿತ ಚರ್ಚೆಗಳು ಇನ್ನೂ ಅಧ್ಯಯನ ಬಯಸಿದ ಅನೇಕ ಆಯಾಮಗಳಿರುವುದನ್ನು ಗಮನಿಸಬಹುದು. ಇಲ್ಲಿ ಪ್ರಮುಖವಾದ ಕೆಲವು ಸಂಗತಿಗಳನ್ನು ಪ್ರಸ್ತಾಪಿಸುತ್ತಿದ್ದೇನೆ.

- ಜಾಗತೀಕರಣದ ಸಣ್ಣಕಥೆಗಳಲ್ಲಿ ವರ್ಗ–ಸಂಘರ್ಷ

ಮಾನವನ ಅತಿಯಾದ ಸ್ವಾರ್ಥ ಹಿತಾಸಕ್ತಿ ಸಮಾಜದಲ್ಲಿ ಕ್ರೌರ್ಯ, ಹಿಂಸೆಗಳನ್ನು ಪ್ರತಿನಿಧಿಸುತ್ತಿದೆ. ಬಂಡವಾಳವಾದ, ಸಾಮ್ರಾಜ್ಯಶಾಹಿ,

ನವವಸಾಹತೀಕರಣ ಮೊದಲಾದವುಗಳಿಂದಾಗಿ ಮಾನವ ವಿಕೃತ ಮನೋಭಾವನೆಗೆ ಒಳಗಾಗಿದ್ದಾನೆ. ತನ್ನ ಸ್ವಾರ್ಥಸಾಧನೆಗಾಗಿ ಧರ್ಮ, ಸಂಪ್ರದಾಯಗಳ ಮುಖವಾಡ ಧರಿಸಿ ಸಮಾಜದಲ್ಲಿನ ಶಾಂತಿಯನ್ನು ಕದಡುವ ಕೆಲಸದಲ್ಲಿ ತೊಡಗಿದ್ದಾನೆ. ಇಂತಹ ಹಲವಾರು ದೃಶ್ಯಗಳು ಇತ್ತೀಚಿನ ಕನ್ನಡ ಸಣ್ಣಕಥೆಗಳಲ್ಲಿ ಹೇರಳವಾಗಿ ಕಾಣಿಸುತ್ತವೆ. ಎಲ್ಲ ವಿಧದ ಹಲ್ಲೆಗಳು ಬಡವರನ್ನು ಇನ್ನಷ್ಟು ಬಡವರನ್ನಾಗಿಸುತ್ತಿವೆ. ವರ್ತಮಾನದ ಭಾರತವು ಭಯಾನಕ ಆರ್ಥಿಕ ಅಸಮಾನತೆಯಿಂದ ಬಳಲುತ್ತಿದೆ. ಜಗತ್ತಿನ ಅತಿಹೆಚ್ಚು ಯುವಶಕ್ತಿಯನ್ನು ಹೊಂದಿದ ದೇಶವು ನಿರುದ್ಯೋಗ, ಆರ್ಥಿಕ ಅವನತಿಯಿಂದ ನೆಲಕಚ್ಚುತ್ತಿದೆ. ಇದೇ ಹಂತದಲ್ಲಿ ದೇಶದಲ್ಲಿ ಮಿಲೇನಿಯರ್, ಬಿಲೇನಿಯರ್‌ಗಳ ಸಂಖ್ಯೆ ಹೆಚ್ಚುತ್ತಿದೆ. ಇದು ಭಾರತದ ಆರ್ಥಿಕ ಭೂಪಟವಾಗಿದೆ. ಇದು ಸಣ್ಣಕಥೆಗಳಲ್ಲಿ ಆಸ್ಪದ ಪಡೆದ ವಿಧಾನವನ್ನು ಅಧ್ಯಯಿನಿಸಬಹುದಾಗಿದೆ. ವಿಸ್ತರಣೆಗೆ ಅಗತ್ಯವೆನಿಸಿದರೆ ದಲಿತ-ಬಂಡಾಯ ಕಾಲದ ಕಥೆಗಳ ವರ್ಗಸಂಘರ್ಷದೊಂದಿಗೆ ತೌಲನಿಕವಾಗಿ ನೋಡಬಹುದಾಗಿದೆ.

- ಜಾಗತೀಕರಣ ಸಂದರ್ಭದ ಸಣ್ಣಕಥೆಗಳಲ್ಲಿ ಮಾನವ ನಿರ್ಮಿತ ದುರಂತಗಳು.

೧೯೯೨ರಲ್ಲಿ ನಡೆದ ಗ್ಯಾಟ್ ಒಪ್ಪಂದವು ಸಾಮ್ರಾಜ್ಯಶಾಹಿಗಳ ಅಧಿಪತ್ಯಕ್ಕೆ ಮರುಜೀವ ನೀಡಿತು. ಬಡರಾಷ್ಟ್ರಗಳನ್ನು ತಮ್ಮ ತೆಕ್ಕೆಗೆ ತೆಗೆದುಕೊಳ್ಳಲು ಬಯಸುತ್ತಿದ್ದ ಶ್ರೀಮಂತರಾಷ್ಟ್ರಗಳಿಗೆ ಅಲ್ಲಿನ ಬಡತನ ಅಸ್ತ್ರವಾಗಿ ಬಳಕೆಯಾಯಿತು. ತೃತೀಯ ರಂಗ ದೇಶಗಳಲ್ಲಿ ಬಡತನ, ನಿರುದ್ಯೋಗದಂತಹ ಸಮಸ್ಯೆಗಳು ಇದ್ದರೂ ಸ್ವತಂತ್ರ್ಯವಾಗಿ ಬದುಕನ್ನು ಕಟ್ಟಿಕೊಂಡಿದ್ದವು. ಉದಾರೀಕರಣದ ನೆಪ ಒಡ್ಡಿ ಧನಸಹಾಯ ನೀಡಲು ಬಂದ ಶ್ರೀಮಂತ ರಾಷ್ಟ್ರಗಳು ಒಂದು ದಶಕ ಕಳೆಯುವಷ್ಟೊತ್ತಿಗೆ ತೃತೀಯರಂಗ ರಾಷ್ಟ್ರಗಳಲ್ಲಿ ಬಡತನ, ನಿರುದ್ಯೋಗದ ಜೊತೆಗೆ ಹಿಂಸಾಚಾರ, ಕೋಮುವಾದ, ನೈಸರ್ಗಿಕ ಸಂಪತ್ತಿನ ಕೊರತೆ, ಅನಾರೋಗ್ಯ, ಅಸಾಯಕತೆ, ಮಾನವ ನಿರ್ಮಿತ ಬರಗಾಲ ಮೊದಲಾದ ಸಮಸ್ಯೆಗಳು ಹರಡುವಂತೆ ಮಾಡಿವೆ. ಇಂತಹ ಚಿತ್ರಣಗಳನ್ನು ಇತ್ತೀಚಿನ ಸಣ್ಣಕಥೆಗಳು ಬಹಳ ಮಾರ್ಮಿಕವಾಗಿ ಚಿತ್ರಿಸುತ್ತವೆ. ಪ್ರಾಕೃತಿಕ ದುರಂತಗಳೆಂದು ಇಂದು ಅರ್ಥೈಸಲ್ಪಡುವ ಪ್ರವಾಹ, ಬರಗಾಲ, ಚಂಡಮಾರುತಗಳ ಕಾರಣಗಳು ನಮ್ಮ ತಪ್ಪು ಅಭಿವೃದ್ಧಿಯ ಸಂಕಥನಗಳಲ್ಲಿವೆ ಎಂಬುದನ್ನು ಕಥೆಗಳ ಒಡಲೊಳಗಿಂದ ಕಾಣಿಸುವ ಅಧ್ಯಯನಕ್ಕೆ ಅವಕಾಶವಿದೆ.

• ಜಾಗತೀಕರಣ ಸಂದರ್ಭದಲ್ಲಿನ ಸಣ್ಣಕಥೆಗಳಲ್ಲಿ ಹೆಣ್ಣು ನೋಟಕ್ರಮ.

ಈ ಲೋಕವನ್ನು ಹೆಣ್ಣಿನ ಸಂವೇದನೆಯಿಂದ ನೋಡುವುದು ಸಾಧ್ಯವಾಗಿಲ್ಲ. ಅದು ಸಾಧ್ಯವಾಗಬೇಕು. ಮನಸ್ಸು ಹೆಣ್ಣಾಗಬೇಕು ಎಂಬ ತಿಳಿವು ಮೂಡಿದ ಕಾಲವಿದು.ಕಥೆಗಳು ಸ್ತ್ರೀ ನೋಟಕ್ರಮವನ್ನು ದಾಖಲಿಸಿದ ವಿಧಾನ, ಸಂದರ್ಭ, ಕಾರಣ ಮತ್ತು ಪರಿಣಾಮಗಳನ್ನು ಕಾಣುವ-ಕಾಣಿಸುವ ಅಧ್ಯಯನ ಸಾಧ್ಯ.

• ಆಧುನಿಕೋತ್ತರ ಕನ್ನಡ ಸಣ್ಣಕಥೆಗಳಲ್ಲಿ ಮತೀಯವಾದ ಮತ್ತು ಕೋಮುವಾದದ ಅಧ್ಯಯನ

• ಮನುಷ್ಯ ಸಂಬಂಧದ ಮೇಲೆ ಜಾಗತೀಕರಣದ ಪ್ರಭಾವವನ್ನು ಗುರುತಿಸುವ ಕನ್ನಡ ಸಣ್ಣಕಥೆಗಳು

• ಜಾಗತೀಕರಣದ ಆರಂಭದ ಕನ್ನಡ ಸಣ್ಣಕಥೆಗಳು ಮತ್ತು ದಶಕಗಳ ನಂತರದಲ್ಲಿ ರಚನೆಗೊಂಡ ಕನ್ನಡ ಸಣ್ಣಕಥೆಗಳು : ತೌಲನಿಕ ಅಧ್ಯಯನೆ

• ಜಾಗತೀಕರಣ ಸಂದರ್ಭದಲ್ಲಿನ ಕನ್ನಡ ಸಣ್ಣಕಥೆ ಮತ್ತು ಕಾವ್ಯಗಳಲ್ಲಿನ ಅಂತರ್ ಸಂಬಂಧ

• ಜಾಗತೀಕರಣ ಸಂದರ್ಭದ ಕನ್ನಡ ಕಾದಂಬರಿಗಳ ಅಧ್ಯಯನ

• ಜಾಗತೀಕರಣ ಸಂದರ್ಭದ ಕನ್ನಡ ಸಿನಿಮಾಗಳ ಅಧ್ಯಯನ

• ಜಾಗತೀಕರಣ ಸಂದರ್ಭದ ಕನ್ನಡ ಅಂಕಣ ಬರಹಗಳ ಅಧ್ಯಯನ

• ಜಾಗತೀಕರಣ ಸಂದರ್ಭ ಮತ್ತು ಕನ್ನಡ ವಿಮರ್ಶೆ/ಸಂಶೋಧನೆಗಳಲ್ಲಿ ಸಂಭವಿಸಿದ ಪಲ್ಲಟಗಳು

• ಹೊಸತಲೆಮಾರಿನ ಕನ್ನಡ ಸಣ್ಣಕಥೆಗಳ ಮುಖ್ಯ ಆಶಯ

ಹೀಗೆ ಜಾಗತೀಕರಣ ಸಂದರ್ಭದ ಕನ್ನಡ ಸೃಜನಶೀಲತೆಯನ್ನು ಮುಂದಿಟ್ಟುಕೊಂಡು, ಅಧ್ಯಯನ ಮಾಡಬಹುದಾದ ಪರಿಧಿಯು ವಿಸ್ತೃತವಾಗಿದೆ. ಇಲ್ಲಿ ಸೂಕ್ಷ್ಮ ಮತ್ತು ತೌಲನಿಕ ಓದಿಗೂ ಸಾಕಷ್ಟು ಆಸ್ಪದವಿದೆ. ಈ ಕಾಲಾವಧಿಯ ಅಧ್ಯಯನವು ಸಮಕಾಲೀನ ಸಮಾಜದ ಕುರಿತ ಚಿಂತನೆಗೆ ಹೊಸ ಕಣ್ಣೋಟವನ್ನು ಒದಗಿಸಬಲ್ಲದು. ಈ ಕಣ್ಣಬೆಳಕು ಪರಂಪರೆಯ ಮರುಚಿಂತನೆಗೂ ಅನುವು ಮಾಡಿಕೊಡಬಲ್ಲದು. ಜಾಗತೀಕರಣದ

ವಿದ್ಯಮಾನಗಳು ಈ ಪರಂಪರೆಯಲ್ಲಿ ಪ್ರವಹಿಸಿದ ಸೌಹಾರ್ದತೆಯನ್ನು ಶೋಧಿಸಲು ಒತ್ತಾಯಿಸುತ್ತದೆ. ಇಂತಹದೊಂದು ಅರ್ಥಪೂರ್ಣ ಅಧ್ಯಯನದ ಸಾಧ್ಯತೆಗಳು ಇಲ್ಲಿವೆ.

ಹೀಗೆ ನಾನು ಸಂಶೋಧನ ಸಂದರ್ಭದಲ್ಲಿ ಈ ಮೇಲೆ ತಿಳಿಸಿರುವ ಅಯಾಮಗಳ ಅಧ್ಯಯನ ಮಾಡಬಹುದೆಂಬ ಸಣ್ಣ ಸುಳಿವುಗಳನ್ನು ಪಡೆದುಕೊಂಡಿದ್ದೇನೆ. ಕನ್ನಡ ಸಣ್ಣಕಥಾ ಪರಂಪರೆ ಹೊಸದಲ್ಲದಿದ್ದರೂ ಜಾಗತೀಕರಣದ ಪ್ರಭಾವವನ್ನು ಗುರುತಿಸುವ ನಿಲುವು ಹೊಸದಾಗಿರುವುದರಿಂದ ಇತ್ತೀಚಿನ ಸಣ್ಣಕಥೆಗಳ ಎಲ್ಲಾ ಆಯಾಮಗಳಲ್ಲಿ ಅಧ್ಯಯನ ಕೈಗೊಳ್ಳುವುದು ಸೂಕ್ತವೆನಿಸುತ್ತದೆ. ಈ ಕ್ರಮದಲ್ಲಿ ಮಾಡಬಯಸುವವರಿಗೆ ಇನ್ನೂ ಸಾಕಷ್ಟು ಫಲಿತಗಳು ದಕ್ಕಬಹುದೆಂಬುದು ನನ್ನ ಆಶಯ.

# ಅನುಬಂಧಗಳು

೧. ಪ್ರಾಥಮಿಕ ಆಕರಗಳು

೨. ಪರಾಮರ್ಶನ ಗ್ರಂಥಗಳು

೩. ಅಧ್ಯಯನ ಪತ್ರಿಕೆ ಮತ್ತು ಜಾಲತಾಣಗಳು
(ಇಂಟರ್‌ನೆಟ್ ವೆಬ್‌ಸೈಟ್‌ಗಳು)

೪. ನಿಘಂಟುಗಳು ಮತ್ತು ವಿಶ್ವಕೋಶಗಳು

## ಅನುಬಂಧ-೧

## ಪ್ರಾಥಮಿಕ ಆಕರಗಳು

೧. ಅಮರೇಶ ನುಗಡೋಣಿ

- ಕೃತಿ: ಸವಾರಿ ಕಥೆ: ಏ ದಿಲ್ ಮಾಂಗೇ ಮೋರ್, ಅಂಕಿತ ಪುಸ್ತಕ, ಬಸವನಗುಡಿ, ಬೆಂಗಳೂರು. ೨೦೦೭.
- ಕೃತಿ: ತಮಂಧದ ಕೇಡು, ಕಥೆ: ಧರೆ ಉರಿದರೆ, ಧಾತ್ರಿ ಪುಸ್ತಕ ಮಾಲೆ, ನಾಗರಬಾವಿ, ಬೆಂಗಳೂರು. ೨೦೦೮.

೨. ಕಲಿಗಣನಾಥ ಗುಡದೂರು, ಕೃತಿ: ಉಡಿಯಲ್ಲಿಯ ಉರಿ, ಕಥೆ: ಗಡಿ, ಲೋಹಿಯಾ ಪ್ರಕಾಶನ, ಬಳ್ಳಾರಿ. ೨೦೦೦

೩. ಎಚ್.ನಾಗವೇಣಿ

- ಕೃತಿ: ಮೀಯುವ ಆಟ, ಕಥೆ: ಮೀಯುವ ಆಟ, ಲೋಹಿಯಾ ಪ್ರಕಾಶನ, ಬಳ್ಳಾರಿ. ೨೦೦೫
- ಕೃತಿ: ಮೀಯುವ ಆಟ, ಕಥೆ: ಒಡಲು, ಲೋಹಿಯಾ ಪ್ರಕಾಶನ, ಬಳ್ಳಾರಿ. ೨೦೦೫

೪. ಜಯಂತ ಕಾಯ್ಕಿಣಿ

- ಕೃತಿ: ಜಯಂತ ಕಾಯ್ಕಿಣಿ ಕತೆಗಳು-ಪ್ರಶಸ್ತಿ ವಿಜೇತ ಮೂರು ಪುಸ್ತಕಗಳ ಸಂಪುಟ, ಕಥೆ: ಇದ್ದಾಗ ಇದ್ದಾಂಗ, ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು. ೨೦೧೨
- ಕೃತಿ: ತೂಫಾನ್ ಮೇಲ್, ಕಥೆ: ತೂಫಾನ್ ಮೇಲ್, ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು. ೨೦೦೫
- ಕೃತಿ: ಜಯಂತ ಕಾಯ್ಕಿಣಿ ಕತೆಗಳು-ಪ್ರಶಸ್ತಿ ವಿಜೇತ ಮೂರು ಪುಸ್ತಕಗಳ ಸಂಪುಟ, ಕಥೆ: ಅಮೃತಬಳ್ಳಿ ಕಷಾಯ, ಅಂಕಿತ ಪುಸ್ತಕ ಪ್ರಕಾಶನ, ಬಸವನಗುಡಿ, ಬೆಂಗಳೂರು. ೨೦೧೨

೫. ಟಿ.ಎಸ್.ಗೊರವರ

- ಕೃತಿ: ಭ್ರಮೆ, ಕಥೆ: ಭ್ರಮೆ, ಕನ್ನಡ ಪ್ರಕಾಶನ, ವಿಜಯನಗರ, ಬೆಂಗಳೂರು
- ಕೃತಿ: ಭ್ರಮೆ, ಕಥೆ: ವಾಸ್ತವ, ಕನ್ನಡ ಪ್ರಕಾಶನ, ವಿಜಯನಗರ, ಬೆಂಗಳೂರು

೬. ಟಿ.ಪಿ.ಅಶೋಕ(ಪ್ರ.ಸಂ.), ಶ್ರೀಧರ ಬಳಗಾರ(ಸಂ), ಕೃತಿ: ಮರೆಯಲಾಗದ ಕತೆಗಳು (ಅಮರೇಶ ನುಗಡೋಣಿ), ಕತೆ: ಸವಾರಿ, ನುಡಿ ಪುಸ್ತಕ, ಬನಶಂಕರಿ, ಬೆಂಗಳೂರು. ೨೦೧೨.

೭. ನಟರಾಜ ಹುಳಿಯಾರ್ ಕೃತಿ: ಬಸವಲಿಂಗಪ್ಪನವರು ಮತ್ತು ಡೇವಿಡ್ ಸಾಹೇಬರು, ಕಥೆ: ದಾದ ಕ ಪಹಾಡ್, ಕನ್ನಡ ಸಂಘ, ಸಂತ ಜೋಸೆಫರ ವಾಣೀಜ್ಯ ಕಾಲೇಜು, ಬೆಂಗಳೂರು. ೨೦೦೯

೮. ನಾಗರಾಜ ವಸ್ತಾರೆ, ಕೃತಿ: ಹಕೂನ ಮಟಾಟ, ಕಥೆ: ಹಕೂನ ಮಟಾಟ, ಛಂದ ಪುಸ್ತಕ ಪ್ರಕಾಶನ, ಬನ್ನೇರುಘಟ್ಟ, ಬೆಂಗಳೂರು. ೨೦೦೯

೯. ಬಸವಣ್ಣೆಪ್ಪಾ ಕಂಬಾರ, ಕೃತಿ: ಆಟಿಕೆ, ಕಥೆ: ಸರ್ಕಸ್, ಛಂದ ಪುಸ್ತಕ ಪ್ರಕಾಶನ, ಬನ್ನೇರುಘಟ್ಟ, ಬೆಂಗಳೂರು. ೨೦೧೨

೧೦. ಬಿ. ಶ್ರೀನಿವಾಸ, ಕೃತಿ: ಕಾಣದಾಯಿತೋ ಊರುಕೇರಿ, ಕಥೆ: ಕಾಣದಾಯಿತೋ ಊರುಕೇರಿ, ಲಡಾಯಿ ಪ್ರಕಾಶನ, ಗದಗ. ೨೦೧೨

೧೧.ಬಿ.ಟಿ.ಜಾಹ್ನವಿ

- ಕೃತಿ: ಕಳ್ಳುಬಳ್ಳಿ, ಕಥೆ: ನೆರೆ ಹಾವಳಿ, ಸುಯೋಧನ ಪ್ರಕಾಶನ, ಹಗರಿಬೊಮ್ಮನಹಳ್ಳಿ, ಬಳ್ಳಾರಿ. ೨೦೧೪
- ಕೃತಿ: ಕಳ್ಳುಬಳ್ಳಿ, ಕಥೆ: ಆಶ್ರಿತರು, ಸುಯೋಧನ ಪ್ರಕಾಶನ, ಹಗರಿಬೊಮ್ಮನಹಳ್ಳಿ, ಬಳ್ಳಾರಿ. ೨೦೧೪

೧೨. ಮಹಾಂತೇಶ ನವಲಕಲ್, ಕೃತಿ: ಭಾರತ ಭಾಗ್ಯವಿಧಾತ, ಕಥೆ: ಭಾರತ ಭಾಗ್ಯವಿಧಾತ, ಪಲ್ಲವ ಪ್ರಕಾಶನ, ಚೆನ್ನಪಟ್ಟಣ.೨೦೧೪

೧೩. ಬೊಳುವಾರು ಮಹಮದ್ ಕುಂಞಿ, ಕೃತಿ: ಆಕಾಶಕ್ಕೆ ನೀಲಿ ಪರದೆ, ಕಥೆ: ಒಂದು ತುಂಡು ಗೋಡೆ, ಕಾಮಧೇನು ಪ್ರಕಾಶನ, ಬೆಂಗಳೂರು. ೧೯೯೯

೧೪. ಮಂಜುನಾಥ್‌ಲತಾ, ಕೃತಿ: ಕತೆ ಎಂಬ ಇರಿವ ಈ ಅಲಗು, ಕಥೆ: ಪ್ರತಿಕೃತಿ, ಪಲ್ಲವ ಪ್ರಕಾಶನ, ಚೆನ್ನಪಟ್ಟಣ. ೨೦೧೧

೧೫. ಮೊಗಳ್ಳಿ ಗಣೇಶ,

- ಕೃತಿ: ದೇವರ ದಾರಿ, ಕಥೆ: ತುರ್ತುಪರಿಸ್ಥಿತಿ, ಅಹರ್ನಿಶಿ ಪ್ರಕಾಶನ, ಶಿವಮೊಗ್ಗ. ೨೦೧೭
- ಕೃತಿ: ದೇವರ ದಾರಿ, ಕಥೆ: ದೇಶದ್ರೋಹ, ಅಹರ್ನಿಶಿ ಪ್ರಕಾಶನ, ಶಿವಮೊಗ್ಗ. ೨೦೧೭

೧೬. ವಸುಧೇಂದ್ರ

- ಕೃತಿ: ಯುಗಾದಿ ಕಥೆ: ಯುಗಾದಿ,ಛಂದ ಪುಸ್ತಕ ಪ್ರಕಾಶನ, ಬೆಂಗಳೂರು, ೨೦೧೦.
- ಕೃತಿ: ಯುಗಾದಿ ಕಥೆ: ಹೆಡ್ ಹಂಟರ್, ಛಂದ ಪುಸ್ತಕ ಪ್ರಕಾಶನ, ಬೆಂಗಳೂರು, ೨೦೧೦.
- ಕೃತಿ: ಹಂಪಿ ಎಕ್ಸ್‌ಪ್ರಸ್, ಕಥೆ: ಕೆಂದೂಳಿ, ಛಂದ ಪುಸ್ತಕ ಪ್ರಕಾಶನ, ಬನ್ನೇರುಘಟ್ಟ, ಬೆಂಗಳೂರು. ೨೦೧೦
- ಕೃತಿ: ಹಂಪಿ ಎಕ್ಸ್‌ಪ್ರಸ್, ಕಥೆ: ಕೆಂಪು ಗಿಣಿ, ಛಂದ ಪುಸ್ತಕ ಪ್ರಕಾಶನ, ಬನ್ನೇರುಘಟ್ಟ, ಬೆಂಗಳೂರು. ೨೦೧೦

೧೭. ವಿವೇಕ ಶಾನಭಾಗ

- ಕೃತಿ: ಹುಲಿ ಸವಾರಿ, ಕಥೆ: ಹುಲಿ ಸವಾರಿ, ಅಕ್ಷರ ಪ್ರಕಾಶನ, ಹೆಗ್ಗೋಡು (ಸಾಗರ), ಕರ್ನಾಟಕ. ೧೯೯೫.
- ಕೃತಿ: ಹುಲಿ ಸವಾರಿ, ಕಥೆ: ಸಶೇಷ, ಅಕ್ಷರ ಪ್ರಕಾಶನ, ಹೆಗ್ಗೋಡು (ಸಾಗರ), ಕರ್ನಾಟಕ. ೧೯೯೫.

೧೮. ಹನುಮಂತ ಹಾಲಿಗೇರಿ, ಕೃತಿ: ಗೆಂಡೆದೇವ್ರು, ಕಥೆ: ಕರ್ಕಿ ಬೇರು, ಕಾವ್ಯಮನೆ ಪ್ರಕಾಶನ, ಕಲಬುರ್ಗಿ. ೨೦೧೬

ಅನುಬಂಧ-೨

## ಪರಾಮರ್ಶನ ಗ್ರಂಥಗಳು


೧. ಅಮರೇಶ ನುಗಡೋಣಿ,

- ಕನ್ನಡ ಸಂಶೋಧನೆಯ ವೈಧಾನಿಕತೆಗಳು (ಸಂ), ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೮
- ನಾನೇಕೆ ಬರೆಯುತ್ತೇನೆ, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೯

೨. ಅಶೋಕ ಎಸ್. ಆಲೂರ, ಸಿ.ಎಲ್. ಲಕ್ಷ್ಮೀಪತಿಗೌಡ, ಶಿವಾನಂದ ಬಿ. ಹೊಸಮನಿ, ಸಮಗ್ರ ಕೃಷಿ ಅಭಿವೃದ್ಧಿಗೆ ಬಲಶಾಲಿ ರೈತ ಸಂಘಟನೆಗಳು, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೧೦

೩. ಅನಸೂಯ ಕಾಂಬಳೆ, ಹರಿದ ಪತ್ರ, ಲಡಾಯಿ ಪ್ರಕಾಶನ, ಗದಗ. ೨೦೧೪

೪. ಅಬ್ಬಾಸ್ ಮೇಲಿನಮನಿ, ಹುಡುಕಾಟ, ಲೊಹಿಯಾ ಪ್ರಕಾಶನ, ಬಳ್ಳಾರಿ. ೨೦೦೨

೫. ಅಗ್ರಹಾರ ಕೃಷ್ಣಮೂರ್ತಿ (ಸಂ), ಡಾ.ಡಿ.ಆರ್.ನಾಗರಾಜ್-ಸಂಸ್ಕೃತಿ ಕಥನ, ಸುವರ್ಣ ಸಿರಿ ಮಾಲೆ, ಸ್ವಪ್ನ ಬುಕ್ ಹೌಸ್, ಬೆಂಗಳೂರು. ೨೦೦೮

೬. ಅಬ್ದುಲ್ ರಶೀದ್, ಈ ತನಕದ ಕಥೆಗಳು, ಅಭಿನವ ಪ್ರಕಾಶನ, ಬೆಂಗಳೂರು. ೨೦೦೬

೭. ಆಂಡ್ರೆ ಗುಂಡರ್ ಫ್ರಾಂಕ್, 'ರಿಯೋರಿಯಂಟ್, ಗ್ಲೋಬಲ್ ಎಕನಾಮಿ ಇನ್ ದಿ ಏಶಿಯನ್ ಏಜ್. ಯು.ಸಿ.ಬರ್ಕಲೇ ಪ್ರೆಸ್. ೧೯೯೮

೮. ಎ.ಜಿ.ಹಾಪ್‌ಕೀನ್ಸ್ ed 'ಗ್ಲೋಬಲೈಸೇಶನ್ ಇನ್ ವರ್ಲ್ಡ್ ಹಿಸ್ಟರಿ' ನಾರ್ಟನ್ (೨೦೦೪) p.೪

೯. ಐ.ಜೆ.ಮ್ಯಾಗೇರಿ, ಹಿಂಸಾಕಾರಣ, ಲಡಾಯಿ ಪ್ರಕಾಶನ, ಗದಗ. ೨೦೧೨

೧೦. ಓ.ಎಲ್.ನಾಗಭೂಷಣಸ್ವಾಮಿ, ವಿಮರ್ಶೆಯ ಪರಿಭಾಷೆ, ಅಭಿನವ ಪ್ರಕಾಶನ, ಬೆಂಗಳೂರು. ೨೦೧೩

೧೧. ಕರೀಗೌಡ ಬೀಚನಹಳ್ಳಿ, ಚಿನ್ನದ ಹಬ್ಬದ ವರ್ಷ-೨೦೧೧ ಶತಮಾನದ ಸಣ್ಣಕಥೆಗಳ ಸಮೀಕ್ಷೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು. ೨೦೧೧

೧೨. ಕಲಿಗಣನಾಥ ಗುಡದೂರು, ಉಡಿಯಲ್ಲಿಯ ಉರಿ, ಲೋಹಿಯಾ ಪ್ರಕಾಶನ, ಬಳ್ಳಾರಿ. ೨೦೦೦

೧೩. ಕಣಾದ ರಾಘವ, ಮೊದಲ ಮಳೆಯ ಮಣ್ಣು, ಛಂದ ಪುಸ್ತಕ ಪ್ರಕಾಶನ, ಬೆಂಗಳೂರು. ೨೦೧೧

೧೪. ಕೀರ್ತಿನಾಥ ಕುರ್ತಕೋಟಿ, ಯುಗಧರ್ಮ ಹಾಗೂ ಸಾಹಿತ್ಯ ದರ್ಶನ, ಕುರ್ತಕೋಟಿ ಮೆಮೋರಿಯಲ್ ಟ್ರಸ್ಟ್, ಧಾರವಾಡ. ೨೦೧೦

೧೫. ಕೆ.ವಿ.ನಾರಾಯಣ, ಕನ್ನಡ ಜಗತ್ತು ಅರ್ಧಶತಮಾನ, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. 2009

೧೬. ಕೆ.ಮೋಹನ್ ಕೃಷ್ಣ ರೈ, ವಸಾಹತುಶಾಹಿ ಮತ್ತು ನಗರೀಕರಣ, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೭

೧೭. ಕೆ.ನೀಲಾ,

- ಜ್ಯೋತಿಯೊಳಗಣ ಕಾಂತಿ, ಕ್ರೀಯಾ ಪ್ರಕಾಶನ, ಬೆಂಗಳೂರು. ೨೦೦೯
- ತಿಪ್ಪೆಯನರಸಿ ಮತ್ತು ಇತರ ಕಥೆಗಳು, ಕನ್ನಡ ನಾಡು ಪ್ರಕಾಶನ, ಗುಲಬರ್ಗಾ. ೨೦೧೦

೧೮. ಕೆ.ವಿ.ತಿರುಮಲೇಶ, ಕೆಲವು ಕಥಾನಕಗಳು, ಅಭಿನವ ಪ್ರಕಾಶನ, ಬೆಂಗಳೂರು. ೨೦೧೦

೧೯. ಗೋಪಾಲಕೃಷ್ಣ ಪೈ, ಮೂರು ಮತ್ತಿಪ್ಪು, ಭಾಗ್ಯಲಕ್ಷ್ಮೀ ಪ್ರಕಾಶನ, ಬೆಂಗಳೂರು. ೨೦೧೦

೨೦. ಚಂದ್ರಶೇಖರ ಪಾಟೀಲ, ಸಂಕ್ರಮಣ ಪತ್ರಿಕೆ ಸಂ-೩೨೦, ಸಂಕ್ರಮಣ ಪ್ರಕಾಶನ, ಬೆಂಗಳೂರು. ಏಪ್ರೀಲ-೧೯೯೯

೨೧. ಚ.ನ.ಶಂಕರ್‌ರಾವ್, ಭಾರತೀಯ ಸಮಾಜ, ಜೈ ಭಾರತ್ ಪ್ರಕಾಶನ, ಮಂಗಳೂರು. ೧೯೯೫

೨೨. ಜ್ಯಾಕ್ ವೆದರ್‌ಫೋರ್ಡ್, ಗೆಂಘಿಸ್ ಖಾನ್ ಅಂಡ್ ದಿ ಮೇಕಿಂಘ್ ಆಪ್ ದಿ ಮಾಡರ್ನ್ ವರ್ಲ್ಡ್ ಕ್ರೌನ್, ೨೦೦೪

೨೩. ಜಯಂತ ಕಾಯ್ಕಿಣಿ,

- ಜಯಂತ ಕಾಯ್ಕಿಣಿ ಕತೆಗಳು ಪ್ರಶಸ್ತಿ ವಿಜೇತ ಮೂರು ಪುಸ್ತಕಗಳ ಸಂಪುಟ, ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು. ೨೦೧೨
- ತೂಫಾನ್ ಮೇಲ್ ಕತೆಗಳು, ಅಂಕಿತ ಪುಸ್ತಕ, ಬೆಂಗಳೂರು. ೨೦೦೫

೨೪. ಜಿಎಸ್.ಶಿವರುದ್ರಪ್ಪ, ಕೆ.ವಿ.ನಾರಾಯಣ, ಕಾವ್ಯಾರ್ಥ ಪದಕೋಶ, ಕಾಮಧೇನು ಪ್ರಕಾಶನ, ಬೆಂಗಳೂರು. ೧೯೯೯

೨೫. ಜಿ.ಎಸ್.ಆಮೂರ, ಕನ್ನಡ ಕಥನ ಸಾಹಿತ್ಯ ಸಣ್ಣಕತೆ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು. ೨೦೦೩

೨೬. ಜಿ.ಪಿ.ಬಸವರಾಜು, ಬೆತ್ತಲೆಯ ಬೆಳಕನುಟ್ಟು, ಅಹರ್ನಿಶಿ ಪ್ರಕಾಶನ ಶಿವಮೊಗ್ಗ. ೨೦೧೫

೨೭. ಜಿ.ಎಚ್.ನಾಯಕ್ (ಸಂ), ಕನ್ನಡ ಸಣ್ಣಕಥೆಗಳು, ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ, ಹೊಸದೆಹಲಿ. ೨೦೦೪

೨೮. ಟಿ.ಪಿ.ಅಶೋಕ, ಕಥನ ಪ್ರೀತಿ ಒಂದು ನೂರು ಕನ್ನಡ ಸಣ್ಣಕತೆಗಳ ವಿಶ್ಲೇಷಣೆ, ಅಕ್ಷರ ಪ್ರಕಾಶನ ಹೆಗ್ಗೋಡು. ೨೦೧೩

೨೯. ಟಿ.ಕೆ.ದಯಾನಂದ, ರೆಕ್ಕೆ ಹಾವು, ಅಹರ್ನಿಶಿ ಪ್ರಕಾಶನ, ಶಿವಮೊಗ್ಗ. ೨೦೧೪

೩೦. ತಿಪ್ಪೇಸ್ವಾಮಿ, ಸಾವಯವ ಕೃಷಿ ಒಂದು ವಿಶ್ಲೇಷಣೆ, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೧೦

೩೧. ತಿರುಪತಿ ಭಂಗಿ, ಕೈರೊಟ್ಟಿ, ಗೌರಿ ಪುಸ್ತಕ ಪ್ರಕಾಶನ, ಬಾಗಲಕೋಟೆ. ೨೦೧೬

೩೨. ದೂಣೆಹಳ್ಳಿ ಗುರುಮೂರ್ತಿ (ಸಂ), ಸಾಹಿತ್ಯ ಮತ್ತು ಖಾಸಗೀಕರಣ, ವಚನಶ್ರೀ ಪ್ರಕಾಶನ, ಬೆಂಗಳೂರು. ೨೦೧೩

೩೩. ನರಹಳಿ ಬಾಲಸುಬ್ರಹ್ಮಣ್ಯ, ಸಾಹಿತ್ಯ ಸಂಸ್ಕೃತಿ, ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು. ೧೯೯೮

೩೪. ನಟರಾಜ ಹುಳಿಯಾರ, ಬಸಲಿಂಗಪ್ಪನವರು ಮತ್ತು ಡೇವಿಡ್ ಸಾಹೇಬರು, ಕನ್ನಡ ಸಂಘ, ಸಂತ ಜೋಸೆಫರ ವಾಣಿಜ್ಯ ಕಾಲೇಜು, ಬೆಂಗಳೂರು. ೨೦೦೯

೩೫. ನಾ. ದಿವಾಕರ (ಅನು), ಆನಂದ ತೇಲ್ತುಂಬ್ಡೆ (ಮೂ.ಕೃ.ಲೇ), ಜಾಗತೀಕರಣ ಮತ್ತು ದಲಿತರು, ಲಡಾಯಿ ಪ್ರಕಾಶನ, ಗದಗ. ೨೦೧೩

೩೬. ನಾಗರಾಜ ವಸ್ತಾರೆ, ನಿರವಯವ, ಛಂದ ಪುಸ್ತಕ ಪ್ರಕಾಶನ, ಬೆಂಗಳೂರು.೨೦೧೨

೩೭. ಎನ್. ಮನುಚಕ್ರವರ್ತಿ, ಮಾದ್ಯಮ ಮಾರ್ಗ ಸಮಾಜ–ಸಂಸ್ಕೃತಿ–ಸಾಹಿತ್ಯ–ಕಲೆಗಳನ್ನು ಕುರಿತ ಚಿಂತನೆಗಳು, ಅಕ್ಷರ ಪ್ರಕಾಶನ, ಹೆಗ್ಗೋಡು ಸಾಗರ ಕರ್ನಾಟಕ, ೨೦೧೦.

೩೮. ಎನ್. ಜಗದೀಶ ಕೊಪ್ಪ, W.T.O. ಜಾಗತೀಕರಣ ಮತ್ತು ಗ್ರಾಮಭಾರತ, ಸಿಂಚನ ಗ್ರಂಥಮಾಲೆ ಅಶ್ವಿನಿ ನಗರ ಹಾವೇರಿ. ೨೦೦೮

೩೯. ಪಿ.ವೀರಭದ್ರ ನಾಯ್ಕ, ಶಿಕ್ಷಣ ವಂಚಿತ ಬುಡಕಟ್ಟು ಮಕ್ಕಳು, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೧೦

೪೦. ಬಸು ಬೇವಿನಗಿಡದ,

- ಬಾಳೆಯ ಕಂಬ, ಚೈತ್ರ ಪ್ರಕಾಶನ, ಧಾರವಾಡ. ೨೦೧೧
- ಹೊಡಿ ಚಕ್ಕಡಿ, ಮನೋಹರ ಗ್ರಂಥ ಮಾಲಾ, ಧಾರವಾಡ. ೨೦೧೩

೪೧. ಬಾಬಾಸಾಹೇಬ ಲೋಕಾಪುರ, ಕೃಷ್ಣೆ ಒಡಲ ತುಂಬ, ಜಮುನಾ ಪ್ರಕಾಶನ, ದಡಗ. ೨೦೦೮

೪೨. ಭಾಗ್ವತಿ ಜಗದೀಶ, ಇನ್ ದಿ ಫೆನ್ಸ್ ಆಫ್ ಗ್ಲೋಬಲೇಶನ್ ಆಕ್ಸಫರ್ಡ್, ನ್ಯೂಯಾರ್ಕ ಆಕ್ಸ್‌ಫರ್ಡ್ ಯುನಿವರ್ಸಿಟಿ ಪ್ರೆಸ್.೨೦೦೪

೪೩. ಬಿ.ಎಂ.ಪುಟ್ಟಯ್ಯ, ಸಂಶೋಧನೆ ತಾತ್ವಿಕ ಆಯಾಮಗಳು, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೧೦

೪೪.ಬಿ.ಎಂ.ಯೀಟ್ಸ್ ವಿಂಗ್‌ಡ್ ವಿಕ್ಟರಿ ಜೊನಥನ್ ಕೇಪ್, ಲಂಡನ್ ೧೯೬೨ pp.೫೪–೫೫

೪೫. ಬೊಳುವಾರು ಮಹಮದ್ ಕುಂಞ, ಆಕಾಶಕ್ಕೆ ನೀಲಿ ಪರದೆ, ಕಾಮಧೇನು ಪ್ರಕಾಶನ, ಬೆಂಗಳೂರು. ೧೯೯೯

೪೬. ಮ.ಮಹೇಶನ್, ಜಾಗತೀಕರಣ ದಕ್ಷಿಣದ ದೃಷ್ಟಿಯಲ್ಲಿ, ನವಕರ್ನಾಟಕ ಪ್ರಕಾಶನ, ಬೆಂಗಳೂರು. ೨೦೦೨

೪೭. ಮಹಾಂತೇಶ ನವಲಕಲ್, ನೀರಿನ ನೆರಳು, ಕಥನ ಪ್ರಕಾಶನ, ನಾಗರಭಾವಿ, ಬೇಂಗಳೂರು. ೨೦೦೮

೪೮. ಮಂಜುನಾಥ ವಿ.ಎಂ., ಬ್ರಾಂಡಿ, ಶಿಟ್ರೀ ಪ್ರಕಾಶನ, ಬೆಂಗಳೂರು. ೨೦೦೮

೪೯. ಮಂಜುನಾಥ್ ಲತಾ, ಕತೆ ಎಂಬ ಇರಿವ ಈ ಅಲಗ, ಪಲ್ಲವ ಪ್ರಕಾಶನ, ಚನ್ನಪಟ್ಟಣ. ೨೦೧೪

೫೦. ಮಲ್ಲಿಕಾ ಘಂಟಿ, ಆಧುನಿಕ ಕನ್ನಡ ಸಾಹಿತ್ಯ ರೂಪಗಳು, ಪ್ರಸಾರಾಂಗ, ಕರ್ನಾಟಕ ವಿ.ವಿ. ಧಾರವಾಡ, ೨೦೦೬,

೫೧.ಎಂ.ಆರ್. ನಾಗರಾಜು (ಅನು), ಜಾಗತೀಕರಣದಿಂದ ಜನಾರೋಗ್ಯಕ್ಕೇನಾದೀತು, ಜನಾರೋಗ್ಯ ಸಭೆಯ ಪುಸ್ತಕ ಮಾಲಿಕೆ -೧, ಪ್ರಕಟನೆ-ಜನಸ್ವಾಸ್ಥ್ಯ ಸಭಾ'ದ ಸಮನ್ವಯ ಸಮಿತಿ, ಕನ್ನಡ.

೫೨. ಎಂ.ಡಿ.ಒಕ್ಕುಂದ, ಧಾರ್ಮಿಕ ಹಿಂಸೆ ಹಾಗೂ ಸೌಹಾರ್ದತೆ, ಲಡಾಯಿ ಪ್ರಕಾಶನ, ಧಾರವಾಡ. ೨೦೧೭

೫೩. ರಹಮತ್ ತರೀಕೆರೆ,

- ಪ್ರತಿ ಸಂಸ್ಕೃತಿ (ಸಾಹಿತ್ಯ-ಸಂಸ್ಕೃತಿ ಚಿಂತನಗಳು), ಅಭಿನವ ಪ್ರಕಾಶನ, ವಿಜಯನಗರ, ಬೆಂಗಳೂರು. ೨೦೧೦
- ಕನ್ನಡ ಸಾಹಿತ್ಯ ವಾಗ್ವಾದಗಳು, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೧೨

೫೪. ರಘುನಾಥ ಚ.ಹ., ಹೊರಗೂ ಮಳೆ ಒಳಗೂ ಮಳೆ, ಸಂಚಯ ಪ್ರಕಾಶನ, ಬೆಂಗಳೂರು. ೨೦೦೬

೫೫. ರಂ.ಶ್ರೀ.ಮುಗಳಿ, ಸುವರ್ಣ ಸಾಹಿತ್ಯ ಗ್ರಂಥ ಮಾಲೆ, ಸಾಹಿತ್ತೋಪಾಸನೆ, ಕರ್ನಾಟಕ ಸರ್ಕಾರ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು. ೨೦೦೬

೫೬. ರಾಜೇಂದ್ರ ಚೆನ್ನಿ,

- ನಡು ಹಗಲಿನಲ್ಲಿ ಕಂದೀಲುಗಳು, ಲೋಹಿಯಾ ಪ್ರಕಾಶನ, ಬಳ್ಳಾರಿ. ೨೦೦೪
- ಅಸಮಗ್ರ ಸಾಹಿತ್ಯ-ಸಂಸ್ಕೃತಿ-ರಾಜಕೀಯ ಕುರಿತ ಟಿಪ್ಪಣಿಗಳು, ಪಲ್ಲವ ಪ್ರಕಾಶನ, ಚನ್ನಪಟ್ಟಣ. ೨೦೧೦

೫೭. ರಾಜೇಂದ್ರ ಚೆನ್ನಿ ಹಾಗೂ ಎಸ್.ಸಿ.ರಾಜ್‌ಅಹಮದ್ (ಸಂ), ಜಾಗತೀಕರಣ ಒಂದು ಸಮಗ್ರ ಮಂಥನ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು. ೨೦೦೪

೫೮. ಎಲ್.ಸಿಸುಮಿತ್ರಾ, ಗುಬ್ಬಿಹಳ್ಳದ ಸಾಕ್ಷಿಯಲ್ಲಿ, ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು. ೨೦೦೮

೫೯. ಡಾ. ವಿನಯಾ,

- ಉರಿ, ಅಹರ್ಶನಿ ಪ್ರಕಾಶನ, ಶಿವಮೊಗ್ಗ. ೨೦೧೪
- ಊರ ಒಳಗಣ ಬಯಲು, ಛಂದ ಪುಸ್ತಕ ಪ್ರಕಾಶನ, ಬೆಂಗಳೂರು. ೨೦೧೦

೬೦. ವಸುಮತಿ ಉಡುಪ, ಬದುಕು ಮಾಯೆಯ ಮಾಟ, ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು. ೨೦೧೧

೬೧. ವಸಂತ ಎನ್.ಕೆ. (ಅನು), ಸಾಮ್ರಾಜ್ಯಶಾಹಿ ಬಂಡವಾಳಶಾಹಿಯ ಅತ್ಯುನ್ನತ ಘಟ್ಟ–ವಿ.ಐ.ಲೆನಿನ್, ಕ್ರಿಯಾ ಪ್ರಕಾಶನ, ಬೆಂಗಳೂರು. ೨೦೧೩

೬೨. ವೈ.ಎಸ್.ವಗ್ಗಿ (ಸಂ), ಡಾ.ವಿಠೋಬ ಬಿ.(ಸ.ಸಂ), ಡಾ.ಡಿ.ಎಂ.ಮದರಿ(ಸ.ಸಂ), ಜಾಗತೀಕರಣ ಮತ್ತು ಭಾರತದ ಅಭಿವೃದ್ಧಿ, ವಗ್ಗಿ ಪ್ರಕಾಶನ, ಗುಲಬರ್ಗಾ. ೨೦೦೯

೬೩. ಸಬಿಹಾ ಭೂಮೀಗೌಡ

- ಗೆರೆಗಳು, ಸಿವರ ಪ್ರಕಾಶನ, ಬೆಂಗಳೂರು. ೨೦೧೨
- ಮಹಿಳೆ ಇಂದಿನ ಸವಾಲುಗಳು, ಲಡಾಯಿ ಪ್ರಕಾಶನ, ಗದಗ. ೨೦೧೪
- ಕಡಲ ತುಡಿಯ ಮನೆ, ಲಡಾಯಿ ಪ್ರಕಾಶನ, ಗದಗ. ೨೦೦೯

೬೪. ಸುನಂದಾ ಪ್ರಕಾಶ ಕಡಮೆ

- ತುದಿ ಮಡಚಿಟ್ಟ ಪುಟ, ಅಹರ್ನಿಶಿ ಪ್ರಕಾಶನ, ಶಿವಮೊಗ್ಗ. ೨೦೧೬
- ಕಂಬಗಳ ಮರೆಯಲ್ಲಿ, ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು. ೨೦೧೩
- ಪುಟ್ಟ ಪಾದದ ಗುರುತು, ಛಂದ ಪುಸ್ತಕ ಪ್ರಕಾಶನ, ಬೆಂಗಳೂರು. ೨೦೦೫

- ಗಾಂಧಿ ಚಿತ್ರದ ನೋಟು, ಅಕ್ಷರ ಪ್ರಕಾಶನ ಹೆಗ್ಗೋಡು, ಸಾಗರ(ಉ.ಕ.).೨೦೦೮

೧೫. ಸುರೇಶ ಭಟ್ ಬಾಕ್ರಬೈಲ್ (ಅನು), ರಿಚರ್ಡ್ ಎಂ ಈಟನ್, (ಮೂ.ಕೃ.ಲೇ) ಮಂದಿರ ಅಪವಿತ್ರೀಕರಣ ಮತ್ತು ಇಂಡೊ-ಮುಸ್ಲಿಂ ಸಾಮ್ರಾಜ್ಯಗಳು, ಲಡಾಯಿ ಪ್ರಕಾಶನ, ಗದಗ. ೨೦೧೫

೧೬. ಸಿಂಚನಾ ತಂಡ (ಅನು), ಸಾಯಿನಾಥ (ಮೂ.ಕೃ.ಲೇ.), ಅಸಮಾನತೆಯ ಜಾಗತೀಕರಣ, ಮುದ್ರಣ: ಸಿಂಚನಾ ಪ್ರಕಾಶನ ಎಸ್.ಜಿ.ಬಿಲ್ಡಿಂಗ್, ಎಲೆ ಕೊಡಿಗೆಹಳ್ಳಿ, ಬೆಂಗಳೂರು-೨೦೦೧,

೧೭. ಸಿ.ಆರ್.ಭಟ್, ಜಾಗತೀಕರಣದ ಹತ್ತು ವರ್ಷಗಳು - ಭಾರತೀಯ ಅನುಭವ, ಕರ್ನಾಟಕ ಸಮಾಜ ವಿಜ್ಞಾನ ಕೇಂದ್ರ, ಧಾರವಾಡ. ೨೦೦೦

೧೮. ಸೀತಾರಾಂ ಯೆಚೂರಿ

- ಜಾಗತೀಕರಣದ ಸ್ವರೂಪ, ಪಂಡಿತ ಸಾರ್ವಜನಿಕ ಗ್ರಂಥಾಲಯ ಕಟ್ಟಡ ಶಿರಸಿ, ಉತ್ತರ ಕನ್ನಡ, ೨೦೦೨,
- ಹರ್ಕಿಶಸ್‌ಸಿಂಗ್ ಸುರ್ಜಿತ್, ಪ್ರಭಾತ್ ಪಟ್ನಾಯಕ್, ಉತ್ಸಾ ಪಟ್ನಾಯಕ್, ಜಾಗತೀಕರಣದ ಸ್ವರೂಪ, ಅಧ್ಯಯನ ಪ್ರಕಾಶನ, ಶಿರಸಿ (ಉ.ಕ.). ೨೦೦೨

೧೯. ಸುಮಂಗಲಾ

- ಕಾಲಿಟ್ಟಲ್ಲಿ ಕಾಲುದಾರಿ, ಛಂದ ಪುಸ್ತಕ ಪ್ರಕಾಶನ, ಬೆಂಗಳೂರು. ೨೦೦೯
- ಜುಮುರು ಮಳೆ, ಚಂದ ಪುಸ್ತಕ ಪ್ರಕಾಶನ, ಬೆಂಗಳೂರು. ೨೦೦೫
- ಹನ್ನೊಂದನೇ ಅಡ್ಡರಸ್ತೆ, ಛಂದ ಪುಸ್ತಕ ಪ್ರಕಾಶನ, ಬೆಂಗಳೂರು. ೨೦೧೪

೨೦. ಸ್ವಾಮಿ ಪೊನ್ನಾಚಿ, ಧೂಪದ ಮಕ್ಕಳು, ಛಂದ ಪುಸ್ತಕ ಪ್ರಕಾಶನ, ಬೆಂಗಳೂರು. ೨೦೧೮

೨೧. ಎಸ್.ಬಿ.ಜೋಗುರ

- ಇರದೇ ತೋರುವ ಬಗೆ, ರಾಘವೇಂದ್ರ ಪ್ರಕಾಶನ, ಅಂಬಾರಕೊಡ್ಲ, ಅಂಕೋಲಾ(ಉ.ಕ.) ೨೦೧೦
- ನೀನ್ಯಾಕೊ ನಿನ್ನ ಹಂಗ್ಯಾಕೊ, ಸಹಿಷ್ಣು ಪ್ರಕಾಶನ, ಧಾರವಾಡ. ೨೦೧೪

- ಬಣ್ಣದ ಹನಿಗಳು, ಸಹಿಷ್ಣು ಪ್ರಕಾಶನ, ಧಾರವಾಡ. ೨೦೧೫
- ಬೋಳುಗುಡ್ಡದ ಹಳದೀ ಮಣ್ಣು, ಚಿನ್ಮಯಿ ಪ್ರಕಾಶನ, ಬೆಂಗಳೂರು.

೭೨. ಶಾಂತಾ ಇಮ್ರಾಪೂರ (ಪ್ರ.ಸಂ), ಡಾ.ರಾಜೇಂದ್ರ ನಾಯಕ (ಸಂ), ಡಾ.ಜೆ.ಎಂ.ನಾಗಯ್ಯ (ಸಂ), ಜಾಗತಿಕ ಸಂದರ್ಭದಲ್ಲಿ ಸ್ಥಳೀಯ ಸಂಸ್ಕೃತಿಗಳು ಯು.ಜಿ.ಸಿ. ಪ್ರಾಯೋಜಿತ ಯೋಜನೆ (೨೦೧೨-೨೦೧೭), ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೨೦೧೪

೭೩. ಶಾಂತಿ ಕೆ. ಅಪ್ಪಣ್ಣ, ಮನಸು ಅಭಿಸಾರಿಕೆ, ಛಂದ ಪುಸ್ತಕ ಪ್ರಕಾಶನ, ಬೆಂಗಳೂರು. ೨೦೧೬

೭೪. ಶಿವಸುಂದರ್ (ಸಂ), ಖೈರ್ಲಾಂಜಿ-ದಲಿತ ಭಾರತದ ಕಥನ, ಮೂಲ ಕೃತಿ ಲೇ: ಡಾ. ಆನಂದ ತೇಲ್ತುಂಬ್ಡೆ, ಲಂಕೇಶ ಪ್ರಕಾಶನ, ಬೆಂಗಳೂರು. ೨೦೦೯

೭೫. ಶ್ರೀಧರ ಬಳಗಾರ, ಅಮೃತಪಡಿ, ಕನ್ನಡ ಸಂಘ, ಕ್ರೈಸ್ಟ್ ಯೂನಿವರ್ಸಿಟಿ, ಬೆಂಗಳೂರು. ೨೦೧೧

೭೬. ಶ್ರೀನಿವಾಸ ವೈದ್ಯ, ಕಪ್ಪೆ ನುಂಗಿದ ಹುಡುಗ, ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು. ೨೦೧೨

೭೭. ಹೆಬ್ಬಾಲೆ ಕೆ. ನಾಗೇಶ, ಬಹು ಸಂಸ್ಕೃತಿ ಮತ್ತು ದೇಸಿ ಜಾತ್ರೆಗಳ ಮಹಾಸಮನ್ವಯ, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೧೧

೭೮. ಹೊನ್ನ ಕಣಜ, ಪ್ರಜಾವಾಣಿ ದೀಪಾವಳಿ ಕಥಾ ಸ್ಪರ್ಧೆಯಲ್ಲಿ ಬಹುಮಾನ ಪಡೆದ ಸಣ್ಣ ಕಥೆಗಳ ಸಂಕಲನ ಸಂಪುಟ-೧, ಪ್ರಜಾವಾಣಿ ಪ್ರಕಾಶನ, ಬೆಂಗಳೂರು. ೨೦೧೭

೭೯. ಆಧುನಿಕ ಕನ್ನಡ ಸಾಹಿತ್ಯ ರೂಪಗಳು ('ಕರ್ನಾಟಕ ಭಾರತಿ' ಬೆಳ್ಳಿಹಬ್ಬ ಸಂಪುಟ) ಪ್ರಸಾರಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೧೯೯೬

## ಅಧ್ಯಯನ ಪತ್ರಿಕೆ ಮತ್ತು ಜಾಲತಾಣಗಳು (ಇಂಟರ್‌ನೆಟ್ ವೆಬ್‌ಸೈಟ್‌ಗಳು)


೧. ಕೆ.ರಾಧಾಕೃಷ್ಣ (ಸಂ), ಎಸ್.ಯುಸಿಐ ಕರ್ನಾಟಕ ರಾಜ್ಯ ಸಮಿತಿಯ ಮುಖ್ಯಪತ್ರಿಕೆ: ಕಾರ್ಮಿಕ ದೃಷ್ಟಿಕೋನ, ವಿಶೇಷ ಸಂಚಿಕೆ, ಅಕ್ಟೋಬರ-ನವೆಂಬರ, ೨೦೦೧,

೨. ಪ್ರಜಾವಾಣಿ ದಿನಪತ್ರಿಕೆ, ದಿನಾಂಕ:೧೧-೦೧-೨೦೧೮,

೩. ಚಂದ್ರಶೇಖರಪಾಟೀಲ (ಸಂ) ಸಂಕ್ರಮಣ

೪. ಗ್ಲೋಬಲ್ ಲೈಸೇಶನ್ ಈಸ್ ಗ್ರೇಟ್: (http\www.cato. org/past/letters palmer coataletters, pds) ಬೈ ಟಾಮ್ ಜಿ ಸಿನಿಯರ್ ಫೆಲೋ ಕ್ಯಾಟೋ ಇನ್ಸ್‌ಟಿಟ್ಯೂಟ್

5. ಕನ್ನಡ ಭಾಷೆ-ಸಂಸ್ಕೃತಿಯ ಮೇಲೆ ಜಾಗತೀಕರಣದ ಪ್ರಭಾವ!! । ಸಂಪದ, https:\\sampada.net\blog.

6. https:\\kn.wikipedia.org/wiki\ಜಾಗತೀಕರಣ(ಇತಿಹಾಸ) #.E0.B2. 87.E0.B2.A4.E0.B...ಪ್ಯಾರಾ-೬

7. http\www.pbs.org\wgbh\commandingheights\shared\ miniteext\tr_show01.h tml

೮. ಭಾರತೀಯ ಪಂಚವಾರ್ಷಿಕ ಯೋಜನೆಗಳ ವಿಕೀಪಿಡಿಯಾ ವೆಬ್

ಅನುಬಂಧ-೪

## ನಿಘಂಟುಗಳು ಮತ್ತು ವಿಶ್ವಕೋಶಗಳು

೧. ಜಿ.ಎಸ್. ಶಿವರುದ್ರಪ್ಪ ಹಾಗೂ ಕೆ.ವಿ.ನಾರಾಯಾಣ, ಕಾವ್ಯಾರ್ಥ ಪದಕೋಶ, ಕಾಮಧೇನು ಪ್ರಕಾಶನ, ಶೇಷಾದ್ರಿಪುರಂ, ಬೆಂಗಳೂರು.-೧೯೯೯

೨. ಜಿ.ವೆಂಕಟಸುಬ್ಬಯ್ಯ, ಇಗೋ ಕನ್ನಡ, ಸಾಮಾಜಿಕ ನಿಘಂಟು, ನವಕರ್ನಾಟಕ ಪ್ರಕಾಶನ, ಬೆಂಗಳೂರು-೨೦೧೧

೩. ಪಂಡಿತ ಕವಲಿ, ಕಸ್ತೂರೀ ಕೋಶ, ರಾಮಾಶ್ರಯ ಪಬ್ಲಿಕೇಶನ್ಸ್, ಸುಭಾಷ್ ರಸ್ತೆ ಧಾರವಾಡ.-೨೦೦೭

೪. ಕನ್ನಡ ವಿಷಯ ವಿಶ್ವಕೋಶ: ಸಂ.೧೩, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

